|| ಶ್ರೀ ||

ಸಂಯಮಣೀಪುರದ ಹೈಕೋರ್ಟಿನಲ್ಲಿ

ವೇದಾಂತವಿಚಾರಣೆ

# ಸಿವಿಲ್ ಸೂಟ್

೧—೨ ಇಶ್ಯೂ.

ಶ್ರೀಮದ್ವೈದಿಕ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ

ಶ್ರೀಮತ್ಪರಮಹಂಸೇತ್ಯಾದಿಗುಣಗಣಾಲಂಕೃತ

ಶ್ರೀಮದುತ್ತರಾದಿಮಠಾಧೀಶ

ಶ್ರೀ ಶ್ರೀಮತ್ಸತ್ಯಧ್ಯಾನತೀರ್ಥ

ಶ್ರೀಪಾದಂಗಳವರಿಂದ ವಿರಚಿತವಾದದ್ದು

ಪ್ರಕಾಶಕ:—

ಶ್ರೀಮನ್ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಸಭಾ.

ಪದ್ಮಸರೋವರ (ತಿರುಚಾನೂರ).

1935

|| ಶ್ರೀ ||

ಸಂಯಮನೀಪುರದ ಹೈಕೋರ್ಟದಲ್ಲಿ

ವೇದಾಂತವಿಚಾರಣೀ

# ಸಿವಿಲ್ ಸೂಟ್

೧-೨ ಇಸ್ಯು.

ಶ್ರೀಮದ್ವೈದಿಕ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ

ಶ್ರೀಮತ್ಪರಮಹಂಸೇತ್ಯಾದಿಗುಣಗಣಾಲಂಕೃತ

ಶ್ರೀಮದುತ್ತರಾದಿಮಠಾಧೀಶ

**ಶ್ರೀ ಶ್ರೀಮತ್ಸತ್ಯಧ್ಯಾನತೀರ್ಥ**

ಶ್ರೀಪಾದಂಗಳವರಿಂದ ವಿರಚಿತವಾದದ್ದು

---

ಪ್ರಕಾಶಕಃ—

ಶ್ರೀಮನ್ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಸಭಾ.

ಪದ್ಮಸರೋವರ ( ತಿರುಚಾನೂರ ).

1935.



Printed at Shri Ramtatva Prakash Printing Press,
Ganapatgalli, Belgaum, by its Manager
B. V. Amapur.

Published by the Secretary S M. S A Sabha
at Chiratanur ( Tirupati )

# ಉಪೋದ್ಘಾತವು.



" ಸುಖಮೇವ ಚ ಮೇ ಸ್ಯಾತ್ ದುಃಖಂ ಮನಾಗಪಿ ಮಾ ಭೂತ್ " ಈ ಉಕ್ತಿಗನುಸರಿಸಿ ನನಗೆ ಸುಖವೇ ಆಗಬೇಕು, ದುಃಖವು ಸ್ವಲ್ಪವಾದರೂ ಆಗ ಬಾರದು, ಹೀಗೆ ಪ್ರಾಣಿಮಾತ್ರರಿಂದ ಅಪೇಕ್ಷಿತವಾದ ಸುಖವು ಮೋಕ್ಷದಲ್ಲಿ ಮಾತ್ರ ಸಿಗುವದು ಮೋಕ್ಷವೆಂದರೆ " ಮುಚ್ಲೃ=ಮೋಕ್ಷಣೇ " ಎಂಬ ಧಾತ್ವರ್ಥಕನುಸರಿಸಿ, ಪ್ರಕೃತಿ ಬಂಧದದೆಶೆಯಿಂದ ಮುಕ್ತನಾಗುವದು. ಆ ಪ್ರಕೃತಿ ಬಂಧವು " ದ್ರವ್ಯಂ ಕರ್ಮ ಚ ಕಾಲಶ್ಚ " ಇತ್ಯಾದಿ ಪ್ರಮಾಣಾನುಸಾರವಾಗಿ ಪರಮಾತ್ಮನ ಅಧಿನವಾಗಿದೆ ಪ್ರಕೃತಿಬಂಧದ ನಿವೃತ್ತಿಯು " ನ ಋತೆ ತ್ವತ್ಕ್ರಿಯತೇ ಕಿಂ ಚನಾರೇ " " ಯಮೇವೈಷ ವೃಣುತೇ ತೇನ ಲಭ್ಯ " " ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ" ಇತ್ಯಾದಿ ಪ್ರಮಾಣಗಳಾನುಸಾರ ಪರಮಾತ್ಮನ ಅನುಗ್ರಹ( ಪ್ರೀತಿ ) ದಿಂದಲೇ ಆಗತಕ್ಕದ್ದು ಇತರ ದೇವತೆಗಳಿಂದ ಆಗಲು ಶಕ್ಯವಿಲ್ಲ. " ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ " ಇತ್ಯಾದ ಪ್ರಮಾಣಾನುಸಾರ ಪರಮಾತ್ಮನ ಅಪರೋಕ್ಷ ಜ್ಞಾನದಿಂದಲೇ ಆ ಪರಮಾತ್ಮನ ಅನುಗ್ರಹವು ಆಗತಕ್ಕದ್ದು ಅಪರೋಕ್ಷ ಜ್ಞಾನವೆಂದರೆ " ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ | ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ " " ಸಹಸ್ರಶೀರ್ಷಾಃ ಪುರುಷ. " ' ಉತಾಮೃತತ್ವಸ್ಯೇಶಾನಃ ' " ತಮೇವಂ ವಿದ್ವಾನಮೃತ ಇಹ ಭವತಿ " ಇತ್ಯಾದಿ ಶ್ರುತ್ಯುಕ್ತರೀತಿಯಿಂದ ಜ್ಞಾನಾನಂದಾದಿ ದಿವ್ಯ ಮಂಗಲ ದೇಹವುಳ್ಳ ಮುಕ್ತಾಮುಕ್ತಾದಿ ಪ್ರಪಂಚ ನಿಯಾಮಕನಾದ ಜಗಜ್ಜನ್ಮಾದಿಕರ್ತೃನಾದ, ಸರ್ವಸ್ವಾಮಿಯಾದ, ಚತುರ್ಮುಖನಿಗೆ ಕಾರಣನಾದ ಮತ್ತು ಪೂರ್ಣನಾದ ಭಗವಂತನ ಪ್ರತ್ಯಕ್ಷವು ಈ ಜ್ಞಾನಕ್ಕೆ ವಿರುದ್ಧವಾದ ನಾನೇ ( ಜೀವನೇ ) ಬ್ರಹ್ಮನೆಂಬುವ ಜ್ಞಾನವು ಅಥವಾ ಬ್ರಹ್ಮನು ನಿರ್ಗುಣನು ಎಂಬುವ ಜ್ಞಾನವು ಮೋಕ್ಷ ಸಾಧನವಾದ ಜ್ಞಾನವಲ್ಲ ಪರಮಾತ್ಮನ ಅಪರೋಕ್ಷ ಜ್ಞಾನ ( ಅಂದರೆ ಆತನ ಪ್ರತ್ಯಕ್ಷವು ) " ಆತ್ಮಾ ವಾರೇ ದ್ರಷ್ಟವ್ಯ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ " ಇತ್ಯಾದಿ ಪ್ರಮಾಣಾನುಸಾರವಾಗಿ ಮೇಲೆ ಹೇಳಿದ ಜ್ಞಾನಾನಂದಾದಿಗುಣಪೂರ್ಣನಾಗಿರುವ ಪರಮಾತ್ಮನ ಆದರಪೂರ್ವಕ ನಿರಂತರ ಧ್ಯಾನದಿಂದಲೇ ಆಗತಕ್ಕದ್ದು. ಧ್ಯಾನ ಮಾಡುವದಕ್ಕೆ ಮೊದಲು " ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ|| ಸಮಾಧಾವಚಲಾ ಬುದ್ಧಿ ತದಾ ಯೋಗಮವಾಪ್ಸ್ಯಸಿ || " ಎಂದು ಗೀತೆಯಲ್ಲಿ ಹೇಳಿದ ಪ್ರಕಾರ ತತ್ವನಿಶ್ಚಯವು ಅವಶ್ಯಕವಾದುದು "ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ|| ಇಲ್ಲಿ ಹೇಳಿದ ಪ್ರಕಾರ ಪ್ರಾಣಿಗಳ ಉದ್ಧಾರಾರ್ಥ ಪ್ರವೃತ್ತವಾದ ವೇದವೇ ತತ್ವಗಳನ್ನು ಯಥಾಸ್ಥಿತವಾಗಿ ತಿಳಿಸಿಕೊಡತಕ್ಕದ್ದಾಗಿದೆ.

ಹೀಗಿರಲು ಪೂರ್ವಕಾಲದಲ್ಲಿ ಅನೇಕ ದುರ್ವಾದಿಗಳು ವೇದಗಳಿಗೆ ದುಷ್ಟ ವ್ಯಾಖ್ಯಾನಗಳನ್ನು ಮಾಡಿದರಿಂದ ದೈವ ಸ್ವಭಾವವುಳ್ಳ ಜನರು ಶ್ರುತ್ಯರ್ಥ ವಿಷಯದಲ್ಲಿ ಸಂಶಯಗ್ರಸ್ತರಾಗಿ ಕಷ್ಟ ಪಡುತ್ತಿರಲು ಅಂತಹ ಜನರಿಗೆ ವೇದಗಳ ನಿರ್ಣಯಾತ್ಮಕವಾದ ಅರ್ಥವನ್ನು ತಿಳಿಸುವದಕ್ಕಾಗಿ ಶ್ರೀವ ತ್ ಬಾದರಾಯಣ ದೇವರು ಬ್ರಹ್ಮಸೂತ್ರ, ಗೀತಾ ಮುಂತಾದ ಗ್ರಂಥಗಳನ್ನು ಮಾಡಿದರು ಹಾಗೆ ಮಾಡಿ ದುಷ್ಟಮತಗಳಾದ ಭೌದ್ಧಾದಿ ಮತಗಳನ್ನು ಖಂಡಿಸಿ ಸಜ್ಜನರಿಗೆ ವೇದಗಳಲ್ಲಿಯು ತತ್ವಜ್ಞಾನವುಂಟಾಗುವಂತೆ ಮಾಡಿದರು. ಮುಂದೆ ಕಾಲಾಂತರದಲ್ಲಿ

"ಮಚ್ಛಕ್ತ್ಯಾವೇಶಿತೈರ್ವಿಪ್ರೈ ಪ್ರೋಕ್ತಾನಿ ಚ ತತ ಶೃಣು । ಮಾಯಾವಾದ ಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೇ॥ ಮಯೈವ ಕಥಿತಂ ದೇವಿ ಕಲೌ ಬ್ರಾಹ್ಮಣರೂಪಿಣಾ । ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯನ್ ಲೋಕಗರ್ಹಿತಂ॥ ಸ್ವಕರ್ಮರೂಪಸತ್ಯಾಜ್ಯತ್ವಮತ್ರೈವ ಪ್ರತಿಪಾದ್ಯತೇ। ಸರ್ವಕರ್ಮಪರಿಭ್ರಷ್ಟೈ ರ್ವೈಧರ್ಮ್ಯತ್ವಂ ತದುಚ್ಯತೇ ॥ ಪರೇಶಜೀವಯೋರೈಕ್ಯಂ ಮಯಾತ್ರ ಪ್ರತಿಪಾದ್ಯತೇ। ಬ್ರಹ್ಮಣೋಸ್ಯ ಸ್ವಯಂ ರೂಪಂ ನಿರ್ಗುಣಂ ವಕ್ಷ್ಯತೇ ಮಯಾ ॥ ಸರ್ವಸ್ಯ ಜಗತೋऽಪ್ಯತ್ರ ಮೋಹನಾರ್ಥಂ ಕಲೌ ಯುಗೇ ॥ ವೇದಾರ್ಥವನ್ಮಹಾಶಾಸ್ತ್ರಂ ಮಾಯಯಾ ಯದವೈದಿಕಂ ( ಮಾಯಾವಾದಮವೈದಿಕಂ )॥ಮಯೈವ ಕಥಿತಂ ದೇವಿ ಜಗತಾಂ ನಾಶಕಾರಣಾತ್ ॥ ಭಸ್ಮಾಸ್ಥಿಧಾರಿಣಃ ಸರ್ವೇ ಭವಿಷ್ಯಂತಿ ಹ್ಯಚೇತಸಃ । ಮತಮೇತದವಷ್ಟಭ್ಯ ಪತಂತ್ಯೇವ ನ ಸಂಶಯಃ ॥

ಪದ್ಮ ಮೊದಲಾದ ಪುರಾಣಗಳಲ್ಲಿ ಹೇಳಿದ ಪ್ರಕಾರ ರುದ್ರದೇವರು ಬ್ರಾಹ್ಮಣನಲ್ಲಿ ಪ್ರವೇಶ ಮಾಡಿ ಅವೈದಿಕವಾದ ಬೌದ್ಧ ಮತಕ್ಕೆ ವೈದಿಕ ವೇಷವನ್ನು ಹಾಕಿ ಬೌದ್ಧರ ಶೂನ್ಯ ಮತ್ತು ವಿಜ್ಞಾನತತ್ವಕ್ಕೇವೇ ಬ್ರಹ್ಮ ಎಂಬ ಹೆಸರಿಟ್ಟು ಶೂನ್ಯ= ವಿಜ್ಞಾನ=ಬ್ರಹ್ಮ ಒಂದೇ ತತ್ವವಿದ್ದು ತದಿತರ ಸರ್ವ ಜಗತ್ತು ಆ ತತ್ವದಲ್ಲಿಯೇ ಕಲ್ಪಿತವಾಗಿರುವದು ( ಮಿಥ್ಯಾ=ಕಾಲತ್ರಯದಲ್ಲಿಯು ಇಲ್ಲದಿರುವದು ) ಎಂದು ಪ್ರತಿಪಾದನ ಮಾಡುವ ಮತಕ್ಕೆ ಮಾಯಾವಾದ ( ಅದ್ವೈತ ) ಮತವೆಂದು ಹೆಸರಿಟ್ಟರು. ಶ್ರುತಿ, ಸೂತ್ರ, ಗೀತಾ, ಪ್ರತ್ಯಕ್ಷ ಅನುಮಾನಾದಿಗಳಿಂದ ತಿಳಿದು ಬರುವ ಜಗತ್ತಿನ ಸತ್ಯತ್ವವು ವ್ಯಾವಹಾರಿಕವಾಗಿದ ( ಸುಳ್ಳು ಅದೆ ) "ಅಹಂ ಶೂನ್ಯಂ ಅಹಂ ಶೂನ್ಯಂ ಅಹಂ ಬ್ರಹ್ಮ ಅಹಂ ಬ್ರಹ್ಮ " ಈ ರೀತಿಯಾಗಿ ಉಪಾಸನೆಯನ್ನು ಮಾಡಿ ಆ ಶೂನ್ಯ—ವಿಜ್ಞಾನ—ಬ್ರಹ್ಮಭಾವವನ್ನು ಹೊಂದುವದೇ ಮೋಕ್ಷವು ಎಂಬುವ ಮತವನ್ನು ಲೋಕದಲ್ಲಿ ಪ್ರಚಾರ ಮಾಡಿದರು

ಹೀಗೆ ಅವೈದಿಕವಾದ ಬೌದ್ಧಮತವೇ ಮಾಯಾವಾದ ಅಥವಾ ಅದ್ವೈತಮತವೆಂಬ ಹೆಸರಿನಿಂದ ಸರ್ವತ್ರದಲ್ಲಿಯೂ ಹಬ್ಬಿತು ಆ ನಂತರ ಸಜ್ಜನರ ಉದ್ಧಾರಾರ್ಥವಾಗಿ ಪರಮಾತ್ಮನ ಆಜ್ಞೆಯಿಂದ " ವಿದ್ವಾನ್ಮಧ್ವ ಉಚ್ಚಭಾರಾದ್ವಶೀಕಂ " "ಮಧ್ವೋ ವೋ ನಾಮ ಮಾರುತಂ ಯಜತ್ರ " ಇತ್ಯಾದಿ ಶ್ರುತಿಗಳಲ್ಲಿ ಹೇಳಿದ ಪ್ರಕಾರವಾಗಿ ಶ್ರೀ ವಾಯುದೇವರ ಅವತಾರರಾದ ಶ್ರೀಮನ್ಮಧ್ವಾಚಾರ್ಯರ

ಶ್ರೀಮದ್ಗೀತಾಭಾಷ್ಯಾದಿ ಅನೇಕ ಗ್ರಂಥಗಳನ್ನು ರಚಿಸಿ ಮಾಯಾವಾದವೇ ಮೊದಲಾದ ಅನೇಕ ದುರ್ಮತಗಳ ಖಂಡನ ಮಾಡಿದರು ಮತ್ತು ಅವರ ಸಾಕ್ಷಾತ್ ಶಿಷ್ಯರಾದ ಶ್ರೀಪದ್ಮನಾಭತೀರ್ಥರು, ನರಹರಿತೀರ್ಥರು ತ್ರಿವಿಕ್ರಮಪಂಡಿತಾಚಾರ್ಯ ಮುಂತಾದವರು ಅವರ ಗ್ರಂಥಗಳಿಗೆ ವ್ಯಾಖ್ಯಾನ ಮಾಡಿದರು ಆ ಮೇಲೆ ಶ್ರೀಮಜ್ಜಯತೀರ್ಥರು ಶ್ರೀಮದಾಚಾರ್ಯರ ಗ್ರಂಥಗಳಲ್ಲಿ ಅದ್ವೈತಾದಿ ಸಕಲ ದುಷ್ಟಮತಗಳ ನಿರಸನ ಮಾಡಿದ ಉತ್ತಮಗ್ರಂಥವಾದ ಅನುವ್ಯಾಖ್ಯಾನಕ್ಕೆ ಅತಿಶಯ ಪ್ರೌಢವಾದ ವ್ಯಾಖ್ಯಾನವನ್ನು ಮಾಡಿದರು ಅದೇ ಶ್ರೀಮನ್ನ್ಯಾಯಸುಧೆ ಅದರಂತೆ ಮಾಯಾವಾದ ಖಂಡನವೆಂಬ ಗ್ರಂಥ, ಪ್ರಪಂಚ ಮಿಥ್ಯಾತ್ವಾನುಮಾನ ಖಂಡನ, ಉಪಾಧಿಖಂಡನ, ಮೊದಲಾದ ಶ್ರೀಮದಾಚಾರ್ಯರ ಗ್ರಂಥಗಳಿಗೆ ವ್ಯಾಖ್ಯಾನಗಳನ್ನು ಮಾಡಿ ವೇದಾದಿ ಶಾಸ್ತ್ರಗಳ ಯಥಾರ್ಥವನ್ನು ಅಧಿಕಾರಿಗಳಿಗೆ ಅರುಹಿದರು. ಆ ಮೇಲೆ ಶ್ರೀ ಸುಧಾದಿ ಗ್ರಂಥಗಳ ಸಾರವನ್ನು ತೆಗೆದುಕೊಂಡು ಶ್ರೀಮದ್ವ್ಯಾಸರಾಜರು ಶ್ರೀಮನ್ನ್ಯಾಯಾಮೃತ, ಚಂದ್ರಿಕಾ, ಮೊದಲಾದ ಗ್ರಂಥಗಳನ್ನು ರಚಿಸಿದರು ಮಧುಸೂದನ ಸರಸ್ವತಿಯವರು ನ್ಯಾಯಾಮೃತ ಗ್ರಂಥದ ಪೂರ್ವೋತ್ತರವಾಕ್ಯಗಳನ್ನು ನೋಡದಲೆ ದೂಷಣಾಭಾಸಗಳನ್ನು ತೋರಿಸಿ ನ್ಯಾಯಾಮೃತ ಗ್ರಂಥದ ಖಂಡನವೆಂಬ ಹೆಸರಿನ 'ಅದ್ವೈತಸಿದ್ಧಿ' ಗ್ರಂಥವನ್ನು ರಚಿಸಿದರು ನ್ಯಾಯಾಮೃತ ಗ್ರಂಥದ ಪೂರ್ವೋತ್ತರ ವಾಕ್ಯಗಳ ಪರಿಶೀಲನ ಮಾಡಿದರಿಂದಲೇ ಅದ್ವೈತಸಿದ್ಧಿಯಲ್ಲಿ ತೋರಿಸಿದ ದೂಷಣಗಳ ನಿರಸನೆಯಾಗುವದರಿಂದ ಅವು ನಿಜವಾದ ದೂಷಣಗಳಲ್ಲ ಕಿಂತು ದೂಷಣಾಭಾಸಗಳೆಂದು ತೋರಿಸುವ ತರಂಗಿಣಿಯೆಂಬ ಗ್ರಂಥವನ್ನು ಶ್ರೀರಾಮಾಚಾರ್ಯರು ಮಾಡಿದರು ಅದರಂತೆ ಪಾಂಡುರಂಗಿ ಆನಂದಾಚಾರ್ಯರು ಕಂಟಕೋದ್ಧಾರವೆಂಬ ಗ್ರಂಥವನ್ನು ಮತ್ತು ಕೆಲವರು ಮಾಧುರಿ ಮೊದಲಾದ ಗ್ರಂಥಗಳನ್ನು ರಚಿಸಿ ಅದ್ವೈತ ಸಿದ್ಧಿಯ ಖಂಡನವನ್ನು ಮಾಡಿದರು ಅದೇ ಕಾಲದಲ್ಲಿ ಬ್ರಹ್ಮಸೂತ್ರದ ಐದು ಅಧಿಕರಣಗಳ ಭಾಷ್ಯದ ಖಂಡನಾಭಾಸವಾಗಿರುವ "ಪಂಚಾಧಿಕರಣೀ" ಎಂಬ ಗ್ರಂಥವನ್ನು ಅದ್ವೈತಮತಸ್ಥರಾದ ಅಪ್ಪಯ್ಯದೀಕ್ಷಿತರು ಬರಿದರು ಆನಂತರ ಶ್ರೀವಿಜಯೀಂದ್ರ ಸ್ವಾಮಿಗಳು ಕಂಟಕೋದ್ಧಾರವೆಂಬ ಗ್ರಂಥವನ್ನು, ಶ್ರೀಮದುತ್ತರಾದಿ ಮಠದ ಪೀಠಸ್ಥರಾದ ಶ್ರೀಸತ್ಯನಾಥ ಶ್ರೀಗಳವರು ಅಭಿನವಗದಾ, ಧೂಲ್ಯುದ್ಧಾರ ಮೊದಲಾದ ಗ್ರಂಥಗಳನ್ನು ಬರಿದು ಅಪ್ಪಯ್ಯ ದೀಕ್ಷಿತರು ಬರಿದ "ಪಂಚಾಧಿಕರಣೀಯೆಂಬ ಗ್ರಂಥದ ಖಂಡನವನ್ನು ಮಾಡಿದರು. ತರಂಗಿಣೀ ಗ್ರಂಥದ ಖಂಡನವೆಂದು ಹೇಳಲ್ಪಡುವ "ಬ್ರಹ್ಮಾನಂದೀಯ ಚಂದ್ರಿಕಾ" ಎಂಬುವ ಗ್ರಂಥವು ಪ್ರಕಟವಾಗಲು ಅದನ್ನು ಖಂಡಿಸುವದಕ್ಕಾಗಿ ಆಗಿನ ಕಾಲದ ಆಚಾರ್ಯರು "ವನಮಾಲಿಮಿಶ್ರ" "ನ್ಯಾಯಾಮೃತಸೌರಭ" "ದ್ವೈತದ್ಯುಮಣಿ" ಮೊದಲಾದ ಗ್ರಂಥಗಳನ್ನು ರಚಿಸಿ ಬ್ರಹ್ಮಾನಂದೀಯ ಗ್ರಂಥದ ಖಂಡನ ಮಾಡಿದರು ಈ ಪ್ರಕಾರ ಅನೇಕ ಗ್ರಂಥಗಳನ್ನು ಬರಿದು ಶ್ರುತಿಗಳ ಯಥಾಸ್ಥಿತ ಅರ್ಥವನ್ನು ಸಕಲ ಸಜ್ಜನರಿಗೆ ತಿಳಿಸಿ

ಕೊಟ್ಟರು. ಹೀಗಿದ್ದರೂ ಮೇಲೆ ಹೇಳಿದ ಯಾವತ್ತು ಗ್ರಂಥಗಳು ಪ್ರೌಢವಾದ ಸಂಸ್ಕೃತ ಭಾಷೆಯಲ್ಲಿ ಬರಿಯಲ್ಪಟ್ಟಿರುವದರಿಂದ ಆ ಗ್ರಂಥಗಳ ಸಾರವು ಕಾಲಾನುಸಾರವಾಗಿಯೂ ಇತರ ಕಾರಣಗಳಿಂದಲೂ ಅನ್ಯ ಭಾಷೆಯಲ್ಲಿ ಪಂಡಿತರಾಗಿ ಗ್ರಂಥಗಳ ಪರಿಶೀಲನ ಮಾಡಲು ಸಮರ್ಥರಾಗಿರುವವರಿಗೆ ಹಾಗೂ ಸಂಸ್ಕೃತ ಭಾಷೆಯ ಅಲ್ಪ ಪರಿಚಯವುಳ್ಳವರಿಗೆ ತಿಳಿಯಲಾರದಾಯಿತು ಆದುದರಿಂದ ಮೇಲೆ ಹೇಳಿದ ಗ್ರಂಥಗಳಲ್ಲಿ ವರ್ಣಿಸಿದ ಶಾಸ್ತ್ರಾರ್ಥವು ಸುಲಭವಾಗಿ ತಿಳಿಯುವಂತೆ ಅಂದರೆ ಸಂಶಯ ವಿಪರೀತ ಜ್ಞಾನವು ಪರಿಹಾರವಾಗಿ ಯಥಾಸ್ಥಿತವಾಗಿ ತಿಳಿಯುವಂತೆ ಮಾಡಿ ಉದ್ಧಾರ ಮಾಡಬೇಕೆಂದು ಜನರು ಪ್ರಾರ್ಥನೆ ಮಾಡಿಕೊಂಡರು. ಆಗ್ಗೆ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತ ಶ್ರೀಮದ್ದ್ವೈತ ಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಶ್ರೀ ೧೦೮ ಶ್ರೀಸತ್ಯಧ್ಯಾನತೀರ್ಥ ಶ್ರೀಪಾದಂಗಳವರು ಶ್ರುತಿ, ಸೂತ್ರ, ಗೀತಾ, ಶ್ರೀಮನ್ನ್ಯಾಯಸುಧಾ, ನ್ಯಾಯಾಮೃತಾದಿ ಗ್ರಂಥಗಳ ಅಭಿಪ್ರಾಯವು ಸಜ್ಜನರಿಗೆ ಸುಲಭವಾಗಿ ತಿಳಿಯುವಂತೆ ಸರಳ ಸಂಸ್ಕೃತ ಭಾಷೆಯಲ್ಲಿ ಗ್ರಂಥಗಳನ್ನು ಬರೆದು ಅವುಗಳನ್ನು ಆಯಾ ದೇಶಭಾಷೆಗಳಲ್ಲಿ ಬರಿಸಿ ಶ್ರೀಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಸಭೆಯಿಂದ ಪ್ರಸಿದ್ಧ ಮಾಡಿಸಿದ್ದಾರೆ.

ಮೇಲೆ ಹೇಳಿದ ಸುಧಾದಿ ಗ್ರಂಥಗಳಲ್ಲಿ ಮಾಡಿದ ದುರ್ಮತಖಂಡನವು ಅಶೇಷ ಲೌಕಿಕ ವೈದಿಕ ಸಜ್ಜನರಿಗೆ ಸುಲಭ ರೀತಿಯಿಂದ ತಿಳಿಸಬೇಕಾಗಿ ಕೋರ್ಟಗಳಲ್ಲಿ ಕೆಲಸ ನಡಿಸುವ ರೀತಿಯಿಂದ ಎಂದರ ವಾದಿಯ ಅರ್ಜಿ, ಪ್ರತಿವಾದಿಯ ಸ್ಟೇಟಮೆಂಟ ನೋಡಿ, ವಾದಗ್ರಸ್ತವಿಷಯ ಗೊತ್ತುಮಾಡುವದು, ಅನಂತರ ವಾದಿಯ ವಿಚಾರಣೆ, ಪ್ರತಿವಾದಿಯ ವಿಚಾರಣೆ, ಸಾಕ್ಷಿದಾರರ ವಿಚಾರಣೆ ಅವರವರು ತೋರಿಸಿದ ಆಧಾರಗಳ ವಿಚಾರ ಈ ಪ್ರಕಾರ ವಿಚಾರ ಮಾಡಿ ವಾದಿಯ ಹಾಗೂ ಪ್ರತಿವಾದಿಯ ತರ್ಫೆನಿಂದ ಅರ್ಗ್ಯುಮೆಂಟ ಕೇಳಿಕೊಂಡು ನಿರ್ಣಯ ( ಜಜ್ಜಮೆಂಟ ) ಮಾಡುವ ರೀತಿಯಂತೆ ಈ ಪುಸ್ತಕವು ಬರಿಯುವದರಲ್ಲಿ ಬಂದಿರುತ್ತದೆ. ಇದರಲ್ಲಿ ದ್ವೈತಮತದ ತತ್ವಗಳು ನಿಜವಾದವುಗಳೆಂದು ಹೇಳುವ ದ್ವೈತಿಯು ವಾದಿಯು, ಆತನು ಮಾಡಿದ ಅರ್ಜಿಯು (ದಾವೇದ ಅರ್ಜಿ), ಅದ್ವೈತ ಮತಾನುಯಾಯಿಯು ಪ್ರತಿವಾದಿಯು, ಅವನ ಹೇಳಿಕಯು ( ಸ್ಟೇಟಮೆಂಟ ) ಅವುಗಳಿಂದ ನಿಷ್ಪನ್ನವಾಗುವ ವಾದದ ವಿಷಯಗಳು ( ಇಸ್ಸ್ಯು ) ಅವುಗಳ ಮೇಲೆ ತನ್ನ ಮತದ ಸಮರ್ಥನಕ್ಕಾಗಿ ವಾದಿಯು ತೋರಿಸುವ ಆಧಾರ ( ಪ್ರಮಾಣ ) ಗಳನ್ನು ವಿಚಾರಿಸಿ ನಂತರ ಪ್ರತಿವಾದಿಯು ಹೇಳುವ ಆಕ್ಷೇಪಗಳನ್ನು ಕೇಳಿ ಅವನು ತೋರಿಸಿದ ಆಧಾರಗಳನ್ನು ವಿಚಾರಿಸಿ ವಾದಿ ಪ್ರತಿವಾದಿಗಳ ವಿಚಾರಣೆ ಅವರ ಸಾಕ್ಷಿಗಳ ವಿಚಾರಣೆ ಮಾಡಿ ಉಭಯ ಪಕ್ಷದವರ ಪತಿಯಿಂದ ಸಮಾರೋಪ (ಅರ್ಗ್ಯುಮೆಂಟ) ವನ್ನು ಕೇಳಿಕೊಂಡು ನಿರ್ಣಯ (ಜಜ್ಜಮಂಟ) ಬರದು ಹೇಳಿ ದ್ವೈತಾದ್ವೈತ ವಿಷಯಗಳ ನಿರ್ಣಯ ( ಡಿಕ್ರಿ ) ಮಾಡುವದರಲ್ಲಿ ಬಂದಿದ್ದು ಇದಕ್ಕೆ ವೇದಾಂತ ವಿಚಾರಿಣೀ ಸಿವಿಲಸೂಟ ಎಂದು ಹೆಸರಿಟ್ಟದೆ ಇದನ್ನು ಆಯಾ ದೇಶಭಾಷೆಗಳಲ್ಲಿ ಭಾಷಾಂ

ತರ ಮಾಡಿಸಿ ಮುದ್ರಿಸಿ ಪ್ರಸಿದ್ಧ ಮಾಡುವದರಲ್ಲಿ ಬಂದಿದೆ ಈ ಗ್ರಂಥದ ಪುಸ್ತಕಗಳು ನಾಲ್ಕು ಇದ್ದು ೧ ನೇ ಪುಸ್ತಕವೆಂದರೆ ೨ ನೇ ವಾದಗ್ರಸ್ತ ವಿಷಯವಾದ ಜಗತ್ತಿನ ಸತ್ಯತ್ವವನ್ನು ವಿಚಾರ ಮಾಡಿ ಜಗತ್ತು ಹಾಗೂ ಸ್ವಪ್ನಸೃಷ್ಟಿಯು ಸತ್ಯವೆಂದು ನಿರ್ಣಯ ಮಾಡಿದೆ ೨ ನೇ ಪುಸ್ತಕದಲ್ಲಿ ೩ ನೇ ವಾದಗ್ರಸ್ತ ವಿಷಯದ ನಿರ್ಣಯ ಮಾಡಿ ಪರಮಾತ್ಮನು ಗುಣಪೂರ್ಣನಿದ್ದರಿಂದ ಜೀವಗಳಿಂದ ಅತ್ಯಂತ ಭಿನ್ನನು ಎಂದು ನಿರ್ಣಯ ಮಾಡಿದೆ ೩ ನೇ ಪುಸ್ತಕದಲ್ಲಿ ೪ ನೇ ವಾದಗ್ರಸ್ತ ವಿಷಯದ ವಿಚಾರವಾಗಿ ಪರಮಾತ್ಮನು ಅನಂತ ಕಲ್ಯಾಣಗುಣಪೂರ್ಣನು, ಜಗತ್ಕರ್ತನೂ ಎಂದು ಹಾಗೂ ೪ ನೇ ಪುಸ್ತಕದಲ್ಲಿ ೫ ನೇ ವಾದಗ್ರಸ್ತ ವಿಷಯದ ವಿಚಾರ ಮಾಡಿ ಅದ್ವೈತ ಮತವು ಬೌದ್ಧ ಮತವೇ ಹೊರತು ವೈದಿಕ ಮತವಲ್ಲವೆಂದು ನಿರ್ಣಯ ಮಾಡುವದರಲ್ಲಿ ಬಂದಿದೆ

ಪಂಡಿತಶಿರೋಮಣಿ — ಪಾಂಡುರಂಗಿ ಕೃಷ್ಣಾಚಾರ್ಯ



# ವಿಷಯ ಸೂಚಿಕೆ


| ವಿಷಯ | ಪೃಷ್ಠ. |
|---|---|
| ಜಜ್ಜಮೆಂಟ . . ... | ೧-೩೯ |
| ಡಿಕ್ರಿ .... .. | ೩೫ |
| ದಾವೇದ ಅರ್ಜಿ ( ಅಸಲ ಅರ್ಜಿ ) | ೩೭ |
| ಪ್ರತಿವಾದಿಯ ಸ್ಟೇಟಮೆಂಟ ( ಕೈಫಿಯತ ) | ೪೦ |
| ವಾದಗ್ರಸ್ತ ವಿಷಯಗಳು ( ಇಸ್ಯು ) | ೯೧ |
| ರೇಸಜ್ಯುಡಿಕೇಟದ ವಿಚಾರಣೆ . ... | ೪೧ |
| ,, ಬಗ್ಗೆ ಕೋರ್ಟಿನ ಆರ್ಡರ ... | ೪೨ |
| ವಾದಿಯ ವಿಚಾರಣೆ ( ಸಾಕ್ಷಿ ) | ೪೩ |
| ,, ಕ್ರಾಸ ಏಕ್ಝಾಮಿನೇಶನ್ .. . | ೪೬ |
| ಪ್ರತಿವಾದಿಯ ವಿಚಾರಣೆ ( ಸಾಕ್ಷಿ ) .. . | ೪೭ |
| ,, ಸಾಕ್ಷಿದಾರ ಸುಬ್ರಹ್ಮಣ್ಯಶಾಸ್ತ್ರಿಯು ವಿಚಾರಣೆ | ೫೯ |
| ಆರಂಭಣ ಶಬ್ದಾದಿಭ್ಯಃ ಎಂಬೀ ಹೇತುವಾಕ್ಯದ ವಿಚಾರಣೆ | ೫೪ |
| ವಾಚಾರಂಭಣ ಶ್ರುತ್ಯರ್ಥ ವಿಚಾರ .. . | ೫೯ |
| ಐತದಾತ್ಮ್ಯಮಿದಂ ಸರ್ವಂ ಈ ಶ್ರುತಿಯ ವಿಚಾರಣೆ | ೬೧ |
| ಇದಂ ಸರ್ವಂ ಯದಯಮಾತ್ಮಾ ಈ ಶ್ರುತಿಯ ವಿಚಾರಣೆ . | ೬ |
| ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ ಎಂಬ ಶ್ರುತಿಯ ವಿಚಾರಣೆ | ೬೬ |
| ಆತ್ಮೈವೇದಂ ಸರ್ವಂ ಈ ಶ್ರುತಿಯ ವಿಚಾರಣೆ . | ೭೩ |
| ನೇಹ ನಾನಾಸ್ತಿ ಕಿಂಚನ ಈ ಶ್ರುತಿಯ ವಿಚಾರಣೆ .. | ೭೬ |
| ಯತ್ರ ಹಿ ದ್ವೈತಮಿವ ಭವತಿ ,, ... | ೮೭ |
| ನೇತಿ ನೇತಿ ,, | ೧೦೧ |
| ಭ್ರಮದ ( ಆಭಾಸದ ) ವಿಚಾರ ... | ೧೧ |
| ಸರ್ವಂ ಖಲ್ವಿದಂ ಶ್ರುತಿಯ ವಿಚಾರಣೆ ... | ೧೧೧ |
| ಸ್ವಾಪ್ನ ಪದಾರ್ಥಗಳ ವಿಚಾರಣೆ. | |
| ಇದರಲ್ಲಿ ಪ್ರತಿವಾದಿಯ ಸಾಕ್ಷಿದಾರನ ವಿಚಾರಣೆ . . | ೧೩ |
| ವಾದಿಯ ವಕೀಲರ ಆರ್ಗ್ಯುಮೆಂಟ ... | ೧೪ |
| ಪ್ರತಿವಾದಿಯ ,, ,, .. | ೧೪ |
| ವಾದಿಯ ವಕೀಲರ ರೀ ಆರ್ಗ್ಯುಮೆಂಟ ... | ೧೪ |
| ಭ್ರಮದ ವಿಷಯದಲ್ಲಿ ವಾದಿಯ ವಕೀಲರ ಆರ್ಗ್ಯುಮೆಂಟ .. | ೧೫ |
| ,, ಪ್ರತಿವಾದಿಯ ,, .. | ೧೫ |
| ,, ವಾದಿಯ ವಕೀಲರ ರೀ ಆರ್ಗ್ಯುಮೆಂಟ | ೧೬ |
| ಸ್ವಾಪ್ನ ಪದಾರ್ಥಗಳ ವಿಷಯವಾಗಿ ವಾದಿಯ ವಕೀಲರ ಆರ್ಗ್ಯುಮೆಂಟ | ೧೬ |
| ,, ,, ,, ಪ್ರತಿವಾದಿಯ ,, ,, | ೧೬ |
| ,, ,, ,, ವಾದಿಯ ವಕೀಲರ ರೀ ,, | ೧೬ |

॥ श्रीरामचन्द्रायनमः ॥

# ಸಂಯಮನೀಪುರದ ಹೈಕೋರ್ಟು

## O S. No. 564 of 1927

ಇಪ್ಪತ್ತೆಂಟನೆಯ ಕಲಿಯುಗದ ಶಾಲಿವಾಹನ
ಶಕ ೧೮೪೯

**ಚೀಫ್ ಜಸ್ಟಿಸ್ ಧರ್ಮರಾಜ ಎಚ್. ಬಿ ಇವರ ಸಮ್ಮುಖದಲ್ಲಿ
ನಡೆದ ವೇದಾಂತವಿಚಾರಿಣೀ ಸಿವಿಲ್ ಸೂಟಿನ
ಜಡ್ಜಮೆಂಟ (ತೀರ್ಮಾನ)**



ವಾದಿ —ಸತ್ಯಬೋಧಾಚಾರ್ಯ
ವಕೀಲ.—
ಮಾಧವದಾಸ, P B D.

ಪ್ರತಿವಾದಿ —ಗಂಗಾಧರಶಾಸ್ತ್ರಿ
ವಕೀಲ —
ಹರಿಹರಶರ್ಮ, P. B S

ವಾದಿಯ ದಾವೆ ಹೀಗೆ ಇದೆ —

೧ ವಾದಿಯು ವೈದಿಕ ಆಸ್ತಿಕ ಸಮಾಜದ ಪ್ರತಿನಿಧಿಯೆಂದು ಕೋರ್ಟಿನ ಆಜ್ಞೆಯನ್ನು ಪಡೆದು ಈ ದಾವೆಯನ್ನು ಹಾಕಿದ್ದಾನೆ (ದಾಖಲ ಮಾಡಿದ್ದಾನೆ)

೨. ಈ ದಾವೆಯಲ್ಲಿ ಗಂಗಾಧರಶಾಸ್ತ್ರಿಗಳೆಂಬವರನ್ನು ಕೋರ್ಟಿನ ಆಜ್ಞೆಯನ್ನು ಪಡೆದು ಅದ್ವೈತ ಸಮಾಜದ ಪ್ರತಿನಿಧಿಯಾಗಿ ಪ್ರತಿವಾದಿ ಎಂದು ಮಾಡಿದೆ

೩. ವಾದಿಯು ಆಸ್ತಿಕ ವೈದಿಕ ಮತಕ್ಕೆ ಸಂಬಂಧಿಸಿದವನಿದ್ದಾನೆ.

೪. ವೈದಿಕ ಮತದ ತತ್ವಗಳು.—

(ಅ) ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಯಜ್ಞಾದಿಕ್ರಿಯಾ, ದೇವತಾ, ವೇದ, ಗಂಗಾದಿತೀರ್ಥಗಳು, ಸ್ವರ್ಗಾದಿ ಪರಲೋಕ, ಈ ಲೋಕ ಇತ್ಯಾದಿ ಸಮಸ್ತ ಜಗತ್ತು ಸತ್ಯವಾದುದು.

(ಬ) ಭಗವಾನ್ ವಿಷ್ಣುವು ಸರ್ವೋತ್ತಮನು, ಸರ್ವಜ್ಞನು, ಸರ್ವಕರ್ತನು ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನು.

( ಡ ) ಪರಮಾತ್ಮನು ಜೀವನ ದೆಸೆಯಿಂದ ಬೇರೆ ( ಭಿನ್ನನು ).

( ಖ ) ಪರಮಾತ್ಮನು ಸರ್ವೋತ್ತಮನು, ಸರ್ವಕರ್ತನು, ಜೀವನ ದೆಸೆಯಿಂದ ಭಿನ್ನನು ಎಂಬೀ ಜ್ಞಾನವೇ ಮೋಕ್ಷಕ್ಕೆ ಸಾಧನವು

೫ ಈ ತತ್ವಗಳು ವೇದಗಳಲ್ಲಿಯೂ, ವೇದಾರ್ಥ ನಿರ್ಣಾಯಕಗಳಾದ ಬ್ರಹ್ಮಸೂತ್ರಗಳಲ್ಲಿಯೂ, ಮತ್ತು ಶ್ರೀಮದ್ಭಗವದ್ಗೀತೆಯಲ್ಲಿಯೂ ಉಕ್ತವಾಗಿವೆಯಾದುದರಿಂದ ಸಮಸ್ತ ವೈದಿಕ ಜನರು ಈ ತತ್ವಗಳನ್ನು ಅಂಗೀಕಾರ ಮಾಡಲು ಬದ್ಧರಿದ್ದಾರೆ

೬ ಈ ವೈದಿಕ ಮತವು ಅನಾದಿಕಾಲದಿಂದಲೂ ನಡೆದು ಬಂದಿದೆ

೭ ತತ್ವಗಳ ವಸ್ತುಸ್ಥಿತಿ ಹೀಗೆ ಇದ್ದರೂ, ಗೌಡಪಾದಾಚಾರ್ಯ, ಅವರ ಪರಮಶಿಷ್ಯರಾದ ಶಂಕರಾಚಾರ್ಯ ಇವರು ವೇದ, ಬ್ರಹ್ಮಸೂತ್ರ, ಗೀತೆ ಇವುಗಳಿಗೆ ಬೇರೆ ಅರ್ಥವನ್ನು ಕಲ್ಪಿಸಿ ಶೂನ್ಯವಾದವಾದ ಬೌದ್ಧ ಮತಕ್ಕೆ ವೈದಿಕ ಮತದ ವೇಷವನ್ನು ಕೊಟ್ಟು ವೈದಿಕ ಮತದಂತೆ ಭಾಸವಾಗುವ ಹಾಗೆ ಮಾಡಿ ಜನರನ್ನು ಮರುಳುಗೊಳಿಸಿ ವೈದಿಕ ತತ್ವಗಳಿಗೆ ವಿರುದ್ಧವಾದ ತತ್ವಗಳನ್ನು ಉಪದೇಶ ಮಾಡಿದ್ದಾರೆ.

ಹೀಗೆ ಮಾಡಿದುದು ಪ್ರಾಚೀನ ಶಿಕ್ಷಾನಿಯಮ, ಭಗವದ್ಗೀತಾ ಸೆಕ್ಷನ್ ( ಅಧ್ಯಾಯ ) ೧೬ ಇವುಗಳಲ್ಲಿ ಉಕ್ತವಾದ ಪ್ರಕಾರ ಶಿಕ್ಷೆಗೆ ಯೋಗ್ಯವಾದ ಅಪರಾಧವಾಗುತ್ತದೆ

೮. ಅದ್ವೈತ ಪ್ರತಿವಾದಿಯು ಹೀಗೆ ಉಪದೇಶ ಮಾಡುತ್ತಾನೆ —

( ಅ ) ವಿಷ್ಣು(ಪರಬ್ರಹ್ಮ)ಸರ್ವೋತ್ತಮನಲ್ಲ, ಸರ್ವಜ್ಞನಲ್ಲ, ಸರ್ವಕರ್ತನೂ ಅನಂತಗುಣಪರಿಪೂರ್ಣನೂ ಅಲ್ಲ ಆವನು ಎಲ್ಲಾ ಧರ್ಮಗಳಿಂದ ರಹಿತನಿದ್ದಾನೆ.

( ಬ ) ಮೇಲೆ ನಾಲ್ಕನೆಯ ( ಅ ) ವಿಭಾಗದಲ್ಲಿ ಉಕ್ತವಾದ ಬ್ರಾಹ್ಮಣಾದಿ ಸರ್ವ ಜಗತ್ತು ಮಿಥ್ಯಾ ( ಮೂರು ಕಾಲಗಳಲ್ಲಿಯೂ ಇಲ್ಲದುದು ).

( ಕ ) ಪರಮಾತ್ಮನು ಜೀವನ ದೆಸೆಯಿಂದ ಬೇರೆ ಇಲ್ಲ.

( ಖ ) ಪರಮಾತ್ಮನು ಜೀವನ ದೆಸೆಯಿಂದ ಭಿನ್ನನು, ಸರ್ವೋತ್ತಮನು ಎಂಬೀ ಜ್ಞಾನವು ಮೋಕ್ಷಕ್ಕೆ ಸಾಧನವಲ್ಲ. " ಅಹಂ ಬ್ರಹ್ಮಾಸ್ಮಿ " ( ನಾನೇ ಬ್ರಹ್ಮ ) ಎಂಬ ಈ ಜ್ಞಾನವೇ ಮೋಕ್ಷಕ್ಕೆ ಸಾಧನವು

೯. ಹೀಗೆ ವೇದ, ಸೂತ್ರ, ಗೀತಾ ಇವುಗಳಲ್ಲಿ ಹೇಳಿದ ತತ್ವಗಳನ್ನು ವಿರುದ್ಧವಾಗಿ ತಿಳಿದು " ನಷ್ಟಾತ್ಮಾನೋಽಲ್ಪಬುದ್ಧಯಃ | ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ||" ( ಗೀತಾ ಅ. ೧೬ ಶ್ಲೋಕ ೯ ) ಇಲ್ಲಿ

ಹೇಳಿದ ಪ್ರಕಾರ ತಾವೊಬ್ಬರೇ ಅಧೋಗತಿಯನ್ನು ಹೊಂದುವರಲ್ಲದೆ ಬೇರೆ ಸಜ್ಜನರನ್ನೂ ಆಸ್ತಿಕಮತದಿಂದ ಬಿಡಿಸಿ ಅವೈದಿಕ ಮತವನ್ನು ಆಶ್ರಯಿಸುವಂತೆ ಮಾಡಿ ಅವರನ್ನೂ ಅಧೋಗತಿಗೆ ಹೋಗುವಂತೆ ಮಾಡಿದ್ದಾರೆ.

ಆದುದರಿಂದ ಸಜ್ಜನರ ಕ್ಷೇಮಕ್ಕೋಸ್ಕರ ಕೆಳಗೆ ಹೇಳಿದ ಪ್ರಕಾರ ತೀರ್ಮಾನಿಸಬೇಕೆಂದು ಕೋರ್ಟಿಗೆ ವಿಜ್ಞಾಪಿಸಿಕೊಳ್ಳುತ್ತೇವೆ.

(೧) ಪರಬ್ರಹ್ಮನು ಜೀವನ ದೆಸೆಯಿಂದ ಭಿನ್ನನೂ ಸರ್ವೋತ್ತಮನೂ ಇದ್ದಾನೆ. ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ವೇದ, ಯಜ್ಞ, ದೇವತಾ, ಗಂಗಾದಿತೀರ್ಥ, ಇವೇ ಮೊದಲಾದ ಜಗತ್ತು ಸತ್ಯ, ಮಿಥ್ಯಾ ಅಲ್ಲ, ಎಂಬಿವುಗಳೇ ವೈದಿಕ ಮತದ ತತ್ವಗಳು

ಪ್ರತಿವಾದಿಯಿಂದ ಹೇಳಲ್ಪಡುವ ಬ್ರಹ್ಮನು ನಿರ್ಗುಣನು, ಜೀವನಿಂದ ಅಭಿನ್ನನು, ಬ್ರಾಹ್ಮಣವರ್ಣಾದಿ ಜಗತ್ತು ಮಿಥ್ಯಾ, ಎಂಬುವು ವೈದಿಕ ಮತದ ತತ್ವಗಳಲ್ಲ

(೨) ವೇದ, ಬ್ರಹ್ಮಸೂತ್ರ, ಗೀತಾ ಇವುಗಳಿಗೆ ವಿರುದ್ಧಾರ್ಥವನ್ನು ಕಲ್ಪಿಸಿ ಜಗತ್ತು ಸುಳ್ಳು, ಬ್ರಹ್ಮನು ನಿರ್ಗುಣನು, ಇತ್ಯಾದಿ ಪ್ರತಿವಾದಿಯ ಉಪದೇಶವು ಶಾಸ್ತ್ರಕ್ಕೆ ವಿರುದ್ಧವಾದುದು.

(೩) ಈ ಪ್ರಕಾರ ತೀರ್ಮಾನವನ್ನು ಕೊಡಿಸಬೇಕು. ವುಗಳ ಹೊರ್ತು ಕೋರ್ಟಿಗೆ ಯುಕ್ತವೆಂದು ತೋರಿದ್ದೆಲ್ಲವನ್ನೂ ಅಪ್ಪಣೆ ಕೊಡಿಸಬೇಕು

೧೦ ಕೋರ್ಟಿನವರು ಈ ಬಗೆಯಾಗಿ ಹುಕುಂ ಮಾಡದಿದ್ದರೆ ಜನರು ಬಹಳ ದುಃಖಭಾಗಿಗಳಾಗುತ್ತಾರೆ.

ಹೀಗೆ ೨೫–೩–೧೯೨೭ ನೇ ದಿವಸ ಮಾಧವದಾಸ ವಕೀಲ ಇವರ ದ್ವಾರಾ ದಾವಾ ದಾಖಲ್ ಮಾಡಿಸಿ ವಾದಿಯು ಪ್ರತಿಜ್ಞಾ ಲೇಖವನ್ನು ಮಾಡಿದ್ದಾನೆ.

ಆ ಮೇಲೆ ಪ್ರತಿವಾದಿಯ ಹೆಸರಿನಲ್ಲಿ ಸಮನ್ಸ್ ಹೊರಡಲು ಪ್ರತಿವಾದಿಯು ೩೦—೩—೧೯೨೭ ನೆಯ ದಿವಸ ಕೆಳಗೆ ಕಾಣಿಸಿದಂತೆ ಸ್ಟೇಟಮೆಂಟ ( ಇಜಹಾರ್ ) ಕೊಟ್ಟಿದ್ದಾನೆ.

ಪ್ರತಿವಾದಿಯ ಸ್ಟೇಟಮೆಂಟ ( ಬಯಾನ್ ).

೧ ವಾದಿಯು ತನ್ನ ಅರ್ಜಿಯಲ್ಲಿ ಬರಕೊಂಡುದೆಲ್ಲವು ತಪ್ಪು.

೨. ವಾದಿಯ ಮತವು ಅನಾದಿ ಕಾಲದಿಂದ ಬಂದದ್ದು ಅಲ್ಲ.

೩. ವಾದಿಯು ನಾಲ್ಕನೆಯ ವಿಭಾಗದಲ್ಲಿ ಹೇಳಿದ ತತ್ವಗಳು ಸುಳ್ಳು.

( ಅ ) ನಮ್ಮ ಅದ್ವೈತ ಮತವೇ ವೈದಿಕವಾದುದು.

( ಬ ) ಅದ್ವೈತ ಮತವು ಬೌದ್ಧಮತವೆಂದು ಹೇಳುವುದು ಅಯುಕ್ತವು.

( ಕ ) ಪ್ರತಿವಾದಿಯು ಹೇಳುವುದೇ ವೇದಾರ್ಥವು.

೪. ಅದ್ವೈತ ಮತದ ತತ್ವಗಳು —

( ಅ ) ಬ್ರಹ್ಮಾತಿರಿಕ್ತವಾದ ಬ್ರಾಹ್ಮಣಾದಿ ವರ್ಣ, ದೇವತಾ, ಸಂಧ್ಯಾವಂದನಾದಿ ಕರ್ಮಗಳು ಇತ್ಯಾದಿ ಜಗತ್ತು ಸ್ವಪ್ನದಂತೆ ಅಸತ್ಯವಾದುದು.

( ಬ ) ಪರಬ್ರಹ್ಮನು ನಿರ್ಗುಣನು (ಸಕಲ ಧರ್ಮರಹಿತನು ).

( ಕ ) ಜೀವ ಮತ್ತು ಬ್ರಹ್ಮ ಇವೆರಡು ಒಂದೇ

(ಖ)'ಅಹಂ ಬ್ರಹ್ಮಾಸ್ಮಿ'ನಾನೇ ಬ್ರಹ್ಮ ಎಂಬೀ ಜ್ಞಾನವು ಮೋಕ್ಷಸಾಧನವು

೫. ಈ ವಿಷಯವು ಪೂರ್ವದಲ್ಲಿಯೇ ಇತರ್ಥ್ಯ ( ನಿರ್ಣೀತ) ವಾಗಿದ್ದುದರಿಂದ ಪುನಃ ವಿಚಾರ ಮಾಡುವ ಅಧಿಕಾರವು ಕೋರ್ಟಿಗೆ ಇಲ್ಲ ( ರೆಸ್ ಜ್ಯೂಡಿಕೇಟ ( Resjudicata ) ಬಾಧ ಬರುತ್ತದೆ )

೬. ವಾದಿಯು (೯) ನೆಯ ವಿಭಾಗದಲ್ಲಿ ಹೇಳಿದುದು ತಪ್ಪು

ಅದ್ವೈತ ಮತದ ಆಶ್ರಯದಿಂದ ನಮಗೆ ಯಾವ ನಷ್ಟವೂ ಆಗಿಲ್ಲ ಈ ಮತವನ್ನು ಅನುಸರಿಸಿದ ಬೇರೆಯವರಾರಿಗೂ ಯಾವ ನಷ್ಟವೂ ಆಗಿಲ್ಲ.

ಈ ಕಾರಣಗಳಿಂದ ಈ ವಿಷಯವಾಗಿ ಯಾವ ಬಗೆಯ ತೀರ್ಮಾನವನ್ನೂ ಕೊಡದೆ ವಾದಿಯ ಅರ್ಜಿಯನ್ನು ತೆಗೆದು ಹಾಕಬೇಕೆಂದು ಪ್ರಾರ್ಥನೆ

ಹೀಗೆಂದು ಸ್ಟೇಟಮೆಂಟನ್ನು ವಕೀಲ ಹರಿಹರ ಶರ್ಮ ಇವರ ದ್ವಾರಾ ಕೋರ್ಟಿಗೆ ಕೊಟ್ಟು ಪ್ರತಿಜ್ಞಾ ಲೇಖವನ್ನು ಮಾಡಲಾಗಿದೆ.

ಇದರ ಮೇಲೆ ವಾದಿ ಪ್ರತಿವಾದಿ ವಕೀಲರ ಸಮಕ್ಷ ಮುಂದಿನ ಇಸ್ಯುಗಳು ( Issues ) ಗೊತ್ತುಪಡಿಸುವದರಲ್ಲಿ ಬಂದವು

ವಿಚಾರಣೀಯ ಅಂಶಗಳು ( Issues )

೧. ಈ ದಾವೆಗೆ ರೆಸ್‌ಜ್ಯೂಡಿಕೇಟದ ಬಾಧವು ಬರುತ್ತದೊ ? ( ಎಂದರೆ ಈ ದಾವೆಯಲ್ಲಿಯ ವಿಷಯದ ನಿರ್ಣಯವು ಪೂರ್ವದಲ್ಲಿ ಆಗಿದ್ದುದರಿಂದ ಈಗ ಪುನಃ ವಿಚಾರ ಮಾಡುವ ಅಧಿಕಾರವು ಕೋರ್ಟಿಗೆ ಉಂಟೇ ? ಇಲ್ಲವೇ ? ಎಂಬುದನ್ನು ವಿಚಾರಿಸುವುದು )

೨ ( ಅ ) ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ ಮುಂತಾದ ಸರ್ವ ಜಗತ್ತು ಸತ್ಯವೇ, ಮಿಥ್ಯವೇ ?

( ಬ ) ಸ್ವಪ್ನ ಪದಾರ್ಥಗಳು ಸತ್ಯವೇ ? ಇಲ್ಲವೇ ?

೩. ಪರಬ್ರಹ್ಮನು ಜೀವನಿಂದ ಅಭಿನ್ನನೋ, ಭಿನ್ನನೋ ?

೪. ಸರ್ವಜ್ಞತ್ವ, ಸರ್ವಶಕ್ತಿಮತ್ವ, ಜಗತ್ಕರ್ತೃತ್ವ ಇತ್ಯಾದಿ ಸಮಸ್ತ ಕಲ್ಯಾಣ ಗುಣಗಳಿಂದ ಪರಬ್ರಹ್ಮನು ಪರಿಪೂರ್ಣನೋ ಹ್ಯಾಗೆ ?

೫. (ಅ) ಅದ್ವೈತ ಮತವು ಬೌದ್ಧ ಮತದಿಂದ ಅಭಿನ್ನವೋ ಅಲ್ಲವೋ ?

(ಬ) ಅದ್ವೈತ ಮತವು ವೈದಿಕವಾದುದೇ ಅಲ್ಲವೇ ?

ಪ್ರಥಮ ಇಸ್ಯು (ರೆಸ್‌ಜ್ಯುಡಿಕೇಟ) ವಿಚಾರದಲ್ಲಿ ತಾರೀಖು ೩—೪—೧೯೨೭ ರಲ್ಲಿ ಉಭಯ ಪಕ್ಷದ ವಕೀಲರ ಆರ್ಗ್ಯುಮೆಂಟ (ಬಹಸ್) ಕೇಳಿಕೊಂಡು ಈ ದಾವೆಗೆ ರೆಸ್‌ಜ್ಯುಡಿಕೇಟ್‌ದ ಬಾಧವಿಲ್ಲೆಂದು ಕೋರ್ಟಿನಿಂದ ನಿರ್ಣಯಿಸಲಾಗಿದೆ.[1]

## ಎರಡನೇಯ ಇಸ್ಯು

೨. (ಅ) ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದಿ ಆಶ್ರಮ ಮುಂತಾದ ಸರ್ವ ಜಗತ್ತು ಸತ್ಯವೇ, ಮಿಥ್ಯವೇ ? (ಬ) ಸ್ವಪ್ನ ಪದಾರ್ಥಗಳು ಸತ್ಯವೇ ಇಲ್ಲವೇ ?

## ಇದರ ಮೇಲೆ ತೀರ್ಮಾನ.

ಇದನ್ನು ಕುರಿತು ವಿಚಾರ ಮಾಡಿ ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದಿ ಆಶ್ರಮ, ಯಜ್ಞಾದಿ ಕ್ರಿಯಾ, ದೇವತಾ, ವೇದ, ಗಂಗಾದಿತೀರ್ಥಗಳು, ಸ್ವರ್ಗಾದಿಲೋಕಗಳು, ಈ ಲೋಕ ಮುಂತಾದ ಸಮಸ್ತ ಜಗತ್ತು ಸತ್ಯವೇ ಎಂದೂ, ಮಿಥ್ಯೆ (ಮೂರು ಕಾಲಗಳಲ್ಲಿಯೂ ಇಲ್ಲದಿರುವುದು) ಅಲ್ಲವೆಂದೂ ಸ್ವಪ್ನಾದಿ ಪದಾರ್ಥಗಳು ಸತ್ಯವೆಂದು ಅಂದರೆ ಸುಳ್ಳಲ್ಲವೆಂದು ನಿಶ್ಚಯಿಸಲಾಗುತ್ತದೆ (ಠರಾವ ಮಾಡುವದರಲ್ಲಿ ಬರುತ್ತದೆ).

ಕಾರಣಗಳು:—ವಾದಿಯು ಜಗತ್ತು ಸತ್ಯವೆಂಬ ವಿಷಯವಾಗಿ ಆಧಾರಗಳೆಂದು ತೋರಿಸಿದ ವೇದ, ಗೀತಾ, ಬ್ರಹ್ಮಸೂತ್ರರೂಪ ಪ್ರಸ್ಥಾನತ್ರಯ, ಪ್ರತ್ಯಕ್ಷ, ಅನುಮಾನ ಇವೇ ಪ್ರಮಾಣಗಳು ಬ್ರಾಹ್ಮಣವರ್ಣಾದಿ ಸಮಸ್ತ ಜಗತ್ತು ಸತ್ಯವೇ, ಮಿಥ್ಯೆ ಅಲ್ಲವೆಂದು ತಿಳಿಸುತ್ತವೆ. ಅದು ಹೇಗೆಂದರೆ.—

೧. "ವಿಶ್ವಂ ಸತ್ಯಂ" ವಿಶ್ವಂ=ಜಗತ್ತು, ಸತ್ಯಂ=ಸತ್ಯವಾದುದೆಂದು ಈ ಶ್ರುತಿಯು ಸ್ಪಷ್ಟವಾಗಿ ತಿಳಿಸುತ್ತದೆ.

ಋಗ್ವೇದಕ್ಕೆ ಭಾಷ್ಯವನ್ನು ಬರೆದ ಅದ್ವೈತ ಮತಾವಲಂಬಿಗಳಾದ ಹಾಗೂ ಅದ್ವೈತರಲ್ಲಿ ಶ್ರೇಷ್ಠ ಜ್ಞಾನಿಗಳೆಂದೆಣಿಸಿದ ವಿದ್ಯಾರಣ್ಯ ಸ್ವಾಮಿಗಳು ಈ ವೇದ

(1 ವಿಚಾರ ಭಾಗ ೬—೭ ಪುಟ ನೋಡುವುದು)

ವಾಕ್ಯದ ವ್ಯಾಖ್ಯಾನವನ್ನು ಮಾಡುವಾಗ "ಸತ್ಯಂ=ಯಥಾರ್ಥಂ=ವಿದ್ಯಮಾನಮೇವ=ನತ್ವಾರೋಪಿತಮಿತ್ಯರ್ಥಃ" ಹೀಗೆಂದು ಸತ್ಯ ಪದಕ್ಕೆ ಯಥಾರ್ಥವಾಗಿ ಇದ್ದದ್ದೇ ಎಂದೂ, ಆರೋಪಿತ (ಕಲ್ಪಿತ) ವಲ್ಲವೆಂದೂ, ಇರುವುದೇ (ಸತ್ಯವೇ) ಎಂದು ಸ್ಪಷ್ಟವಾಗಿ ಅರ್ಥವನ್ನು ಹೇಳಿದ್ದಾರೆ. ಯದ್ಯಪಿ ವಿದ್ಯಾರಣ್ಯಸ್ವಾಮಿಗಳು "ವಿಶ್ವಂ ಸರ್ವಂ ಸ್ತೋತ್ರಂ ಯಥಾರ್ಥಂ ಸ್ತುತ್ಯಾ ಯದ್ಗುಣಜಾತಂ ಪ್ರತಿಪಾದ್ಯತೇ ತತ್ಸರ್ವಂ ಯುವಯೋರ್ವಿದ್ಯಮಾನಮೇವ ನತ್ವಾರೋಪಿತಂ" ಎಂದು ಶ್ರುತಿಯಲ್ಲಿ "ವಿಶ್ವಂ" ಪದದ ಮುಂದೆ ಇಲ್ಲದ 'ಸ್ತೋತ್ರಂ' ಎಂಬ ಪದವನ್ನು ತಮ್ಮ ಕೈಯಿಂದ ಹಾಕಿಕೊಂಡು ಇಂದ್ರಾದಿಗಳ ಸಮಸ್ತ ಗುಣಗಳು ಸತ್ಯವೇ ಅಂದರೆ ಕಲ್ಪಿತ (ಮಿಥ್ಯಾ) ವಾಗಲಿ ಆರೋಪಿತವಾಗಲಿ ಅಲ್ಲವೆಂದು ಹೇಳಿದ್ದಾರೆ. ಅದು ಹೇಗಾದರೂ ಇರಲಿ! 'ವಿಶ್ವಂ' ಶಬ್ದದಿಂದ ತಿಳಿದು ಬರುವ ಸಮಸ್ತ ಗುಣಗಳು ಸತ್ಯ(ಕಲ್ಪಿತ ಅಲ್ಲವೆಂಬುದು)ಅವರಿಗೆ ಒಪ್ಪಿಗೆಯಾದುದರಿಂದ ಬ್ರಹ್ಮಾತಿರಿಕ್ತ ಪದಾರ್ಥವು ಸತ್ಯವೆಂದು ವಿದ್ಯಾರಣ್ಯಸ್ವಾಮಿಗಳು ಒಪ್ಪುತ್ತಾರೆಂಬ ವಿಷಯದಲ್ಲಿ ವಾದವಿಲ್ಲವಾದುದರಿಂದ ಈ ಶ್ರುತಿಯು ಬ್ರಹ್ಮಾತಿರಿಕ್ತವಾದ ಜಗತ್ತು ಸತ್ಯವು, ಮಿಥ್ಯೆ ಅಲ್ಲವೆಂದು ತಿಳಿಸಿ ಕೊಡುತ್ತದೆ. ಈ ಪ್ರಕಾರ ವಾದಿಯು ಹೇಳಿದುದು ಕೋರ್ಟಿನವರು ಮಾನ್ಯ ಮಾಡಿದ್ದಾರೆ

೨. ವಾದಿಯು ಹೇಳಿದ 'ತದೇತತ್ ಸತ್ಯಂ' ಈ ಮುಂಡಕ ಶ್ರುತಿ ಕರ್ಮಾದಿ ಜಗತ್ತು ಸತ್ಯವು ಎಂದು ತಿಳಿಸುತ್ತದೆ. 'ತದೇತತ್ ಸತ್ಯಂ' ಎಂಬೀ ಶ್ರುತಿಯು (ಮುಂ. ೧ ೨. ೧, ೨-೨-೨,) ಇತ್ಯಾದಿ ಅನೇಕ ಎಡೆಗಳಲ್ಲಿ ಬ್ರಹ್ಮನನ್ನು ಮತ್ತು ಜಗತ್ತನ್ನು ನಿರೂಪಿಸುವುದು ಬ್ರಹ್ಮನನ್ನು ಪ್ರತಿಪಾದಿಸುವ ಸಂದರ್ಭದಲ್ಲಿ ತದೇತತ್=ಆ ಬ್ರಹ್ಮ ಸತ್ಯಂ=ಅವಿತಥಂ=ಸುಳ್ಳಲ್ಲ, ಸತ್ಯವಾದುದು ಹೀಗೆ ಶಂಕರಾಚಾರ್ಯರು ಅರ್ಥ ಮಾಡಿದ್ದಾರೆ. ಜಗತ್ತನ್ನು ತಿಳಿಸುವ 'ತದೇತತ್ ಸತ್ಯಂ' ಈ ವಾಕ್ಯಕ್ಕೆ "ಈ ಜಗತ್ತು ಸತ್ಯಂ=ಅವಿತಥಂ ನಿಜವಾದುದು, ಸುಳ್ಳಲ್ಲ" ಎಂದು ಅರ್ಥ ಮಾಡಿ ಕೇವಲ ತಮ್ಮ ಮತದ ಆಗ್ರಹದಿಂದ ಸತ್ಯಂ=ಅಪೇಕ್ಷಿತ ಸತ್ಯಂ (ವ್ಯಾವಹಾರಿಕ ಸತ್ಯ)ಎಂದು ತಮ್ಮ ಕೈಯಿಂದ ಅಪೇಕ್ಷಿತ ಎಂಬ ಪದವನ್ನು ಸೇರಿಸಿ ಅರ್ಥಮಾಡಿದ್ದಾರೆ. ಶಂಕರಾಚಾರ್ಯರು ಏನೇ ಹೇಳಲಿ, 'ತದೇತತ್ ಸತ್ಯಂ' ಎಂಬೀ ಶ್ರುತಿಯು ಬ್ರಹ್ಮನನ್ನು ಯಾವ ಪ್ರಕಾರ ಸತ್ಯವೆಂದು ಪ್ರತಿಪಾದಿಸುವುದೋ ಅದೇ ಪ್ರಕಾರ ಜಗತ್ತನ್ನು ಸತ್ಯವೆಂದು ಪ್ರತಿಪಾದಿಸುವದೆಂಬುದರಲ್ಲಿ ವಿವಾದವಿಲ್ಲ.

"ಜಗತ್ತನ್ನು ಸತ್ಯವೆಂದು ತಿಳಿಸುವ ಎಷ್ಟು ಪ್ರಮಾಣಗಳಿವೆಯೋ ಅವೆಲ್ಲ ಪ್ರಮಾಣಗಳೂ ಜಗತ್ತಿನ ವ್ಯಾವಹಾರಿಕ ಸತ್ಯತ್ವವನ್ನು ನಿರೂಪಿಸುವುವು ಎಂದು 'ವಿಶ್ವಂ ಸತ್ಯಂ' ಇತ್ಯಾದಿ ಪ್ರಮಾಣಗಳಿಂದ ಜಗತ್ತಿನ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾಗುವುದಿಲ್ಲ," ಹೀಗೆಂದು ಪ್ರತಿವಾದಿಯು ಹೇಳುತ್ತಾನೆ. ಈ ಬಗೆಯ

ಅವನ ಹೇಳಿಕೆ ಅದ್ವೈತಿಗಳ ಅನೇಕ ಗ್ರಂಥಗಳಿಗೆ ವಿರುದ್ಧವಾಗುವದು ಅಷ್ಟೇ ಅಲ್ಲದೆ ಅಯುಕ್ತವೂ ಆಗುವುದು ಕಾರಣವೇನಂದರೆ —ಬೌದ್ಧನು ಜಗತ್ತು ಮಿಥ್ಯೆಯೆಂದು ಹೇಳುತ್ತಿರಲು,ಜಗತ್ತುಸತ್ಯವೆಂದು ಪ್ರಮಾಣಗಳು ನಿರೂಪಿಸುವ ಕಾರಣ, ಜಗತ್ತು ಮಿಥ್ಯೆಯೆಂದು ಹೇಳುವುದು ಪ್ರಮಾಣಗಳಿಗೆ ವಿರುದ್ಧವಾದುದೆಂದು ಪ್ರತಿವಾದಿಗಳಾದ ಅದ್ವೈತಿಗಳು ದೂಷಣ ಮಾಡಿದ್ದಾರೆ ಅದಕ್ಕೆ ಬೌದ್ಧರು " ಜಗತ್ತಿನ ಸತ್ಯತ್ವವನ್ನು ತಿಳಿಸುವ ಪ್ರಮಾಣಗಳು ವ್ಯಾವಹಾರಿಕ ಸತ್ಯತ್ವವನ್ನು (ತೋರಿಕೆಯ ನಿಜವನ್ನು)ತಿಳಿಸುತ್ತವೆ ನಾವು (ಬೌದ್ಧರು)ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ( ನಿಜವಾದ ಸತ್ಯತ್ವವನ್ನು ) ನಿರಾಕರಿಸುತ್ತೇವೆ ಪ್ರಮಾಣಗಳಿಂದ ಸಿದ್ಧವಾಗುವ ವ್ಯಾವಹಾರಿಕ ಸತ್ಯತ್ವವನ್ನು ( ತೋರಿಕೆಯ ನಿಜವನ್ನು ) ನಿರಾಕರಿಸುವುದಿಲ್ಲ. ಆದುದರಿಂದ ನಮ್ಮ ( ಬೌದ್ಧರ ) ಮತದಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಎಂದರೆ ಪಾರಮಾರ್ಥಿಕ ಸತ್ಯತ್ವದ ಅಭಾವವನ್ನು (ನಿಜವಾಗಿ ನಿಜವು ಅಲ್ಲವೆಂದು ) ಹೇಳಿದರೆ ವ್ಯಾವಹಾರಿಕ ಸತ್ಯತ್ವವನ್ನು ನಿರೂಪಿಸುವ ಪ್ರಮಾಣಗಳಿಂದ ವಿರೋಧವು ಉಂಟಾಗುವುದಿಲ್ಲ. ( ಪ್ರಮಾಣಗಳಿಂದ ನಿರೂಪಿತವಾಗಿರುವ ವ್ಯಾವಹಾರಿಕ ಸತ್ಯತ್ವವು ಬೇರೆ,ಮತ್ತು ನಾವು (ಬೌದ್ಧರು)ನಿಷೇಧ ಮಾಡುವ ಪಾರಮಾರ್ಥಿಕ ಸತ್ಯತ್ವವು ಬೇರೆಯಾದುದರಿಂದ ವಿರೋಧವಿಲ್ಲ) " ಹೀಗೆ ಹೇಳುತ್ತಿರಲಾಗಿ ಶಂಕರಾಚಾರ್ಯರು ಮತ್ತು ಭಾಮತೀಕಾರರೇ ಮೊದಲಾದ ಇತರ ಅದ್ವೈತಿಗಳು, ತಾವು ಅವುಗಳಲ್ಲಿ ನಿರೂಪಿಸುವ ವಿಷಯಗಳೆಲ್ಲವೂ ಪ್ರಮಾಣಗಳು ಪಾರಮಾರ್ಥಿಕ ಸತ್ಯವೆಂದೇ ( ನಿಜವಾಗಿ ನಿಜವೆಂದೇ ) ಪ್ರತಿಪಾದಿಸುತ್ತವೆ. ವ್ಯಾವಹಾರಿಕ ಸತ್ಯ ( ತೋರಿಕೆಯ ಸತ್ಯ ) ಎಂದು ಹೇಳುವುದಿಲ್ಲ ಆದುದರಿಂದ ನೀವು ( ಬೌದ್ಧರು ) ಪ್ರಮಾಣಗಳಿಂದ ಸಿದ್ಧವಾಗಿರುವ ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧಿಸುವುದರಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವನ್ನು ಪ್ರತಿಪಾದಿಸುವ ಪ್ರಮಾಣಗಳಿಗೂ ನಿಮ್ಮ ಮತಕ್ಕೂ ವಿರೋಧವು ಬಂದೇ ಬರುವುದು. ಹೀಗೆ ಅದ್ವೈತಿಗಳು ಬೌದ್ಧರ ವಿಷಯವಾಗಿ ಹೇಳಿ ತಾವೇ ಪುನಃ ಬೌದ್ಧರಂತೆ ಜಗತ್ತಿನ ವಿಷಯವಾಗಿ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧಿಸುತ್ತೇವೆ; ಮತ್ತು ಶ್ರುತ್ಯಾದಿಪ್ರಮಾಣಗಳಿಂದ ಸಿದ್ಧವಾಗುವ ಜಗತ್ತಿನ ವ್ಯಾವಹಾರಿಕ ಸತ್ಯತ್ವವನ್ನು ನಿಷೇಧಿಸುವುದಿಲ್ಲ" ಎಂದು ಹೇಳುತ್ತಾರೆ. ಹೀಗೆ ಹೇಳುವುದು ಸ್ವವ್ಯಾಹತ ( ತಮ್ಮ ಮಾತಿಗೆ ತಾವೇ ವಿರುದ್ಧವಾಗಿ ಹೇಳುವುದು ) ಆಗುತ್ತದೆಂದು ವಾದಿಯ ವಕೀಲನು ಆಕ್ಷೇಪಿಸಲು ಪ್ರತಿವಾದಿಯ ಸಾಕ್ಷಿಯು ಅದಕ್ಕೆ ಏನೂ ಉತ್ತರ ಕೊಡಲಿಲ್ಲ ಕಲ್ಪತರು, ಪರಿಮಳ, ಬ್ರಹ್ಮವಿದ್ಯಾಭರಣ ಇತ್ಯಾದಿ ಗ್ರಂಥಗಳು!ಹೇಳುವುದೇನಂದರೆ ವ್ಯಾವಹಾರಿಕ ಸತ್ಯವೆಂದರೆ ಶುಕ್ತಿರಜತದಂತೆ ( ಸಿಂಪಿನಲ್ಲಿ ಭಾಸವಾಗುವ ಬೆಳ್ಳಿಯಂತೆ ) ಜಗತ್ತು ಇಲ್ಲವೆಂದು ತಿಳಿದು ಬರುವುದರಿಂದ ( ಭಾಧ್ಯವಾಗುವುದರಿಂದ) ವ್ಯಾವಹಾರಿಕ ಸತ್ಯಪದಾರ್ಥಗಳ ಜ್ಞಾನ ಮಾಡಿಕೊಡುವ ಪ್ರತ್ಯಕ್ಷಾದಿ ಪ್ರಮಾಣಗಳು

( ಪ್ರತ್ಯಕ್ಷ, ಅನುಮಾನ, ಆಗಮ ) 'ಇದಂ ರಜತಂ' =ಇದು ಬೆಳ್ಳಿಯು ಎಂದು, ಶುಕ್ತಿಯನ್ನು ಬೆಳ್ಳಿಯೆಂದು ತಿಳಿಸಿಕೊಡುವ ಇಂದ್ರಿಯಾದಿಗಳಂತೆ ಅಪ್ರಮಾಣ ಗಳಾಗುತ್ತವೆ ಅಪ್ರಮಾಣ ಎಂಬುದಕ್ಕೆ ವ್ಯಾವಹಾರಿಕ ಪ್ರಮಾಣ ಎಂಬುದನ್ನು ಪ್ರತಿವಾದಿಯಾದ ಅದ್ವೈತಿಯು ಸಂಕೇತವಾಗಿ ಇಟ್ಟು ಕೊಂಡಿದ್ದಾನೆ, ಎಂಬುದೇ ಸಿದ್ಧವಾಗುತ್ತದೆ.

ವಸ್ತುತಃ ವಿಚಾರಮಾಡಿ ನೋಡಿದರೆ ವ್ಯಾವಹಾರಿಕ ಸತ್ಯವೆಂದರೂ ಮೂರೂ ಕಾಲದಲ್ಲಿಯ ಇಲ್ಲದಿರುವುದು ಎಂದರೂ ಒಂದೆಯೆ. ಹೀಗೆ ಅದ್ವೈತಿಗಳು ಒಪ್ಪಿಕೊಂಡಿದ್ದರೂ ಬ್ರಾಹ್ಮಣಾದಿವರ್ಣಗಳು, ಯಜ್ಞ ಯಾಗಾದಿಗಳು, ಗಂಗಾದಿ ತೀರ್ಥಗಳು, ಇತ್ಯಾದಿ ಸರ್ವ ಜಗತ್ತು "ಶಶವಿಷಾಣ" ದಂತೆ ( ಮೊಲದ ಕೋಡಿನಂತೆ) ಮೂರುಕಾಲದಲ್ಲಿಯೂ ಇಲ್ಲದುದೆಂದು ಹೇಳಿದರೆ, "ಗಂಗಾದಿತೀರ್ಥ ಗಳು ಉಂಟು, ದೇವರು ಇದ್ದಾನೆ, ಬ್ರಾಹ್ಮಣಾದಿವರ್ಣಗಳು ಇವೆ, ಪರಲೋಕವಿದೆ ಎಂದು ಒಪ್ಪಿಕೊಳ್ಳುವ ಆಸ್ತಿಕ ಜನರು ಅದ್ವೈತ ಮತವನ್ನು ಸ್ವೀಕರಿಸಲಾರರು" ಎಂದು ಭಾವಿಸಿ ತಮ್ಮ ಮತದಲ್ಲಿ ಆಸ್ತಿಕ ಜನರು ಸಿಕ್ಕು ಬೀಳುವ ಹಾಗೆ ಮಾಡ ಬೇಕೆಂಬ ದುರುದ್ದೇಶದಿಂದ ಬ್ರಾಹ್ಮಣಾದಿ ವರ್ಣಗಳು ಮೊದಲಾದ ಯಾವತ್ತು ಜಗತ್ತು ಮೂರು ಕಾಲದಲ್ಲಿಯೂ ಇಲ್ಲದಿರುವುದು ಎನ್ನುವುದರ ಬದಲಾಗಿ ವ್ಯಾವ ಹಾರಿಕ ಸತ್ಯವೆಂದು ಹೇಳಿದ್ದಾರೆ ಆದುದರಿಂದ ವ್ಯಾವಹಾರಿಕ ಸತ್ಯವೆಂದು ಹೇಳುವ ಮಾತ್ರದಿಂದ ( ಎಂದೂ ಇಲ್ಲವೆಂದು ಹೇಳುವುದರಿಂದ ) ಜಗತ್ತಿನ ಪಾರ ಮಾರ್ಥಿಕ ಸತ್ಯತ್ವವನ್ನೂ ನಿರೂಪಿಸುವ ಪ್ರಮಾಣಗಳಿಂದ ವಿರೋಧವು ತಪ್ಪ ಲಾರದು. ಈ ಕಾರಣಗಳಿಂದ 'ತದೇತತ್ ಸತ್ಯಂ' ಈ ಶ್ರುತಿಯಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವು ಸಿದ್ಧಿಸುವುದೆಂದು ಕೋರ್ಟಿನವರು ಒಪ್ಪಿದ್ದಾರೆ

೨. 'ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ' ಈ ಈಶಾವಾಸ್ಯ ಮಂತ್ರವು ಪರಮಾತ್ಮನು 'ಯಾಥಾತಥ್ಯತಃ' ನಿಜವಾದ ಸ್ವರೂಪವುಳ್ಳ ( ಯುಕ್ತವಾದ ) ಅರ್ಥಾನ್=ಪದಾರ್ಥಗಳನ್ನು ವ್ಯದಧಾತ್=ನಿರ್ಮಾಣ ಮಾಡಿ ದನು ಎಂದು ಪ್ರತಿಪಾದನೆ ಮಾಡುತ್ತಾ ಜಗತ್ತಿನ ಸತ್ಯತ್ವವನ್ನು ನಿರೂಪಿಸುತ್ತ ದೆಂದು ವಾದಿಯು ಹೇಳುವುದನ್ನು ಕೋರ್ಟಿನವರು ಮನ್ನಿಸುತ್ತಾರೆ.

೩. "ಯಚ್ಚಿಕೇತತ್ಸತ್ಯಮಿತ್ತನ್ನಮೋಘಂ" ಈ ಋಗ್ವೇದ ಮಂತ್ರ ವಾದರೂ ಪರಮಾತ್ಮನಿಂದ ಸೃಷ್ಟವಾದ ಈ ಜಗತ್ತು ಸತ್ಯವೆಂದೂ, ಸುಳ್ಳಲ್ಲ ವೆಂದೂ ತಿಳಿಸುತ್ತದೆ

೪. "ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಮ್" (ಗೀ. ೧೬-೮) ಈ ಗೀತಾವಾಕ್ಯವು ಜಗತ್ತು ಅಸತ್ಯವೆಂದು ತಿಳಿಯುವವರು ಅಸುರರು, ಅಧೋ

ವೆಯನ್ನು ಹೊಂದುವವರು ಎಂದು ಅಂಥವರ ನಿಂದಾ ಮಾಡಿರುವುದರಿಂದ ಸತ್ಯವೆಂದೇ ಸಿದ್ಧವಾಗುತ್ತದೆ

೫ ' ಅಥಾತೋಬ್ರಹ್ಮಜಿಜ್ಞಾಸಾ ' ಈ ಸೂತ್ರವನ್ನು ಮೊದಲು ಮಾಡಿಕೊಂಡು " ಅನಾವೃತ್ತಿಃ ಶಬ್ದಾತ್, ಅನಾವೃತ್ತಿಃ ಶಬ್ದಾತ್" ಎಂಬ ಕೊನೆಯ ಸೂತ್ರದವರೆಗೆ ಸಕಲ ಬ್ರಹ್ಮಸೂತ್ರಗಳು ಜಗತ್ತನ್ನು ಸೃಷ್ಟಿಸುವ ಪರಮಾತ್ಮನ ವಿಷಯವಾಗಿ ಜಿಜ್ಞಾಸೆ ಮಾಡಬೇಕೆಂದು ಹೇಳುತ್ತವೆ. ಆ ಪರಮಾತ್ಮನಲ್ಲಿ ಅನೇಕ ಸದ್ಗುಣಗಳುಂಟು, ಆ ಪರಮಾತ್ಮನ ವಿಷಯವಾಗಿ ಜ್ಞಾನವನ್ನು ಸಂಪಾದಿಸಿ ಅವನ ಪ್ರಸಾದದಿಂದ ಮೋಕ್ಷವನ್ನು ಹೊಂದಿ ಆ ಮೋಕ್ಷದಲ್ಲಿ ' ಸರ್ವಾನ್ ಕಾಮಾನಾಪ್ತ್ವಾ ಅಮೃತ ಸಮಭವತ್' = ' ಜೀವನು ತನ್ನಿಂದ ಇಚ್ಛಿತವಾದ ಪದಾರ್ಥಗಳನ್ನು ಹೊಂದಿ ಮರಣ ರಹಿತ ನಾಗುತ್ತಾನೆ ' ಮತ್ತು ' ಜಕ್ಷನ್ ಕ್ರೀಡನ್ ರಮಮಾಣ. '=ಭುಂಜಿಸುತ್ತ ಕ್ರೀಡಿಸುತ್ತ ರಮಿಸುತ್ತಾನೆ

ಇತ್ಯಾದಿವಾಕ್ಯಗಳಲ್ಲಿ ಹೇಳಿರುವಂತೆ ಸುಖವನ್ನು ( ಸ್ವರೂಪಸುಖ ) ಅನುಭವಿಸುತ್ತ ' ಏತತ್ ಸಾಮಗಾಯನ್ನಾಸ್ತೇ ' ಇಲ್ಲಿ ಹೇಳಿದಂತೆ ಮುಕ್ತ ಜೀವರು ಪರಮಾತ್ಮನ ಸ್ತೋತ್ರಮಾಡುತ್ತ ಇರುತ್ತಾರೆ. ಆದುದರಿಂದ ಜ್ಞಾನ, ಜ್ಞಾತಾ, ( ಜ್ಞಾನವನ್ನು ಸಂಪಾದಿಸುವವನು, ) ಜ್ಞೇಯ ಜ್ಞಾನಕ್ಕೆ ವಿಷಯವಾದ ವಸ್ತು ಇತ್ಯಾದಿ ಸಮಸ್ತ ಜಗತ್ತಿಗೆ ಸತ್ಯತ್ವವು ಸಿದ್ಧಿಸುವುದು.

೬ ' ಘಟಃ ಸನ್, ಪಟಃ ಸನ್ ' ‡ ಇತ್ಯಾದಿ ಪ್ರತ್ಯಕ್ಷಗಳೂ ಮತ್ತು ' ಜಗತ್ ಸತ್ಯಂ ಅರ್ಥಕ್ರಿಯಾ ಕಾರಿತ್ವಾತ್ ' ಪದಾರ್ಥಗಳನ್ನು ಹುಟ್ಟಿಸುವುದರಿಂದ ಜಗತ್ತು ಸತ್ಯವಾದುದು ಇತ್ಯಾದಿ ಅನುಮಾನಗಳೂ ಜಗತ್ತು ಸತ್ಯವೆಂದು ತಿಳಿಸುತ್ತವೆ. ಹೆಚ್ಚು ಹೇಳುವದೇನು, ಎಷ್ಟು ತರದ ಪ್ರಮಾಣಗಳುಂಟೋ ಅವೆಲ್ಲವೂ ಮುಂದೆ ತೋರಿಸಿದಂತೆ ತಮಗೆ ವಿಷಯೀಭೂತವಾದ ಸಕಲ ವಸ್ತುಗಳನ್ನು ಸತ್ಯವಾದುವು ಎಂದು ಹೇಳುತ್ತವೆ

ಪ್ರಮಾಣ ಎಂಬ ಪದದಲ್ಲಿ ಪ್ರ+ಮಾ+ಅನ ( ಲ್ಯುಟ್ )† ಹೀಗೆ ಮೂರು ಅಂಶಗಳು ಇವೆ. ' ಪ್ರ ' ಎಂದರೆ ಯಥಾರ್ಥ=ವಸ್ತುವನ್ನು ಸ್ವರೂಪಾನುಸಾರ ವಿಷಯೀಕರಿಸುವ, ಮಾ=ಜ್ಞಾನ, ಇದನ್ನು ಅನ (ಲ್ಯುಟ್)=ಹುಟ್ಟಿಸುವುದು ಎಂತ ಪ್ರಮಾಣ=ವೆಂದರೆ ಸತ್ಯ ಪದಾರ್ಥಗಳನ್ನು ತಿಳಿಸುವ ಜ್ಞಾನವನ್ನು ಹುಟ್ಟಿಸುವುದು. ತಾನು ಹುಟ್ಟಿಸಿ ಕೊಡುವ ಜ್ಞಾನಕ್ಕೆ ವಿಷಯೀಭೂತವಾದ ವಸ್ತುವು

---

‡ ಘಟವು ( ಕೊಡವು ) ಸತ್ಯವಾದುದು, ಪಟ=ಬಟ್ಟೆಯು ಸತ್ಯವಾದುದು ಇತ್ಯಾದಿ ಪ್ರತ್ಯಕ್ಷವಾಗಿ ಅನುಭವಕ್ಕೆ ಬರತಕ್ಕ ವಿಷಯಗಳು.

† ಪ್ರತ್ಯಯದ ಸಂಜ್ಞೆ.

ಸತ್ಯವಾದುದು ಹೀಗೆ 'ಪ್ರಮಾಣ' ಎಂಬುದರ ಅರ್ಥವಾಗುವ್ದರಿಂದ ವೇದ, ಗೀತಾ, ಪ್ರತ್ಯಕ್ಷ, ಅನುಮಾನ, ಬ್ರಹ್ಮಸೂತ್ರ, ಇವು ಪ್ರಮಾಣಗಳು ಹೀಗೆ ಪ್ರತಿವಾದಿಯು ಅಂಗೀಕಾರ ಮಾಡಿರುವುದರಿಂದ ಆ ವೇದಾದಿ ಪ್ರಮಾಣಗಳಿಂದ ಬೋಧ್ಯವಾಗುವ ಜಗತ್ತು ಸತ್ಯವೆಂದು ಒಪ್ಪ ಬೇಕಾಗುವುದು ಆದುದರಿಂದ ವೇದಾದಿ ಸಕಲ ಪ್ರಮಾಣಗಳಿಂದ ಬೋಧ್ಯವಾಗುವ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆಂದು ಕೋರ್ಟಿನವರು ಮನ್ನಿಸುತ್ತಾರೆ.

'ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂರಾಜನ್ಯ ಕೃತಃ | ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ' ಇತ್ಯಾದಿ ವೇದ ವಾಕ್ಯಗಳಿಂದ 'ಚಾತುರ್ವರ್ಣ್ಯಂ ಮಯಾಸೃಷ್ಟಂ' 'ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ' ಇತ್ಯಾದಿ ಗೀತಾವಾಕ್ಯಗಳಿಂದ, 'ಕ್ಷತ್ರಿಯತ್ವಾವಗತೇಶ್ಚ' ಇತ್ಯಾದಿ ಬ್ರಹ್ಮಸೂತ್ರಗಳಿಂದ ಬ್ರಾಹ್ಮಣಾದಿವರ್ಣಗಳು ಸತ್ಯವೆಂದು ಸಿದ್ಧವಾಗುತ್ತವೆ

'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' ಇತ್ಯಾದಿ ಶ್ರುತಿಗಳು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ ಇವು ನಾಲ್ಕು ಆಶ್ರಮಗಳು ಸತ್ಯವೆಂದು ತಿಳಿಸುತ್ತವೆ '

'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ವಸಂತೇ ಬ್ರಾಹ್ಮಣೋ ಅಗ್ನೀನಾದಧೀತ' (ವೇದ) 'ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ' ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ (ಗೀತಾ) 'ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್' (ಸೂತ್ರ) ಇತ್ಯಾದಿ ವೇದ,ಗೀತಾ, ಬ್ರಹ್ಮಸೂತ್ರವಾಕ್ಯಗಳಿಂದ ಯಜ್ಞ, ನಿಜವೆಂದು ಸಿದ್ಧವಾಗುತ್ತದೆ.

"ಅಗ್ನಿರ್ವೈ ದೇವಾನಾಂ ಅವಮೋ ವಿಷ್ಣುಃ ಪರಮಃ ತದಂತರೇಣ ಸರ್ವಾ ಅನ್ಯಾ ದೇವತಾ" ಇತ್ಯಾದಿ ವೇದವಾಕ್ಯಗಳಿಂದ ದೇವತೆಗಳು ಇದ್ದಾರೆಂದು ಸಿದ್ಧವಾಗುತ್ತದೆ

'ಋಗ್ವೇದಂ ಭಗವೋಽಧ್ಯೇಮಿ ಯಜುರ್ವೇದಂ ಸಾಮವೇದಂ ಆಥರ್ವಣಂ (ಛಾ | ೭-೧ ೨) ಇತ್ಯಾದಿ ವೇದವಾಕ್ಯಗಳಿಂದ 'ವೇದೇಷು ಯಜ್ಞೇಷು ತಪಸ್ಸು ಚೈವ,' 'ವೇದವಿದೇವ ಚಾಹಂ,' ಇತ್ಯಾದಿ ಗೀತಾ ವಾಕ್ಯಗಳಿಂದ ವೇದವು ಸತ್ಯವೆಂದು ಸಿದ್ಧವಾಗುತ್ತವೆ.

'ಇಮಂ ಮೇ ಗಂಗೇ ಯಮುನೇ ಸರಸ್ವತೀ' ಇತ್ಯಾದಿ ವೇದವಾಕ್ಯಗಳಿಂದ ಗಂಗಾದಿತೀರ್ಥಗಳು ಸತ್ಯವೆಂದು ನಿರ್ಣೀತವಾಗುತ್ತವೆ.

'ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದ ವಾಕ್ಯಗಳಿಂದ ಮತ್ತು ಸ್ವರ್ಗದ್ವಾರಮಪಾವೃತಂ' ಇತ್ಯಾದಿ ಗೀತಾವಾಕ್ಯಗಳಿಂದ ಸ್ವರ್ಗಾದಿ ಲೋಕಗಳು

ಸತ್ಯ ಭೂತವಾದುವು ಎಂದು ಸಿದ್ಧವಾಗುತ್ತದೆ. 'ಭೂರಿತಿ ವಾ ಅಯಂ ಲೋಕ' ಇತ್ಯಾದಿ ವೇದಾದಿ ಪ್ರಮಾಣಗಳಿಂದ ಈ ಲೋಕವು ಸತ್ಯವೆಂದು ಸಿದ್ಧವಾಗುತ್ತದೆ.

ಜಗತ್ತು ಸುಳ್ಳೆಂದು ಸಾಧಿಸುವುದಕ್ಕಾಗಿ ಪ್ರತೀವಾದಿಯೂ, ಅವನ ಕಡೆಯ ಸಾಕ್ಷಿಗಳೂ ಹೇಳಿದ ವೇದಗಳೂ, ಸೂತ್ರಗಳೂ ಜಗತ್ತನ್ನು ಸುಳ್ಳೆಂದು ಸಾಧಿಸುವುದಿಲ್ಲ

---

ಕಾರಣಗಳು —

೧ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಈ ಶ್ರುತಿಯಲ್ಲಿ ಜಗತ್ತಿಗೆ ಮಿಥ್ಯಾತ್ವ ಬೋಧಕವಾದ (ಜಗತ್ತು ಸುಳ್ಳೆಂದು ತಿಳಿಸಿ ಕೊಡುವ ) ಪದವೇ ಇಲ್ಲ

'ವಾಚಾರಂಭಣಂ' ಈ ಪದವು, 'ಶಬ್ದದಿಂದ ಪ್ರತಿಪಾದ್ಯವಾದಂತಹುದು' ಎಂಬಿಷ್ಟೇ ಅರ್ಥವನ್ನು ತಿಳಿಸುತ್ತದೆ 'ನಾಮಧೇಯಂ' ಎಂಬ ಈ ಪದವು 'ಹೆಸರು' ಎಂಬಿಷ್ಟೇ ಅರ್ಥವನ್ನು ತಿಳಸುತ್ತದೆ ಮಿಥ್ಯ ಎಂಬ ಅರ್ಥವೂ ಶಬ್ದ ಪ್ರತಿಪಾದ್ಯ ಎಂಬ ಅರ್ಥವೂ ಒಂದೇ ಅಲ್ಲ, ಏಕೆಂದರೆ 'ಬ್ರಹ್ಮವು' ಕೂಡ ಶಬ್ದಪ್ರತಿಪಾದ್ಯವಾದುದರಿಂದ ಮಿಥ್ಯಾ ಆಗ ಬೇಕಾಗುವದು ಅದುದರಿಂದ 'ವಾಚಾರಂಭಣಂ' ಮತ್ತು 'ನಾಮಧೇಯಂ' ಎಂಬ ಈ ಎರಡು ಪದಗಳಿಂದ ಮಿಥ್ಯೆ ಎಂಬರ್ಥವು ಬೋಧವಾಗುವದಿಲ್ಲ

'ವಾಚಾರಂಭಣಂ' ಎಂಬೀಪದದ ಮುಂದೆಯೂ, 'ನಾಮಧೇಯಂ' ಎಂಬ ಪದದ ಮುಂದೆಯೂ, 'ಮಾತ್ರಂ' ಎಂಬ ಪದವನ್ನು ತಮ್ಮ ಕೈಯಿಂದ ಸೇರಿಸಿ, 'ವಾಚಾರಂಭಣಂ ಮಾತ್ರಂ' 'ಕೇವಲ ಶಬ್ದದಿಂದ ಪ್ರತಿಪಾದ್ಯ'=ನಿಜವಲ್ಲ, 'ನಾಮಧೇಯಮಾತ್ರಂ' = ಹೆಸರು ಮಾತ್ರವೇ = ವಸ್ತುವಿಲ್ಲ, ಹೀಗೆ 'ಮಾತ್ರಂ' ಶಬ್ದವನ್ನು ಸೇರಿಸಿ ಕೊಂಡು ಹೇಳಿದ ಮಿಥ್ಯಾ ಎಂಬ ಅರ್ಥವು ವೇದಾರ್ಥ ವಾಗದು ಇಲ್ಲದ ಪದವನ್ನು ಸೇರಿಸಿಕೊಂಡು ಮಾಡಿದ ಅರ್ಥವು ವೇದಾರ್ಥ ವಾದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಈ ವಾಕ್ಯದಲ್ಲಿಯಾದರೂ 'ನ, ನ, ನ,' ಹೀಗೆ ಪದಗಳನ್ನು ಸೇರಿಸಿ ಕೊಂಡು, 'ಬ್ರಹ್ಮ ಸತ್ಯಂ ನ' =' ಬ್ರಹ್ಮನು ನಿಜವಾದ ವಸ್ತು ಅಲ್ಲ, ' 'ಬ್ರಹ್ಮ ಜ್ಞಾನಂ ನ' = ಬ್ರಹ್ಮನು ಜ್ಞಾನ ರೂಪನಲ್ಲ,' ಬ್ರಹ್ಮ ಅನಂತನ್ನ '=ಬ್ರಹ್ಮನು ಅಪರಿಚ್ಛಿನ್ನನು (ಪರಿಮಿತಿ ಇಲ್ಲದವನು,) ಅಲ್ಲ, ಹೀಗೆ ಮಾಡಿದ ಅರ್ಥವೂ ಕೂಡ ಶ್ರುತ್ಯರ್ಥ ವಾಗಬೇಕಾದೀತು. ಆದುದರಿಂದ 'ವಾಚಾರಂಭಣಂ ವಿಕಾರೋ ನಾಮಧೇಯಂ' ಈ ವಾಕ್ಯದಲ್ಲಿ ಮಿಥ್ಯಾತ್ವವನ್ನು ( ಮೂರುಕಾಲದಲ್ಲಿಯೂ ಇಲ್ಲದಿರುವದು ಎಂಬ ಅರ್ಥವನ್ನು ) ಬೋಧಿಸುವ ಪದವು ಇಲ್ಲದಿರುವುದರಿಂದ ಈ ಶ್ರುತಿಯಿಂದ ಜಗತ್ತಿಗೆ ಮಿಥ್ಯಾತ್ವವು ಸಿದ್ಧಿಸುವುದಿಲ್ಲ.

ಶಂಕರಾಚಾರ್ಯರು ಮೃತ್ತಿಕೆಯ ವಿಕಾರವಾದ ಘಟಾದಿರೂಪ ಪದಾರ್ಥವು ಮಿಥ್ಯಾ=ಸುಳ್ಳು ಅದಕ್ಕೆ ಕಾರಣವಾದ ಮೃತ್ತಿಕೆ=ಮಣ್ಣು ಸತ್ಯವೆಂದೂ ಈ ವೇದವಾಕ್ಯದ ಅರ್ಥವನ್ನು ಮಾಡಿದ್ದಾರೆ ಹೀಗೆ ಅರ್ಥಮಾಡಿದರೂ ಸರ್ವ ಜಗತ್ತು ಮಿಥ್ಯೆ ಎಂದು ಸಿದ್ಧಿಸುವುದಿಲ್ಲ ಇಷ್ಟೇ ಅಲ್ಲ ಪ್ರತ್ಯುತ ( ಇದರ ವಿರುದ್ಧವಾಗಿ ) ಬ್ರಹ್ಮನಿಂದ ಭಿನ್ನವಾದ ಮೃತ್ತಿಕಾರೂಪ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ.

ಈ ವಾಕ್ಯಕ್ಕೆ ಮೃತ್ತಿಕೆಯ ಸತ್ಯತ್ವವನ್ನು ಬೋಧಿಸುವ ತಾತ್ಪರ್ಯವು ಇಲ್ಲವೆಂದು ಹೇಳಿದರೆ ಕಾರಣಭೂತವಾದ ಮೃತ್ತಿಕೆಯು ಸತ್ಯವು ಕಾರ್ಯಭೂತವಾದ ಘಟವು ಮಿಥ್ಯೆಯು ಎಂದು ತಿಳಿಸುವುದರದ್ವಾರಾ ಕಾರಣ ಭೂತವಾದ ಬ್ರಹ್ಮನು ಸತ್ಯನು ಕಾರ್ಯಭೂತವಾದ ಜಗತ್ತು ಮಿಥ್ಯಾ ಎಂದು ನಿರೂಪಿಸುತ್ತದೆ ಎಂಬುದು ಕೂಡುವದಿಲ್ಲ ಆದುದರಿಂದ ಈ ವೇದವು ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವ ವಿಷಯದಲ್ಲಿ ಆಧಾರ (ಪ್ರಮಾಣ) ವಾಗಲಾರದು

೨ ' ಐತದಾತ್ಮ್ಯಮಿದಂ ಸರ್ವಂ ತತ್‌ಸತ್ಯಂ ' ಈ ಶ್ರುತಿಯಲ್ಲಿಯೂ ಜಗತ್ತಿಗೆ ಮಿಥ್ಯಾತ್ವ ಬೋಧಕವಾದ ಪದವಿಲ್ಲ ಆದರೂ 'ತತ್‌ಸತ್ಯಂ' ಈ ವಾಕ್ಯದಲ್ಲಿ ' ಏವ ' ಪದವನ್ನು ಕೈಯಿಂದ ಸೇರಿಸಿ, ' ತತ್ ಏವ ಸತ್ಯಂ '=ಬ್ರಹ್ಮವೊಂದೇ ಸತ್ಯವಾದುದು. ( ಬೇರೆ ಯಾವದೂ ಸತ್ಯವಲ್ಲ ) ಹೀಗೆ ' ಏವ ' ಪದವನ್ನು ಕೈಯಿಂದ ಸೇರಿಸಿಕೊಂಡು ಅರ್ಥ ಮಾಡಿದರೆ ಅದು ವೇದದ ನಿಜವಾದ ಅರ್ಥವಾಗಲಾರದು. ಆದುದರಿಂದ ಈ ವೇದವಾಕ್ಯವು ಕೂಡ ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವ ವಿಷಯದಲ್ಲಿ ಸಾಧಕವಾಗಲಾರದು

೩ ' ಇದಂ ಸರ್ವ ಯದಯಮಾತ್ಮಾ' ಈ ಶ್ರುತಿಯಲ್ಲಿಯೂ ಕೂಡ ಜಗತ್ತಿಗೆ ಮಿಥ್ಯಾತ್ವ ಬೋಧಕವಾದ ಪದವಿಲ್ಲ. ' ಇದಂ ಸರ್ವಂ '=ಈ ಎಲ್ಲಾ ಜಗತ್ತು ಯತ್=ಯಾವನಲ್ಲಿ ಆಶ್ರಿತವಾಗಿದೆಯೋ ' ಅಯಮಾತ್ಮಾ ' = ಆ ಆಶ್ರಯಭೂತವಾದ ವಸ್ತು ಪರಮಾತ್ಮನು ಈ ಪ್ರಕಾರವಾಗಿ ಜಗತ್ತಿಗೆ ಪರಮಾತ್ಮನು ಆಧಾರನೆಂದು ಈ ಶ್ರುತಿಯು ಹೇಳುತ್ತದೆ. ಈ ಅರ್ಥವು ' ಬ್ರಹ್ಮ ತಂ ಪರಾದಾತ್ ಯೋಽನ್ಯತ್ರಾತ್ಮನೋ ಬ್ರಹ್ಮ ವೇದ ' ಇತ್ಯಾದಿ ಪೂರ್ವ ವಾಕ್ಯದಲ್ಲಿ ಬ್ರಾಹ್ಮಣಾದಿ ಸರ್ವ ಜಗತ್ತು ಪರಮಾತ್ಮನನ್ನು ಆಶ್ರಯಿಸಿಕೊಂಡಿದೆ, ಹೀಗೆಂದು ಹೇಳಿರುವದರಿಂದ ' ಇದಂ ಸರ್ವಂ' ಇದರ ಅರ್ಥವು ಪೂರ್ವ ವಾಕ್ಯದಿಂದ ದೃಢೀಕೃತವಾಗುತ್ತದೆ ' ಯತ್ ' ಈ ಶಬ್ದದ ಅರ್ಥವನ್ನು ' ಯಸ್ಮಿನ್ ' ( ಯಾವಾತನಲ್ಲಿ ) ಎಂದು ಇಟ್ಟುಕೊಂಡರೆ ಆ ಪದಕ್ಕೆ ಸಾರ್ಥಕ್ಯ ಉಂಟಾಗುತ್ತದೆ,

ಪ್ರತಿವಾದಿಯು ಹೇಳಿದ ಇದಂ ಸರ್ವಂ=ಈ ಸಮಸ್ತ ಜಗತ್ತು ಅಯಮಾತ್ಮಾ ಈ ಬ್ರಹ್ಮನಲ್ಲಿ ಆರೋಪಿತವಾದುದು ಎಂಬ ಅರ್ಥವನ್ನು ಒಪ್ಪಿಕೊಂಡರೆ 'ಯತ್'

ಎಂಬ ಪದವು ವ್ಯರ್ಥವಾಗುವದು ವ್ಯರ್ಥವಾದರೂ 'ಇದಂ ಸರ್ವಂ' ಇದೆಲ್ಲವೂ ಆಯುಮಾತ್ಮಾ=ಆ ಆತ್ಮವಿದೆ ಎಂದಿಷ್ಟು ಅರ್ಥವಾಗುವದು ಜಗತ್ತು ಮಿಥ್ಯಾ (ಕಲ್ಪಿತ) ಎಂದು ಅರ್ಥವಾಗುವದಿಲ್ಲ 'ಆತ್ಮಾ' ಎಂಬಪದಕ್ಕೆ ಮುಖ್ಯಾರ್ಥ ಕೂಡ ದಿದ್ದರೆ ಆತ್ಮನಲ್ಲಿ ಕಲ್ಪಿತ ಎಂದು ಅಮುಖ್ಯಾರ್ಥವನ್ನು ಮನ್ನಿಸುವದಕ್ಕೆ ಆಧಾರ ವಿಲ್ಲ, ಮುಖ್ಯಾರ್ಥ ಕೂಡದಿದ್ದರೆ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು. ಹೀಗೆ ಇದ್ದರೂ ಬೇರೆ ವೇದವಾಕ್ಯಗಳ ಆಧಾರದಿಂದ, ಆತ್ಮಾ=ಆತ್ಮಾಧೀನ, ಆ ತ್ಮಾಶ್ರಿತ ಇತ್ಯಾದಿಯಾಗಿ ಅರ್ಥವನ್ನಿಟ್ಟುಕೊಳ್ಳುವದೇ ಯೋಗ್ಯವಾಗುವದು. ಆದುದರಿಂದ ಈ ವಾಕ್ಯವು ಕೂಡ ಜಗತ್ತು ಆತ್ಮನಲ್ಲಿ ಕಲ್ಪಿತ ( ಮಿಥ್ಯಾ ) ಎಂಬ ರ್ಥವನ್ನು ಕೊಡುವದಿಲ್ಲ

೪ 'ಬ್ರಹ್ಮೈವೇದಂ ಸರ್ವಂ' ಈ ಶ್ರುತಿಯಲ್ಲಿಯೂ ಜಗತ್ತಿಗೆ ಮಿಥ್ಯಾತ್ವ ಬೋಧಕವಾದ ಪದವಿಲ್ಲ 'ಇದಂ ಸರ್ವಂ ಬ್ರಹ್ಮೈವ' ಈ ವಾಕ್ಯದಲ್ಲಿರುವ 'ಬ್ರಹ್ಮ' ಶಬ್ದದ ಅರ್ಥವು 'ಬ್ರಹ್ಮನಲ್ಲಿ ಕಲ್ಪಿತ' ವೆಂದು ಮುಖ್ಯಾರ್ಥವಾಗಲಾ ರದು 'ವಿಶ್ವಮಿದಂ ವರಿಷ್ಠಂ' ಈ ಮುಂದಿನ ವಾಕ್ಯದಲ್ಲಿ ಜಗತ್ತು ಉತ್ತಮವೆಂ ದು ಹೇಳಿರುತ್ತದೆ. ಜಗತ್ತು ಸುಳ್ಳಾದರೆ ಆ ಜಗತ್ತು ಉತ್ತಮವೆಂದು ಹೇಗೆ ಹೇ ಳುವದು 'ಬ್ರಹ್ಮೈವಾಧಸ್ತಾತ್ ಬ್ರಹ್ಮ ಉಪರಿಷ್ಟಾತ್' ಇತ್ಯಾದಿ ಪೂರ್ವ ವಾಕ್ಯಗಳಿಂದ ಬ್ರಹ್ಮನು ಕೆಳಭಾಗದಲ್ಲಿದ್ದಾನೆ, ಮೇಲಿನ ಭಾಗದಲ್ಲಿದ್ದಾನೆ, ಹೀ ಗೆಂದು ಬ್ರಹ್ಮನ ವ್ಯಾಪ್ತಿಯು ಗೊತ್ತಾಗುವದು ಆದುದರಿಂದ 'ಬ್ರಹ್ಮೈವೇದಂ ಸರ್ವಂ' ಈ ವಾಕ್ಯವು 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಂ' ಎಂಬೀ ಗೀತಾವಾಕ್ಯಾನುಸಾರವಾಗಿ 'ಬ್ರಹ್ಮ ಸರ್ವಂ' = ಬ್ರಹ್ಮನು ಸರ್ವ ವ್ಯಾಪಕನಾಗಿ ದ್ದಾನೆ ಎಂದು ಅರ್ಥ ಮಾಡುವದೇ ಸರಿ ಆದುದರಿಂದ ಈ ವಾಕ್ಯವು ಕೂಡ ಜಗ ತ್ತಿಗೆ ಮಿಥ್ಯಾತ್ವವನ್ನು ಬೋಧಿಸುವದಿಲ್ಲ 'ಆತ್ಮೈವೇದಂ ಸರ್ವಂ' ಈ ವಾಕ್ಯದ ಲ್ಲಿಯೂ ಜಗತ್ತು ಮಿಥ್ಯಾ ಎಂದು ತಿಳಿಸುವ ಪದವಿಲ್ಲ 'ಇದಂ ಸರ್ವ ಆತ್ಮಾ' ಇದರಲ್ಲಿರುವ ಆತ್ಮಾ ಎಂಬ ಪದಕ್ಕೆ 'ಆತ್ಮನಲ್ಲಿ ಕಲ್ಪಿತ' ಎಂದು ಮುಖ್ಯಾರ್ಥವಾ ಗುವದಿಲ್ಲ 'ಆತ್ಮೈವ ಅಧಸ್ತಾತ್ ಉಪರಿಷ್ಟಾತ್' ಇತ್ಯಾದಿ ಪೂರ್ವ ವಾಕ್ಯಗ ಳಲ್ಲಿ ಪರಮಾತ್ಮನ ವಾಸವು ಆಯಾ ಸ್ಥಳದಲ್ಲಿ ನಿರೂಪಿತವಾಗಿ, ಅವುಗಳ ಮುಂದಿ ನ 'ಆತ್ಮೈವೇದಂ ಸರ್ವಂ' ಎಂಬ ವಾಕ್ಯವು ಪರಮಾತ್ಮನ ಸರ್ವತ್ರವ್ಯಾಪ್ತಿಯ ನ್ನು ಹೇಳುತ್ತದೆ ಹೀಗೆಂದು ಹೇಳುವದೇ ಯುಕ್ತವಾಗುವದು ಯಾಕಂದರೆ ಪೂರ್ವ ವಾಕ್ಯದಲ್ಲಿ ಆತ್ಮನನ್ನು ಉದ್ದೇಶಿಸಿ ಆತ್ಮನು ಕೆಳಭಾಗದಲ್ಲಿ ಮತ್ತು ಮೇ ಲಿನ ಭಾಗದಲ್ಲಿ ಇದ್ದಾನೆ ಎಂದು ಹೇಳಿದುದರಿಂದ 'ಆತ್ಮೈ ವೇದಂ ಸರ್ವಂ' ಎಂಬ ವಾಕ್ಯವು ಕೂಡ ಆತ್ಮನನ್ನೇ ಉದ್ದೇಶಿಸಿ ಆತನ ಸರ್ವ ವ್ಯಾಪ್ತಿಯನ್ನು ವಿ ಧಾನ ಮಾಡುವದು ಎಂದು ಹೇಳುವದೇ ಯುಕ್ತವಾಗುವದು. ಜಗತ್ತನ್ನು ಉ ದ್ದೇಶಿಸಿ 'ಆತ್ಮನಲ್ಲಿ ಕಲ್ಪಿತವಾದುದು' ಎಂದು ವಿಧಾನ ಮಾಡುವುದು ಪೂರ್ವ

ವಾಕ್ಯಕ್ಕೆ ಅನುಗುಣವಾಗುವದಿಲ್ಲ ಈ ವಾಕ್ಯದ ಮುಂದಿನ ವಾಕ್ಯದಲ್ಲಿಯೇ ಪರಮಾತ್ಮನು ಪೂರ್ಣ (ವ್ಯಾಪ್ತ) ನಿದ್ದಾನೆಂದು ತಿಳಿಯುವ ಮನುಷ್ಯನು ಲೋಕಗಳಲ್ಲಿ ಸ್ವೇಚ್ಛೆಯಾಗಿ ಸಂಚರಿಸಲು ಸಮರ್ಥನಾಗುತ್ತಾನೆ ಯಾವನು ಹೀಗೆ ತಿಳಿಯುವದಿಲ್ಲವೋ ಅವನು ಸರ್ವ ಲೋಕದಲ್ಲಿ ಸಂಚರಿಸಲು ಸಮರ್ಥನಾಗಲಾರನು. ಹೀಗೆ ಸಮಸ್ತ ಲೋಕಗಳು, ಸಂಚಾರ, ಮತ್ತು ಸಂಚಾರ ಮಾಡುವವನು ಇತ್ಯಾದಿ ಜಗತ್ತು ಉಂಟೆಂದು ನಿರೂಪಿಸಿ(ಪ್ರಸಕ್ತಿ)ಇರುವದರಿಂದ ಮೊದಲಿನ ವಾಕ್ಯದಲ್ಲಿ ಸರ್ವ ಜಗತ್ತು ಮಿಥ್ಯಾ ( ತ್ರಿಕಾಲದಲ್ಲಿ ಇಲ್ಲದಿರುವದು ) ಎಂದು ಹೇಳುವದು ಉತ್ತರ ವಾಕ್ಯಗಳಿಂದ ವಿರುದ್ಧವಾಗುವುದು. ಆದುದರಿಂದ ಈ ವಾಕ್ಯವು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವದಿಲ್ಲ

೫೯ ಕಾರಕ ಮತ್ತು ಬೃಹದಾರಣ್ಯದಲ್ಲಿರುವ ' ನೇಹ ನಾನಾಸ್ತಿ ಕಿಂಚನ ' ಈ ವಾಕ್ಯದಲ್ಲಿಯೂ ಕೂಡ ಜಗತ್ತು ಮಿಥ್ಯೆ ಎಂದು ಬೋಧಿಸುವ ಪದವಿಲ್ಲ

ಕ್ರಾಸ್ ಎಕ್ಸಾಮಿನೇಶನದಲ್ಲಿ ( ಜರ್ಹಾದಲ್ಲಿ ) ಪ್ರತಿವಾದಿಯ ಸಾಕ್ಷಿಯು ಕಾರಕಸ್ಥ ವಾಕ್ಯದ ಪೂರ್ವದಲ್ಲಿರುವ ' ಈಶಾನೋ ಭೂತಭವ್ಯಸ್ಯ ' ಎಂಬ ಐದನೆಯ ಮಂತ್ರದಲ್ಲಿ ಮೊದಲು ಸೃಷ್ಟವಾದ ಜಗತ್ತಿಗೂ ಮತ್ತು ಮುಂದೆ ಸೃಷ್ಟವಾಗುವ ಜಗತ್ತಿಗೂ ಪರಮಾತ್ಮನೇ ನಿಯಾಮಕನಾಗಿದ್ದಾನೆಂದು ಹೇಳಿ, ಜಗತ್ತಿನ ಸತ್ಯತ್ವವನ್ನು ಹೇಳುತ್ತದೆಂದು ಒಪ್ಪಿದ್ದಾನೆ. ಮತ್ತು ' ನೇಹ ನಾನಾಸ್ತಿ ಕಿಂಚನ ' ಎಂಬ ಮಂತ್ರಕ್ಕೂ ಪೂರ್ವದಲ್ಲಿರುವ ' ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ತಂ ದೇವಾಸ್ಸರ್ವೇ ಅರ್ಪಿತಾಃ ತದು ನಾತ್ಯೇತಿ ಕಶ್ಚನ ಈ ೯ನೆಯ ಮಂತ್ರದ ಅರ್ಥವು ಯಾವ ಪರಮಾತ್ಮನ ಪ್ರೇರಣೆಯಿಂದ ಸೂರ್ಯನ ಉದಯವೂ ಅಸ್ತವೂ ಆಗುವದೋ ಯಾವಾತನ ಆಶ್ರಯದಿಂದ ದೇವತೆಗಳು ಇರುವರೋ ಆ ಪರಮಾತ್ಮನನ್ನು ಮೀರುವವರು ಯಾರೂ ಇಲ್ಲ ಎಂದು ಇರುವುದರಿಂದಲೂ, ಮತ್ತು ಈ ಅರ್ಥವನ್ನೇ ಪ್ರತಿವಾದಿಯು ಒಪ್ಪಿರುವುದರಿಂದಲೂ ಈ ವಾಕ್ಯದಿಂದ ಸೂರ್ಯಾದಿ ಜಗತ್ತು ಸತ್ಯವೆಂದು ಸಿದ್ಧವಾಗುವದು ' ನೇಹ ನಾನಾಸ್ತಿ ಕಿಂಚನ ' ಈ ವಾಕ್ಯದಿಂದ ಜಗತ್ತನ್ನು ನಿಷೇಧ ಮಾಡುವದಕ್ಕಾಗಿ ಮೇಲೆ ಉದಾಹೃತವಾದ ಮಂತ್ರಗಳಲ್ಲಿ ಆ ಜಗತ್ತಿನ ಅನುವಾದ ಮಾಡಿದೆ ಎಂದು ಹೇಳುವದು ಕೂಡುವದಿಲ್ಲ. ಏಕೆಂದರೆ ಯಾವುದಾದರೂ ಒಂದು ಪ್ರಮಾಣದಿಂದ ಪದಾರ್ಥವು ಪೂರ್ವದಲ್ಲಿ ಪ್ರಸಕ್ತಿಯಾಗಿದ್ದರೆ ಅದರ ಅನುವಾದವನ್ನು ಮಾಡಿ ಇತರ ಪ್ರಮಾಣಗಳಿಂದ ನಿಷೇಧಿಸಬಹುದು. ಪ್ರಸ್ತುತ ಅನ್ಯ ಪ್ರಮಾಣಗಳಿಂದ ಸ್ವರ್ಗಾದಿ ಇತರ ಜಗತ್ತಿನ ಪ್ರಸಕ್ತಿಯೇ ಇಲ್ಲದೆ ವೇದವು ತಾನೇ ಜನರಿಗೆ ಸ್ವರ್ಗಾದಿ ಜಗತ್ತು ಇದೆ ಎಂದು ಭ್ರಮೆಯನ್ನು ಹುಟ್ಟಿಸಿ ಆ ಮೇಲೆ ತಾನೇ ನಿಷೇಧಿಸುದುದು ಎಂದು ಹೇಳುವದು 'ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ

ಬುದ್ಧಿಪೂರ್ವಕವಾಗಿ ಕೆಸರು ಹಚ್ಚಿಕೊಂಡು ಆ ಮೇಲೆ ಅದನ್ನು ತೊಳೆದುಕೊಳ್ಳು ವದಕ್ಕಿಂತ ಮೊದಲೇ ಕೆಸರನ್ನು ಹಚ್ಚಿಕೊಳ್ಳದಿರುವುದು ಮೇಲು' ಎಂಬ ನ್ಯಾಯಾನುಸಾರವಾಗಿ ವಿರುದ್ಧವಾಗುತ್ತದೆ.

ಮೇಲೆ ತೋರಿಸಿದಂತೆ ವೇದವೇ ಸ್ವರ್ಗಾದಿ ಲೋಕಗಳು ಇವೆ ಎಂದು ಭ್ರಮೆಯನ್ನು ಹುಟ್ಟಿಸಿ ಅದೇ ವೇದವೇ ಆಮೇಲೆ ನಿಷೇಧಿಸುವುದೆಂದು ಹೇಳುವುದು ಮೇಲೆ ತೋರಿಸಿದ 'ಪ್ರಕ್ಷಾಲನಾದ್ಧಿ ಪಂಕಸ್ಯ' ಎಂಬ ನ್ಯಾಯಾನುಸಾರ ವಿರುದ್ಧವಾಗುವದೆಂಬ ದೂಷಣ ತಮ್ಮ ಮೇಲೆ ಬರುವದು ಎಂದು ತಮಗೆ ಗೊತ್ತಿದ್ದರೂ ಶಂಕರಾಚಾರ್ಯರು ಕೇವಲ ತಮ್ಮ ಮತದ ಮೇಲಿನ ಆಗ್ರಹದ ಮೂಲಕ ಜಗತ್ತಿನ ಸತ್ಯತ್ವವನ್ನು ಬೋಧಿಸುವ ವಿಷಯದಲ್ಲಿ ವೇದಕ್ಕೆ ಅಭಿಪ್ರಾಯವಿಲ್ಲ, ಆದರೆ ನಿಷೇಧಿಸುವುದಕ್ಕಾಗಿ ಅನುವಾದ ಮಾಡುತ್ತದೆ ಎಂದು ಬ್ರಹ್ಮಸೂತ್ರ (೩-೨-೨) ದ ಭಾಷ್ಯದಲ್ಲಿ ಶಂಕರಾಚಾರ್ಯರು ಹೇಳಿ ಮುಂದೆಸಾಗಿದ್ದಾರೆ ಆದರೆ ಶ್ರುತಿಯು ಅನುವಾದ ಮಾಡುತ್ತದೆ ಎಂದು ಹೇಳುವ ಸ್ವರ್ಗಾದಿ ಲೋಕಗಳು ಯಾವ ಪ್ರಮಾಣದಿಂದ ಪ್ರಸಕ್ತವಾಗಿವೆ ಎಂಬದನ್ನು ಹೇಳಿಲ್ಲ ಇದು ಹೇಳಲಿಕ್ಕೂ ಬರುವದಿಲ್ಲ ಏಕೆಂದರೆ ಅತೀಂದ್ರಿಯವಾದ ಸ್ವರ್ಗಾದಿ ಲೋಕಗಳ ಜ್ಞಾನವು ವೇದ ವ್ಯತಿರಿಕ್ತವಾದ ಬೇರೆ ಯಾವ ಪ್ರಮಾಣಗಳಿಂದಲೂ ಉಂಟಾಗಲು ಸಾಧ್ಯವಿಲ್ಲ ಜಗತ್ತನ್ನು ನಿಷೇಧಿಸುತ್ತದೆಂದು ಪ್ರತಿವಾದಿಯು ( ಅದ್ವೈತಿಯು ) ಉದಾಹರಿಸಿದ ನೇಹ ನಾನಾಸ್ತಿ ಕಿಂಚನ' ಎಂಬೀ ವಾಕ್ಯದ ತರುವಾಯದಲ್ಲಿರುವ ೧೨ ನೆಯ ಮತ್ತು ೧೩ ನೆಯ ಮಂತ್ರಗಳಲ್ಲಿ 'ಈಶಾನೋ ಭೂತ ಭವ್ಯಸ್ಯ' ಹೀಗೆ ಪರಮಾತ್ಮನು ಭೂತ ಭವಿಷ್ಯತ್ ಜಗತ್ತಿಗೆ ಸ್ವಾಮಿ ಎಂದು ಪುನಃ ಪುನಃ ಹೇಳುತ್ತದೆ ನಿಷೇಧ ಮಾಡಿದ ಮೇಲೆ ಪುನಃ ಉಂಟೆಂದು ಹೇಳುವದು ಅಸಂಗತವಾಗುವದು ಆದುದರಿಂದ ವೇದವು ನಿಷೇದಾರ್ಥ ಅನುವಾದ ಮಾಡುತ್ತದೆ, ಸತ್ಯತ್ವವನ್ನು ಹೇಳುವಲ್ಲಿ ಅದಕ್ಕೆ ತಾತ್ಪರ್ಯವಿಲ್ಲ ಎಂದು ನಿರೂಪಿಸುವುದು ಕೂಡುವದಿಲ್ಲ ಆದುದರಿಂದ ಈ ವೇದದಲ್ಲಿ ಉಕ್ತವಾದ ಜಗತ್ತು ಸತ್ಯವೆಂದೇ ತಿಳಿಯಬೇಕು 'ನೇಹ ನಾನಾಸ್ತಿ ಕಿಂಚನ' ಕಾಠಕ, ಮತ್ತು ಬೃಹದಾರಣ್ಯಕಗಳಲ್ಲಿಯ 'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯದ ಪೂರ್ವ ಭಾಗದಲ್ಲಿ "ಮನಸೈವೇದಂ ಆಪ್ತವ್ಯಂ' ಮತ್ತು 'ಮನಸೈವಾನುದ್ರಷ್ಟವ್ಯಂ' ಈ ವಾಕ್ಯಗಳು ಇದ್ದು, ಜೀವನು ಪರಮಾತ್ಮನನ್ನು ಮನಸ್ಸಿನಿಂದ ಗ್ರಹಿಸುತ್ತಾನೆ. ಜೀವನು ತಿಳಿದುಕೊಳ್ಳುವವನು, ಪರಮಾತ್ಮನು ಜ್ಞಾನಕ್ಕೆ ವಿಷಯನು, ಮನಸ್ಸು ಕರಣ ( ಸಾಧನ ) ವೆಂದು ಮೇಲಿನ ವಾಕ್ಯಗಳು ತಿಳಿಸಿದ ಪ್ರಕಾರ ಜೀವ, ಪರಮಾತ್ಮನಲ್ಲಿ ಜ್ಞಾತೃಜ್ಞೇಯಭಾವವಿರುವುದರಿಂದ ಈ ಉಭಯರಲ್ಲಿ ಭೇದವು ಸಿದ್ಧಿಸುತ್ತದೆಂದು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ಅನೇಕ ಸ್ಥಳಗಳಲ್ಲಿ ಒಪ್ಪಿಕೊಂಡಿದ್ದಾರೆ. ಇದರಿಂದ ಜೀವ ಪರಮಾತ್ಮರ ಭೇದವೂ, ಜ್ಞಾನ ಮತ್ತು ಕರಣ(ಮನಸು) ಇತ್ಯಾದಿ ಜಗತ್ತು ಸತ್ಯವಿದೆ ಎಂದು

“ಮನಸೈವ” ಎಂಬ ವಾಕ್ಯದಿಂದ ಸಿದ್ಧವಾಗುತ್ತದೆ ಆದುದರಿಂದ ‘ನೇಹ ನಾನಾಸ್ತಿ ಕಿಂಚನ’ ಎಂಬ ವೇದಕ್ಕೆ ಜಗತ್ತು ಮಿಥ್ಯಾ ಎಂಬ ಅರ್ಥವು ಕೂಡುವುದಿಲ್ಲ ‘ಯದೇವೇಹ ತದಮುತ್ರ ಯದಮುತ್ರ ತದನ್ವಿಹ| ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ’ (೧೦) ಯಾವ ಪರಮಾತ್ಮನು ಈ ಲೋಕದಲ್ಲಿ ಇದ್ದಾನೆಯೋ ಅದೇ ಪರಮಾತ್ಮನು ಪರಲೋಕದಲ್ಲಿಯೂ ಇದ್ದಾನೆ, ಯಾವ ಪರಮಾತ್ಮನು ಪರಲೋಕದಲ್ಲಿ ಇದ್ದಾನೆಯೋ, ಆತನೇ ಈ ಲೋಕದಲ್ಲಿಯೂ ಇದ್ದಾನೆ. ಆ ಪರಮಾತ್ಮನ ರೂಪಗಳಲ್ಲಿ ಯಾರು ಭೇದವನ್ನು ತಿಳಿಯುತ್ತಾರೆಯೋ ಅವರು ಮೃತ್ಯುವಿನ (ಯಮನ) ದೆಸೆಯಿಂದ ಮೃತ್ಯುವನ್ನು ಹೊಂದುತ್ತಾರೆ ಹೀಗೆಂದು ಮುಂಚಿನ ವಾಕ್ಯಗಳಲ್ಲಿ ಪರಮಾತ್ಮನ ರೂಪಗಳಲ್ಲಿ ಅಭೇದವನ್ನು ನಿರೂಪಿಸಿ ಆಮೇಲೆ ‘ ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ’ ಎಂಬ ವಾಕ್ಯವು ‘ಇಹಲೋಕದಲ್ಲಿಯೂ ಪರಲೋಕದಲ್ಲಿಯೂ ಇರುವ ಪರಮಾತ್ಮನ ಜ್ಞಾನವನ್ನು ಶುದ್ಧ ಮನಸ್ಸಿನಿಂದ ಸಂಪಾದಿಸಬೇಕು ಎಂದರೆ ನಿಯಾಮಕನಾದ ಪರಮಾತ್ಮನ ರೂಪಗಳಲ್ಲಿ ಭೇದವನ್ನು ಸರ್ವಥಾ ತಿಳಿಯಕೂಡದು ಈ ಲೋಕದಲ್ಲಿರುವ ಪರಮಾತ್ಮನು ಬೇರೆ, ಪರಲೋಕದಲ್ಲಿರುವ ಪರಮಾತ್ಮನು ಬೇರೆ, ನನ್ನಲ್ಲಿ ನಿಯಾಮಕನಾಗಿದ್ದ ಪರಮಾತ್ಮನು ಬೇರೆ, ಬೇರೆಯವರಲ್ಲಿ ನಿಯಾಮಕನಾಗಿದ್ದ ಪರಮಾತ್ಮನು ಬೇರೆ, ಎಂದು ಹೀಗೆ ತಿಳಿಯಕೂಡದು ಇಹ ಈ ಪರಮಾತ್ಮನಲ್ಲಿ ಕಿಂಚನ ನಾನಾ ಅಂತರ್ಯಾಮಿಯಾದ ಪರಮಾತ್ಮನ ರೂಪಾದಿಗಳಲ್ಲಿ ಭೇದವಿಲ್ಲ ಎಂದು ಹೇಳಿ, ಯಾವ ಮನುಷ್ಯನು ಅಂತರ್ಯಾಮಿಯಾದ ಪರಮಾತ್ಮನ ರೂಪಗಳಲ್ಲಿ ಭೇದವನ್ನು ತಿಳಿಯುತ್ತಾನೆಯೋ ಅವನು ನರಕಾದಿ ಅನರ್ಥಗಳನ್ನು ಹೊಂದುತ್ತಾನೆ ಎಂಬ ಅರ್ಥವನ್ನು ಪ್ರತಿಪಾದಿಸುತ್ತದೆಂದು ವಾದಿಯು ಹೇಳಿದುದನ್ನೆ ಅಂಗೀಕರಿಸಬೇಕಾದುದು

‘ ನೇಹ ನಾನಾಸ್ತಿ ಕಿಂಚನ ’ ಈ ೧೯ನೆಯ ಬೃಹದಾರಣ್ಯ ಮಂತ್ರದ ಪೂರ್ವದಲ್ಲಿರುವ ‘ ಈಶಾನೋ ಭೂತ ಭವ್ಯಸ್ಯ ’ ಈ ೧೫ನೆಯ ಮಂತ್ರದಲ್ಲಿಯೂ, ಭೂತ ಭವಿಷ್ಯತ್ ಜಗತ್ತಿಗೆ ಪರಮಾತ್ಮನು ಒಡೆಯನಾಗಿದ್ದಾನೆ ಎಂದು ಹೇಳಿ ಜಗತ್ತಿನ ಸತ್ಯತ್ವವನ್ನು ನಿರೂಪಿಸಿದೆ. ಈ ಅರ್ಥವನ್ನು ಪ್ರತಿವಾದಿಯು ಒಪ್ಪಿ ಈ ವೇದವು ಜಗತ್ತಿನ ತೋರಿಕೆಯ ಸತ್ಯತ್ವವನ್ನು ( ವ್ಯಾವಹಾರಿಕ ಸತ್ಯತ್ವವನ್ನು ) ತಿಳಿಸಿಕೊಡುತ್ತದೆಂದು ಹೇಳುತ್ತಾನೆ. ಆದರೆ ವೇದದಲ್ಲಿ ಹೇಳಿದ ಸತ್ಯತ್ವವು ಸುಳ್ಳು ಎಂದು ಹೇಳುವುದಕ್ಕೆ ಏನೂ ಆಧಾರವನ್ನು ತೋರಿಸುವದಿಲ್ಲ ಆದುದರಿಂದ ಆ ಸತ್ಯತ್ವವು ಸುಳ್ಳೆಂದು ಸ್ವೀಕರಿಸಲು ಉಚಿತವಲ್ಲ. ‘ ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇ ಮೃತಮ್ ’ ಈ ೧೬ನೆಯ ಮಂತ್ರದಲ್ಲಿಯೂ ಪ್ರಕಾಶವುಳ್ಳ ಪದಾರ್ಥಗಳಿಗೆ ಪರಮಾತ್ಮನು ಪ್ರಕಾಶವನ್ನು ಕೊಡುತ್ತಾನೆ ಎಂದು ದೇವತೆಗಳು ಉಪಾಸನೆಯನ್ನು ಮಾಡುತ್ತಾರೆಂದು ಹೇಳಿದೆ. ‘ ಯಸ್ಮಿನ್ ಪಂಚ

ಪಂಚ ಜನಾ ಆಕಾಶಶ್ಚ ಪ್ರತಿಷ್ಠಿತಃ॥ ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್॥' ಈ ೧೭ನೆಯ ಮಂತ್ರದಲ್ಲಿ ಪ್ರಾಣ ಚಕ್ಷುರಾದಿ ಇಂದ್ರಿಯಗಳು ಮತ್ತು ಆಕಾಶವು ಯಾವ ಪರಮಾತ್ಮನಲ್ಲಿ ಆಶ್ರಯವನ್ನು ಹೊಂದಿರುವುವೋ ಅಂತಹ ಪರಮಾತ್ಮನು ಸರ್ವ ಜಗತ್ತಿಗೆ ಆಧಾರನಾಗಿದ್ದಾನೆ ಇಂತಹ ಜ್ಞಾನವುಳ್ಳವರು ಮೋಕ್ಷವನ್ನು ಹೊಂದುತ್ತಾರೆ ಎಂದು ಹೇಳಿದೆ ' ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಯೇ ಮನೋ ವಿದುಃ। ತೇ ನಿಚಕ್ಯುಃ ಬ್ರಹ್ಮ ಪುರಾಣಮಗ್ರ್ಯಂ ॥ ಈ ೧೮ ನೆಯ ಮಂತ್ರದಲ್ಲಿ ಪ್ರಾಣ, ಚಕ್ಷು, ಶ್ರೋತ್ರ ಇತ್ಯಾದಿಗಳಿಗೆ ಚೇಷ್ಟಾ, ದರ್ಶನಾದಿ ಶಕ್ತಿ ಕೊಡುವವನು ಪರಮಾತ್ಮನು, ಅಂತಹ ಪರಮಾತ್ಮನನ್ನು ಮನಸ್ಸಿನಿಂದೆಯೇ ತಿಳಿದುಕೊಳ್ಳಬೇಕು ಎಂದು ಹೇಳಿದೆ ಇದರಿಂದ ದೇವಾದಿ ಲೋಕ, ಪ್ರಾಣ ಚಕ್ಷು, ಆಕಾಶ, ಮನಸ್ಸು, ಜ್ಞಾತಾ, ಜ್ಞೇಯ, ಮತ್ತು ಉಪಾಸನಾ, ಇತ್ಯಾದಿ ಸಮಸ್ತ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ

ಮತ್ತು ಮುಂದೆ ೨೨ನೆಯ ಮಂತ್ರದಲ್ಲಿಯೂ ' ಸರ್ವಸ್ಯವಶೀ, ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ,' ಇತ್ಯಾದಿ ವಾಕ್ಯಗಳಿಂದ ಸರ್ವಜಗತ್ತನ್ನು ಒಪ್ಪಿ ಆ ಜಗತ್ತಿಗೆ ಪರಮಾತ್ಮನು ನಿಯಾಮಕನು, ಸ್ವಾಮಿಯು, ಅಧಿಪತಿಯೂ ಎಂದು ಹೇಳಿದೆ ಬಂಜೆಗೆ ಮಗನೇ ಇಲ್ಲದಿರುವಾಗ ಆ ಮಗನಿಗೆ ಚೈತ್ರನು ನಿಯಾಮಕನು, ಆಧಾರಭೂತನು ಇತ್ಯಾದಿಯಾಗಿ ಹೇಳುವುದು ಹೇಗೆ ಕೂಡುವುದಿಲ್ಲವೋ ಹಾಗೆಯೇ ಜಗತ್ತೇ ಇಲ್ಲದಿರುವಾಗ, ಜಗತ್ತಿಗೆ ನಿಯಾಮಕನು ಆಶ್ರಯನು ಇತ್ಯಾದಿಯಾಗಿ ಹೇಳುವುದೂ ಕೂಡುವುದಿಲ್ಲ ಆದುದರಿಂದ ' ನೇಹ ನಾನಾಸ್ತಿ ಕಿಂಚನ' ಈ ಬೃಹದಾರಣ್ಯಕ ವಾಕ್ಯದ ಪೂರ್ವೋತ್ತರ ವಾಕ್ಯಗಳು ಈ ಜಗತ್ತಿನ ಸತ್ಯತ್ವವನ್ನು ಬೋಧಿಸುತ್ತವೆ, ಮತ್ತು 'ನೇಹ ನಾನಾಸ್ತಿ ಕಿಂಚನ ' ಈ ವಾಕ್ಯದ, ಪೂರ್ವಭಾಗವಾದ 'ಮನಸೈವಾನು ದ್ರಷ್ಟವ್ಯಂ' ಇದು ಜೀವಪರಮಾತ್ಮರ ಭೇದ, ಜ್ಞಾನ, ಜ್ಞಾತಾ, ಕರಣ, ಮನಸ್ಸು, ಇತ್ಯಾದಿ ಜಗತ್ತು ಸತ್ಯವಿದೆ ಎಂದೇ ಹೇಳುತ್ತದೆ. ' ನೇಹ ನಾನಾಸ್ತಿ ಕಿಂಚನ ' ಈ ವಾಕ್ಯದ ಉತ್ತರಭಾಗವಾದ 'ಮೃತ್ಯೋಃಸ ಮೃತ್ಯುಮಾಪ್ನೋತಿ' 'ಎಂಬ ವಾಕ್ಯದಿಂದ ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ ' ಎಂದು ಗೊತ್ತಾಗುತ್ತದೆ. ಮೃತ್ಯು ಇತ್ಯಾದಿ ಜಗತ್ತು ಸುಳ್ಳು ( ಮೂರು ಕಾಲದಲ್ಲಿಯೂ ಇಲ್ಲದಿರುವುದು ) ಆದರೆ ಮೃತ್ಯುವಿನಿಂದ ಮೃತ್ಯು ಉಂಟಾಗುತ್ತದೆಂಬುದು ಹೇಗೆ ಕೂಡುವುದು ಆದುದರಿಂದ ಈ ವಾಕ್ಯವು ಮೃತ್ಯು ಇತ್ಯಾದಿ ಜಗತ್ತಿನ ಸತ್ಯತ್ವವನ್ನೇ ಬೋಧಿಸುತ್ತದೆ ಹೀಗಿರುವುದರಿಂದ ಮಧ್ಯದಲ್ಲಿರುವ ' ನೇಹ ನಾನಾಸ್ತಿ ಕಿಂಚನ ' ಎಂಬೀವಾಕ್ಯವು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ, ಪ್ರತ್ಯುತ ಸತ್ಯತ್ವವನ್ನೇ ಬೋಧಿಸುವದು.

೨. ಬೃಹದಾರಣ್ಯಕೋಪನಿಷತ್ತಿನಲ್ಲಿಯ 'ಯತ್ರ ಹಿ ದ್ವೈತಮಿವ ಭವತಿ,' 'ಯತ್ರ ತು ಸರ್ವಮಾತ್ಮೈವಾಭೂತ್,' ಇವೆರಡು ಭಾಗಗಳೂ ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದಿಲ್ಲ. ಏಕೆಂದರೆ (೧) 'ಯತ್ರ ಹಿ ದ್ವೈತಮಿವ ಭವತಿ' ಈ ಭಾಗದಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವ ಪದವೇ ಇಲ್ಲ. (೨. ಪ್ರತ್ಯುತ ಶಂಕರಾಚಾರ್ಯ, ಸುರೇಶ್ವರಾಚಾರ್ಯ, ಟೀಕಾಕಾರರಾದ ಆನಂದಗಿರಿ ಇವರು ಈ ಉಪನಿಷತ್ತಿನ ವಿಷಯವಾಗಿ, ಬರೆದ ತಮ್ಮ ತಮ್ಮ ವ್ಯಾಖ್ಯಾನದಲ್ಲಿ ಈ ಶ್ರುತಿಯಲ್ಲಿಯ 'ದ್ವೈತಮಿವ' ಎಂದು 'ದ್ವೈತ'ಕ್ಕೆ 'ದ್ವೈತ' ದಿಂದ ಉಪಮೆಯನ್ನು ಕೊಟ್ಟಿದ್ದಾರೆ ಆದುದರಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವೇ ಹೇಳುತ್ತದೆ. ಮತ್ತು ಶಂಕರಾಚಾರ್ಯರು ಬೌದ್ಧಮತವನ್ನು ಖಂಡನ ಮಾಡುವಾಗ್ಗೆ 'ಬಹಿರ್ವತ್ ಅವಭಾಸತೇ'=ಜಗತ್ತು ಬಾಹ್ಯ ಪದಾರ್ಥದಂತೆ ತೋರುತ್ತದೆ ಹೀಗೆಂದು ಜಗತ್ತಿಗೆ ಬಾಹ್ಯಪದಾರ್ಥದ ದೃಷ್ಟಾಂತವನ್ನು ಕೊಟ್ಟಿರುವುದರಿಂದ ಬಾಹ್ಯ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ 'ನ ಹಿ ವಿಷ್ಣುಮಿತ್ರೋ ವಂಧ್ಯಾಪುತ್ರವತ್' ಹೀಗೆಂದು ವಿಷ್ಣುಮಿತ್ರನಿಗೆ ವಂಧ್ಯಾಪುತ್ರನ ದೃಷ್ಟಾಂತವು ಕೊಡುವುದಿಲ್ಲ ಆದುದರಿಂದ ಬ್ರಹ್ಮಸೂತ್ರ (೨-೨-೨೮) ದ ವ್ಯಾಖ್ಯಾನದಲ್ಲಿ 'ಇವ' ಶಬ್ದದ ಸಮಾನಾರ್ಥಕವಾದ 'ವತ್' ಎಂಬ ಪದದ ಪೂರ್ವದಲ್ಲಿ 'ಬಹಿಃ' ಎಂಬ ಬಾಹ್ಯ ಜಗತ್ತನ್ನು ತಿಳಿಸುವ ಪದವಿರುವುದರಿಂದ ಬಾಹ್ಯ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ ಹೀಗೆಂದು ಹೇಳಿರುವುದರಿಂದ 'ವತ್' ಶಬ್ದದ ಸಮಾನಾರ್ಥಕವಾದ 'ಇವ' ಶಬ್ದದ ಪೂರ್ವದಲ್ಲಿ 'ದ್ವೈತಂ' ಎಂದು ಎರಡನೆಯ ಪ್ರಪಂಚವನ್ನು (ಜಗತ್ತನ್ನು) ತಿಳಿಸುವ ಪದವಿರುವುದರಿಂದ 'ದ್ವೈತಮಿವ ಭವತಿ' ಎಂಬೀ ವೇದವು 'ದ್ವೈತ ಪ್ರಪಂಚ (ಜಗತ್ತು) ಪಾರಮಾರ್ಥಿಕ ಸತ್ಯವೆಂದು ತಿಳಿಸುವುದು ಎಂಬುದೇ ಸಿದ್ಧವಾಗುತ್ತದೆ ಆದುದರಿಂದ ಈ ವೇದವು ಜಗತ್ತಿನ ಪಾರಮಾರ್ಥಿಕ ಸತ್ಯತ್ವದ ವಿಷಯದಲ್ಲಿ ಆಧಾರವಾಗಿದೆ ಮಿಥ್ಯಾತ್ವದ ವಿಷಯದಲ್ಲಿ ಆಧಾರ ವಾಗಲಾರದು ಮಿಥ್ಯಾತ್ವದ ವಿಷಯವಾಗಿ ಈ ಶ್ರುತಿಯು ಪ್ರಮಾಣ (ಆಧಾರ) ವೆಂದು ಹೇಳುವುದು ಅದ್ವೈತರ ಗ್ರಂಥಗಳಿಗೆ ವಿರುದ್ಧವಾಗುತ್ತದೆ

'ವಾಚಾರಂಭಣಂ' ಮತ್ತು 'ಆತ್ಮೈವೇದಂ ಸರ್ವಂ,' ಈ ವೇದಗಳಲ್ಲಿ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವ ಪದಗಳು ಇಲ್ಲವೆಂದು ಆ ಆ ವೇದಗಳ ಅರ್ಥವಿಚಾರ ಕಾಲದಲ್ಲಿ ನಿಶ್ಚಯ ಮಾಡಿರುವುದರಿಂದ 'ವಾಚಾರಂಭಣಂ' 'ಆತ್ಮೈವೇದಂ ಸರ್ವಂ' ಇತ್ಯಾದಿ ಶ್ರುತಿಗಳು ಜಗತ್ತಿನ ಮಿಥ್ಯಾತ್ವವನ್ನು ಹೇಳುತ್ತವಾದ್ದರಿಂದ 'ಯತ್ರ ಹಿ ದ್ವೈತಮಿವ ಭವತಿ' ಎಂಬ ಮಂತ್ರದಿಂದ ಹೇಳಲ್ಪಡುವ ಜಗತ್ತಿನ ಸತ್ಯತ್ವವನ್ನು ಅಂಗೀಕಾರಮಾಡಬಾರದು ಎಂಬ ಶಂಕರಾಚಾರ್ಯರ ಉಪಪಾದನೆಯು ಯೋಗ್ಯವಲ್ಲವೆಂದು ಕೋರ್ಟು ನಿರ್ಣಯಿಸುತ್ತದೆ

೩ 'ಯತ್ರತ್ವಸ್ಯ ಸರ್ವಂ ಆತ್ಮೈವಾಭೂತ್‌ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ಸ ವಾ ಏಷ ನೇತಿ ನೇತಿ ಕೇನ ಕಂ ಪಶ್ಯೇತ್ತತ್ಕೇನ ಕಂಜಿಘ್ರೇತ್ತತ್ಕೇನ ಕಂ ರಸಯೇತ್ .. .. .. . .ವಿಜ್ಞಾತಾರಮರೇ ಕೇನ ವಿಜಾನೀಯಾತ್' ಇಲ್ಲಿ ಹೇಳಿದಂತೆ- ಮೋಕ್ಷದಶೆಯಲ್ಲಿ ಆತ್ಮಾತಿರಿಕ್ತವಾದ ಪದಾರ್ಥವೊಂದೂ ಇಲ್ಲದಿದ್ದರೆ- ಗಂಧಾದಿಗಳ ಜ್ಞಾನವು ಆಗುವುದು ಹೇಗೆ ? ಯಾವ ಪರಮಾತ್ಮನಿಂದ ಜೀವನು ಸಮಸ್ತ ಜಗತ್ತನ್ನು ತಿಳಿಯುವನೋ, ಆ ಪರಮಾತ್ಮನನ್ನು ( ಆ ಜೀವನು ) ಹೇಗೆ ತಿಳಿದು ಕೊಳ್ಳುವನು ? ' ತಾನು ತನ್ನನ್ನು ಅರಿಯುವುದು ಹೇಗೆ ? ಮೋಕ್ಷಾವಸ್ಥೆಯಲ್ಲಿ ಗಂಧಾದಿಜ್ಞಾನವು, ಪರಮಾತ್ಮನ ಜ್ಞಾನವು, ಮತ್ತು ತನ್ನ ಜ್ಞಾನವು, ಬೇರೆ ಲೋಕಗಳ ಜ್ಞಾನವು, ಆವಶ್ಯಕವೆಂದು ' ಜಕ್ಷನ್,ಕ್ರೀಡನ್' ಇತ್ಯಾದಿ ಶ್ರುತಿಯಲ್ಲಿ ಹೇಳಿದೆ ಹೀಗಿರುವುದರಿಂದ ಆ ಜ್ಞಾನಕ್ಕೆ ಕಾರಣೀಭೂತವಾದ ಆತ್ಮಾತಿರಿಕ್ತವಾದ ಎರಡನೆಯ ಪದಾರ್ಥವನ್ನು ಒಪ್ಪಲೇಬೇಕು ಹೀಗೆ ಈ ವೇದವು ಜಗತ್ತಿನ ಸತ್ಯತ್ವವನ್ನು ತಿಳಿಸಿ ಮಿಥ್ಯಾತ್ವವನ್ನು ನಿಷೇಧಿಸುತ್ತದೆ

೪. ' ಯೇನೇದಂ '=ಹೀಗೆಂದು ' ಯಾವ ಪರಮಾತ್ಮನಿಂದ ಜೀವನು ಸಮಸ್ತವನ್ನು ತಿಳಿಯುತ್ತಾನೆ 'ಈ ವಾಕ್ಯವು ಜೀವಪರಮಾತ್ಮ ಇವರ ಭೇದವನ್ನು, ಮತ್ತು ಜ್ಞಾತಾ, ಜ್ಞೇಯ, ಜ್ಞಾನ ಇತ್ಯಾದಿ ಪ್ರಪಂಚವನ್ನು ತಿಳಿಸುತ್ತದೆ ಆದುದರಿಂದ ಈ ಶ್ರುತಿ ಜೀವ ಪರಮಾತ್ಮರ ಅಭೇದವನ್ನು ಹೇಳುವ ಅದ್ವೈತಿಗಳ ಮತಕ್ಕೆ ವಿರುದ್ಧವಾದುದು ಹೀಗೆಂದು ಬ್ರಹ್ಮವಿದ್ಯಾಭರಣಕಾರರು, ಅಪ್ಪಯ್ಯದೀಕ್ಷಿತ ಮುಂತಾದ ಅದ್ವೈತಿಗಳು ಸ್ವೀಕರಿಸಿಯೂ ಕೇವಲ ತಮ್ಮ ಮತದಮೇಲಿನ ಅಭಿಮಾನದಿಂದೆಯೇ ಈ ಶ್ರುತಿಯ ಮುಖ್ಯಾರ್ಥವನ್ನು ಬಿಟ್ಟು ' ಯೇನ ' ಎಂಬೀ ಪದವನ್ನು ಪ್ರಥಮಾಂತವೆಂದು ಭಾವಿಸಿ ' ಯಃ= ಯಾವ ಜೀವನು 'ಎಂಬರ್ಥವನ್ನು ಸ್ವೀಕಾರ ಮಾಡಿ ತಾವು( ಅದ್ವೈತಿಗಳು ) ಮಾಡಿದ ಅರ್ಥವು ಮುಖ್ಯಾರ್ಥವಲ್ಲ ಎಂದು ಹೇಳುವರು ತಾವು ಮಾಡಿರುವ ವಾಕ್ಯಯೋಜನೆ ಕ್ಲಿಷ್ಟವಾದುದು * ತಮ್ಮ ಈ ಬಗೆಯ ಅರ್ಥವು ಸರಸವಲ್ಲವೆಂದು ತಾವೇ ಒಪ್ಪಿದ್ದಾರೆ. ಆದುದರಿಂದ ಈ ವೇದವು ಜೀವ ಬ್ರಹ್ಮರ ಐಕ್ಯವನ್ನು, ಮತ್ತು ಜಗತ್ತಿನ ಮಿಥ್ಯಾತ್ವವನ್ನೂ ಹೇಳುವ ಅದ್ವೈತಿಗಳಿಗೆ ಸಾಧಕವಾಗುವುದಿಲ್ಲ ಪ್ರತ್ಯುತ ಬಾಧಕವೇ ಆಗುತ್ತದೆ. ' ಯೇನೇದಂ ಸರ್ವಂ ವಿಜಾನಾತಿ' ಈ ವಾಕ್ಯದಲ್ಲಿಯ ' ಯೇನ ' ಈ ಪದದಿಂದ ಬೋಧಿತವಾದ ವಸ್ತುವನ್ನೇ ' ಸ ವಾ ಏಷ ನೇತಿ ' ಈ ವಾಕ್ಯದಲ್ಲಿಯ ಸಃ ಎಂಬ ಪದದಿಂದ ಸ್ವೀಕರಿಸ ಬೇಕಾದುದರಿಂದ ' ಸ ವಾ ಏಷ ನೇತಿ ನೇತಿ'

---

* ೧ '' ಯೇನೇತಿ ತೃತೀಯಾ ಪ್ರಥಮಾರ್ಥೇ ಯೋಜನೀಯೇತಿ ಕ್ಲೇಶಃ ಸ್ಯಾತ್' ತಿ ಕ್ಲೇಶೇನ ಯೋಜನೀಯಮಪ್,' ಯೇನೇದಂ ಸರ್ವಂ ವಿಜಾನಾತೀತ್ಯಸ್ಯ ಯೋಜನಾ ಕ್ಲೇಶೋಪಿ ಅದ್ವೈತಶಾಸ್ತ್ರಾನುರೋಧಾರ್ಥತ್ವಾನ್ನ ದೋಷಾಯೇತ್ಯಾಶಯ ಇತಿ.

ಈ ಮುಂದಿನ ವಾಕ್ಯದ ‘ಸಃ’ ಈ ಪದದಿಂದ ಪರ ಬ್ರಹ್ಮನನ್ನೇ ತೆಗೆದುಕೊಳ್ಳಬೇಕೆಂದು ಶಂಕರಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ ಮತ್ತು ವಸ್ತುತಃ ‘ಸಃ’ ಈ ಪದದ ಅರ್ಥವು ‘ಪರ ಬ್ರಹ್ಮನು’ ಎಂದೇ ಆಗುವುದರಿಂದ ‘ಜೀವ’ ಎಂಬ ಅರ್ಥವನ್ನು ಹೇಳಲು ಬರುವುದಿಲ್ಲ—ಆದುದರಿಂದ ‘ಯೇನ’ ಈ ಪದದಿಂದ ‘ಜೀವ’ ಎಂಬರ್ಥವನ್ನು ತೆಗೆದು ಕೊಳ್ಳುವುದು ಯುಕ್ತವಲ್ಲ.

೫ “ವಿಜ್ಞಾತಾರಮರೇ ಕೇನ ವಿಜಾನೀಯಾತ್” ಈ ವೇದ ವಾಕ್ಯದಿಂದ ಮೋಕ್ಷಾವಸ್ಥೆಯಲ್ಲಿ ಜೀವನಿಗೆ ಕರ್ತೃತ್ವವು ಸಿದ್ಧವಾಗುತ್ತದೆಂದು ಒಪ್ಪಿಯೂ ಕೇವಲ ತಮ್ಮ ಮತದ ಆಗ್ರಹದಿಂದ ಈ ವಾಕ್ಯವು ಪೂರ್ವಕಾಲದಲ್ಲಿರುವ (ಸಂಸಾರಾವಸ್ಥೆಯ) ಕರ್ತೃತ್ವವನ್ನು ಬೋಧಿಸುವುದೆಂದು ಸ್ವಕಪೋಲ ಕಲ್ಪಿತವಾದ ಅಭಿಪ್ರಾಯವನ್ನು ತೆಗೆದಿದ್ದಾರೆ ಶಂಕರಾಚಾರ್ಯರು ಹೇಗಾದರೂ ಅರ್ಥಮಾಡಿಕೊಳ್ಳಲಿ ಈ ಶ್ರುತಿಯಿ ದ ಮಾತ್ರ ಮೋಕ್ಷದಶೆಯಲ್ಲಿ ಜೀವನಿಗೆ ಕರ್ತೃತ್ವರೂಪ ಧರ್ಮವು ಸಿದ್ಧವಾಗುತ್ತದೆಂಬದು ಖಂಡಿತ

೬ ಈ ಶ್ರುತಿಗೆ ಜಗತ್ತು ಮಿಥ್ಯಾ ಎಂದು ಹೇಳುವ ವಿಷಯದಲ್ಲಿ ತಾತ್ಪರ್ಯವಿದ್ದರೆ ‘ಆತ್ಮಾತಿರಿಕ್ತಂ ಜಗತ್‌ನಾಸ್ತಿ’ (ಪರಮಾತ್ಮನನ್ನುಳಿದು ಬೇರೆ ಜಗತ್ತು ಇಲ್ಲ) ಎಂದಿಷ್ಟೇ ಹೇಳುವದು ಸಾಕಾಗುತ್ತಿತ್ತು ‘ಯತ್ರ ಹಿ ದ್ವೈತಮಿವ ಭವತಿ’ ಇತ್ಯಾದಿ ಉದ್ಬುದ್ಧವಾದ ವಾಕ್ಯಗಳನ್ನು ಹೇಳುವದು ವ್ಯರ್ಥವಾಗುವದು

೭ ಮೋಕ್ಷಾವಸ್ಥೆಯಲ್ಲಿ ಗಂಧಾದಿ ಜ್ಞಾನವಿಲ್ಲವೆಂದು ಹೇಳುವ ಅಭಿಪ್ರಾಯವಿದ್ದರೆ ‘ನ ಪಶ್ಯತಿ ನ ಜಿಘ್ರತಿ’ ಎಂದಿಷ್ಟೇ ಹೇಳುವುದು ಸಾಕಾಗುತ್ತಿತ್ತು ‘ಪಶ್ಯೇತ್’ ಜಿಘ್ರೇತ್ ಇತ್ಯಾದಿ ವಿಧಿಲಿಙ್ಗಂತ ಪದಗಳ ಪ್ರಯೋಗವು ಪ್ರಯೋಜನ ರಹಿತವಾಗಬೇಕಾದೀತು ಆದುದರಿಂದ ಈ ವೇದಕ್ಕೆ ಜಗತ್ತು ಮಿಥ್ಯಾ ಎಂದು ಹೇಳುವ ವಿಷಯದಲ್ಲಿ ತಾತ್ಪರ್ಯವಿಲ್ಲವೆಂದು ಸಿದ್ಧವಾಗುತ್ತದೆ

ದ್ವಿತೀಯ ಪದಾರ್ಥವಿದ್ದರಷ್ಟೆ, ಗಂಧಾದಿ ಜ್ಞಾನವೂ, ಪರಮಾತ್ಮನ ಜ್ಞಾನವೂ, ಕನ್ನ ಜ್ಞಾನವೂ ಕೂಡುವದು! ಆತ್ಮಾತಿರಿಕ್ತವಾದ ವಸ್ತುವೇ ಮೋಕ್ಷದಲ್ಲಿ ಇಲ್ಲದಿದ್ದರೆ ಗಂಧಾದಿ ಜ್ಞಾನವು ಸಂಭವಿಸುವದು ಹೇಗೆ? ಗಂಧಾದಿ ಜ್ಞಾನವು ಮೋಕ್ಷಾವಸ್ಥೆಯಲ್ಲಿ ಆವಶ್ಯಕವೆಂದು ಜಕ್ಷನ್, ಕ್ರೀಡನ್ ಇತ್ಯಾದಿ ಶ್ರುತಿಗಳಲ್ಲಿ ಹೇಳಿದೆ ಆದುದರಿಂದ ಈಶ್ವರಾದಿ ಜ್ಞಾನವಾಗುವದಕ್ಕೆ ಮೋಕ್ಷದಲ್ಲಿ ಬೇರೆ ಪದಾರ್ಥಗಳನ್ನು ಒಪ್ಪಲೇ ಬೇಕಾಗುವದು

ಹೀಗೆ ತಿಳಿಸುವದಕ್ಕಾಗಿ ಈ ದೀರ್ಘ ವಾಕ್ಯದ ಪ್ರಸಕ್ತಿ ದ್ವೈತಮತಾನುಸಾರ ಸ್ವರಸವಾಗುತ್ತದೆ ಹಾಗೆಯೇ ವಿಧಿಲಿಙ್ಗಂತ ಪದಗಳಿಗೆ ಸಾರ್ಥಕ್ಯ ಉಂಟಾಗುವದು.

ಆದುದರಿಂದ 'ಯತ್ರ ಹಿ ದ್ವೈತಮಿವ ಭವತಿ' ಎಂಬೀ ಮೊದಲನೇ ಭಾಗವು 'ಯತ್ರ ತು ಸರ್ವಂ ಆತ್ಮೈವಾಭೂತ್' ಇತ್ಯಾದಿ ದ್ವಿತೀಯ ಭಾಗವು ಶಂಕರಾಚಾರ್ಯ ಪ್ರಭೃತಿ ಅದ್ವೈತಿಗಳ ಹೇಳಿಕೆಯ ಪ್ರಕಾರವಾಗಿಯೂ ಮತ್ತು ವಸ್ತುತಃ ಶ್ರುತಿಪದ ಸ್ವಾರಸ್ಯದಿಂದಲೂ ಜಗತ್ತು (ದ್ವೈತ ಪ್ರಪಂಚ) ಪಾರಮಾರ್ಥಿಕ ಸತ್ಯವಾದುದು ಮಿಥ್ಯಾ ಆದುದಲ್ಲ ಎಂಬೀ ಎರಡು ಅಂಶದಲ್ಲಿ ಪ್ರಮಾಣವಾಗಿವೆ. ಆದುದರಿಂದ ಈ ವೇದದ ಎರಡು ಭಾಗಗಳು ಈ ಜಗತ್ತಿನ ಮಿಥ್ಯಾತ್ವದ ವಿಷಯದಲ್ಲಿ ಆಧಾರವಾಗುತ್ತದೆಂದು ಹೇಳುವ ಅದ್ವೈತಿಗಳ ಮಾತು ಯುಕ್ತವಲ್ಲ

೮ 'ಅಥಾತ ಆದೇಶಃ' 'ನೇತಿ ನೇತಿ' 'ನಹ್ಯೇತಸ್ಮಾತ್ ಇತಿ' ಈ ಶ್ರುತಿಯಲ್ಲಿಯೂ ಮಿಥ್ಯಾತ್ವ ಬೋಧಕವಾದ ಪದವಿಲ್ಲ ಈ ವೇದವು ಬ್ರಹ್ಮವು, "ಇತಿ ನ, ಇತಿ ನ' ಎಂದು 'ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂಚಾಮೂರ್ತಂ ಚ' ಇತ್ಯಾದಿ ವಾಕ್ಯಗಳಿಂದ ಪೂರ್ವದಲ್ಲಿ ಪ್ರಸಕ್ತವಾದ ಮೂರ್ತ ಪದಾರ್ಥ ರೂಪವಲ್ಲ ಅಮೂರ್ತ ಪದಾರ್ಥ ರೂಪವಲ್ಲ ಎಂದರೆ ಬ್ರಹ್ಮವು ಮೂರ್ತ ವಿಲಕ್ಷಣ (ಭಿನ್ನ) ಎಂದೂ ಮತ್ತು ಅಮೂರ್ತ ವಿಲಕ್ಷಣ ಎಂದೂ ತಿಳಿಸುತ್ತದೆ ಹೇಗೆಂದರೆ 'ಘಟಃ ಪಟೋ ನ' 'ಕೊಡವು ಬಟ್ಟೆಯಲ್ಲ' ಎಂದು ಹೇಳಿದರೆ ಕೊಡದಿಂದ ಬಟ್ಟೆ ಬೇರೆಯೆಂದು (ಭಿನ್ನವೆಂದು) ಸಿದ್ಧವಾಗುತ್ತದೆ ಪಟವೇ (ಬಟ್ಟೆಯೇ) ಇಲ್ಲ (ಮಿಥ್ಯಾ) ಎಂದು ಸಿದ್ಧವಾಗುವದಿಲ್ಲ ಅದೇ ಪ್ರಕಾರ ಬ್ರಹ್ಮವು ಮೂರ್ತ ಪದಾರ್ಥವಲ್ಲ ಅಮೂರ್ತ ಪದಾರ್ಥವಲ್ಲ ಎಂದು ಹೇಳಿದರೆ ಬ್ರಹ್ಮವು ಮೂರ್ತ ಭಿನ್ನ ಮತ್ತು ಅಮೂರ್ತ ಭಿನ್ನವೆಂದೇ ಸಿದ್ಧವಾಗುವದು. ಮೂರ್ತಾಮೂರ್ತ ಜಗತ್ತು ಮಿಥ್ಯೆಯೆಂದು ಸಿದ್ಧವಾಗುವದಿಲ್ಲ ಆದುದರಿಂದ ಈ ವೇದವು ಜಗನ್ಮಿಥ್ಯಾತ್ವ ವಿಷಯದಲ್ಲಿ ಆಧಾರವಾಗುವದಿಲ್ಲ

೯. 'ಸರ್ವಂ ಖಲ್ವಿದಂ ಬ್ರಹ್ಮ' ಈ ವೇದದಲ್ಲಿ ಜಗನ್ಮಿಥ್ಯಾತ್ವ ಬೋಧಕವಾದ ಪದವಿಲ್ಲ. ಬ್ರಹ್ಮಪದಕ್ಕೆ 'ಬ್ರಹ್ಮನಲ್ಲಿ ಕಲ್ಪಿತವಾದ' ಎಂದು ಮುಖ್ಯಾರ್ಥವಾಗುವುದಿಲ್ಲ ಲಕ್ಷಣಾವೃತ್ತಿಯಿಂದ (*Secondary meaning*) ಹಾಗೆ ಮಾಡಬೇಕು. ಬ್ರಹ್ಮಪದದ ಮುಖ್ಯಾರ್ಥವನ್ನು ಬಿಟ್ಟಮೇಲೆ ಇತರ ಪ್ರಮಾಣಗಳಿಂದ ಅವಿರುದ್ಧವಾದ ಅರ್ಥವನ್ನೇ ಸ್ವೀಕರಿಸಬೇಕು. ಮತ್ತು ಶಂಕರಾಚಾರ್ಯರು ಈ ವಾಕ್ಯದ ಮುಂದಿನ 'ಸರ್ವಕಾಮಃ ಸರ್ವಗಂಧಃ' ಈ ವಾಕ್ಯದ ವ್ಯಾಖ್ಯಾನ ಸಮಯದಲ್ಲಿ 'ಕಾಮೋಸ್ಮಿ ಭರತರ್ಷಭ' ಎಂಬ ಗೀತಾ ವಾಕ್ಯಾನುಸಾರವಾಗಿ ಪರಮಾತ್ಮನು 'ಸರ್ವಕಾಮರೂಪನಿದ್ದಾನೆ' ಎಂದು ಅರ್ಥವನ್ನೇಕೆ ಹೇಳಕೂಡದೆಂದು ಶಂಕಿಸಿ 'ಕಾಮವು ಪರತಂತ್ರವೂ ಜನ್ಯವೂ (ಹುಟ್ಟತಕ್ಕದ್ದು) ಆದುದು ಅಂತಹ ಕಾಮಕ್ಕೂ ಪರಮಾತ್ಮನಿಗೂ ಅಭೇದವನ್ನು ಹೇಳಿದರೆ ಪರಮಾತ್ಮನ ಸ್ವಾತಂತ್ರ್ಯಕ್ಕೂ, ಅನಾದಿತ್ವಕ್ಕೂ ಹಾನಿ ಬರುವ ಪ್ರಯುಕ್ತ 'ಸರ್ವಕಾಮ' ಎಂಬ ಪದಕ್ಕೆ 'ಸರ್ವಕಾಮ ಸ್ವಾಮಿ' ಎಂದು ಅರ್ಥ ಮಾಡಿದ್ದಾರೆ.

'ಕಾಮೋಽಸ್ಮಿ' ಎಂಬೀ ಗೀತಾವಾಕ್ಯಕ್ಕೂ ಕೃಷ್ಣಪರಮಾತ್ಮನು 'ಕಾಮರೂಪಿ' ಎಂದು ಅರ್ಥಮಾಡದೆ ಕಾಮವು ಈಶ್ವರನ ಆಧೀನ ಎಂದು ಅರ್ಥ ಮಾಡಿದ್ದಾರೆ. ಮತ್ತು 'ಸರ್ವಸ್ಯ ವಶೀ,' 'ಸರ್ವಸ್ಯೇಶಾನಃ,' 'ಏಷ ಸರ್ವೇಶ್ವರಃ,' ಸರ್ವಸ್ಯಾಧಿಪತಿಃ,' 'ಏಷ ಭೂತಾಧಿಪತಿಃ, 'ಏಷಭೂತಪಾಲಃ' ಇತ್ಯಾದಿ ಅನೇಕ ವೇದ ವಾಕ್ಯಗಳಲ್ಲಿ ಸರ್ವ ಜಗತ್ತು 'ಬ್ರಹ್ಮನ ಆಧೀನವಾಗಿದೆ' 'ಬ್ರಹ್ಮನು ಜಗತ್ತಿನ ಸ್ವಾಮಿಯಾಗಿದ್ದಾನೆ' ಎಂದು ಹೇಳಿದೆ ಬೃ ೨-೫೧ ಈ ಮಂತ್ರದ ಭಾಷ್ಯದಲ್ಲಿ ಶಂಕರಾಚಾರ್ಯರು 'ಇದಂ ಸರ್ವಂ' ಇದು 'ಸರ್ವಾಪ್ತಿಸಾಧನ' (ಸರ್ವಫಲಕ್ಕೆ ಕಾರಣವು) ಎಂದು ಅರ್ಥ ಮಾಡಿದ್ದಾರೆ ಅದರಂತೆ 'ಸರ್ವಂ ಖಲ್ವಿದಂ ಬ್ರಹ್ಮ' ಈ ವಾಕ್ಯದ ಅರ್ಥವಾದರೂ 'ಎಲ್ಲಾ ಜಗತ್ತು ಬ್ರಹ್ಮನ ಅಧೀನವೆಂದೂ ಅಥವಾ 'ಇದಂ ಬ್ರಹ್ಮ=ಈ ಬ್ರಹ್ಮನು ಸರ್ವಂ=ಎಲ್ಲಾ ಜಗತ್ತಿಗೆ ನಿಯಾಮಕನಾಗಿದ್ದಾನೆ, ಎಂದೂ ಅಥವಾ ಇದಂ ಬ್ರಹ್ಮ=ಈ ಬ್ರಹ್ಮವೂ ಸರ್ವಂ=ಎಲ್ಲಾ ಪದಾರ್ಥಗಳನ್ನು ದೊರಕಿಸಿ ಕೊಡುವದಕ್ಕೆ ಸಾಧನವಾದುದು ಎಂದೂ ಅರ್ಥ ಮಾಡುವದು ಯೋಗ್ಯವಾಗುವುದು ಆದುದರಿಂದ 'ಬ್ರಹ್ಮೈವೇದಂ ಸರ್ವಂ' 'ಸರ್ವಂ ಯದಯಮಾತ್ಮಾ' ಆತ್ಮೈವೇದಂ ಸರ್ವಂ' ಇತ್ಯಾದಿ ವಾಕ್ಯಗಳಂತೆ ಈ ವಾಕ್ಯವೂ ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವದಿಲ್ಲ.

ಮೇಲೆ ಉದಾಹೃತವಾದ ಶ್ರುತಿಗಳಿಂದ 'ತದನನ್ಯತ್ವಮಾರಂಭಣಶಬ್ದಾದಿಭ್ಯಃ' ಎಂಬ ಸೂತ್ರಕ್ಕೆ ಜಗತ್ತು ಮಿಥ್ಯೆಯೆಂದು ಅರ್ಥ ಹೇಳುವದು ಯುಕ್ತವಲ್ಲ. ಏಕೆಂದರೆ 'ವಾಚಾರಂಭಣಂ' ಇತ್ಯಾದಿ ಶ್ರುತಿಗಳಿಂದ ಜಗತ್ತಿನ ಮಿಥ್ಯಾತ್ವವು ಸಿದ್ಧವಾಗುವದಿಲ್ಲವೆಂದು ಇದುವರೆಗೆ ಪ್ರತಿಪಾದಿತವಾಗಿದೆ ಮತ್ತು ಈ ಸೂತ್ರದಲ್ಲಿ ಜಗನ್ಮಿಥ್ಯಾತ್ವ ಬೋಧಕವಾದ ಶಬ್ದವೊಂದೂ ಇಲ್ಲ. ವೇದ, ಸೂತ್ರ, ಗೀತಾ ಈ ಪ್ರಸ್ಥಾನತ್ರಯಗಳಲ್ಲಿ ಜಗತ್ತು ಮಿಥ್ಯಾಯೆಂದು ಬೋಧಿಸುವ ಒಂದು ವಾಕ್ಯವೂ ಇಲ್ಲದಿರುವುದರಿಂದ ಮತ್ತು ಜಗತ್ತು ಸತ್ಯವಾದುದು ಎಂಬ ವಿಷಯದಲ್ಲಿ ಪ್ರಮಾಣಭೂತವಾದ ವೇದ, ಸೂತ್ರ, ಗೀತಾರೂಪವಾದ ಪ್ರಸ್ಥಾನತ್ರಯವೂ, ಮತ್ತು ಪ್ರತ್ಯಕ್ಷ ಅನುಮಾನ ಇವು ಆಧಾರಗಳಾಗಿರುವುದರಿಂದ ಕೋರ್ಟಿನವರು ಜಗತ್ತು ಸುಳ್ಳಲ್ಲ ಸತ್ಯವಾದುದು ಎಂದೇ ನಿರ್ಣಯಿಸುತ್ತಾರೆ

---

## ಅಧ್ಯಾಸದ ವಿಷಯವಾಗಿ ಜಜ್ಜಮೆಂಟ (ತೀರ್ಮಾನ)

ಪ್ರತಿವಾದಿಯ ಮತದಂತೆ ಬ್ರಹ್ಮನಲ್ಲಿ ಜಗತ್ತಿನ ಭ್ರಮೆ ಕೂಡುವದಿಲ್ಲ ಆದುದರಿಂದ ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ಉಪಲಬ್ಧವಾಗಿರುವ ಬ್ರಾಹ್ಮಣವರ್ಣಾದಿ ಸರ್ವ ಜಗತ್ತು ಬ್ರಹ್ಮನಲ್ಲಿ ಕಲ್ಪಿತ (ಸುಳ್ಳು)=ಮೂರು ಕಾಲದಲ್ಲಿಯೂ ಇಲ್ಲದಿರುವದೆಂಬುದು ಯೋಗ್ಯವಲ್ಲ.

**ಕಾರಣಗಳು.—**

ಭ್ರಮೆಯುಂಟಾಗುವದಕ್ಕೆ ಆವಶ್ಯಕವಾದ ಸಂಗತಿಗಳು —

(೧) ಅಧಿಷ್ಠಾನ ( ಯಾವ ವಸ್ತುವನ್ನು ನೋಡಿ ಭ್ರಮೆ ಉಂಟಾಗುವದೋ ಆ ವಸ್ತುವು) (೨) ಭ್ರಾಂತನಾಗುವವನು (೩) ಆ ಅಧಿಷ್ಠಾನದಲ್ಲಿ (a) ಸಾಮಾನ್ಯ ಧರ್ಮ ಮತ್ತು (b) ವಿಶೇಷ ಧರ್ಮ (೪) ಆರೋಪಿತವಾಗುವ ವಸ್ತುವಿನ ಸಾರೂಪ್ಯ (ಹೋಲಿಕೆ) (೫) (a) ಭ್ರಮೆಯನ್ನು ಹೊಂದುವ ಮನುಷ್ಯನಿಗೆ ಸಾಮಾನ್ಯ ಧರ್ಮದಿಂದ ಯುಕ್ತವಾದ ಅಧಿಷ್ಠಾನದ ಜ್ಞಾನ (b) ವಿಶೇಷ ಧರ್ಮದ ಅಜ್ಞಾನ ಮತ್ತು ಆರೋಪಿತವಾಗುವ ವಸ್ತುವಿನ ಸಾರೂಪ್ಯದ ಜ್ಞಾನ, ಆ ಜ್ಞಾನಕ್ಕೆ ಕಾರಣೀಭೂತವಾದ ಇಂದ್ರಿಯಾದಿಗಳು, ಇವುಗಳಿಗೆ ಆಶ್ರಯವಾದ ದೇಹ ಇವೆಲ್ಲವೂ ಬೇಕಾದುವು ಉದಾಹರಣಾರ್ಥವಾಗಿ, ರಜ್ಜುವಿನಲ್ಲಿ (ಹಗ್ಗದಲ್ಲಿ) ಸರ್ಪದ ಭ್ರಮೆ ಯುಂಟಾಗಬೇಕಾದರೆ ' ಇದಂತ್ವ ಸ್ವರೂಪ( ಎದುರು ಇರುವಿಕೆ)ಸಾಮಾನ್ಯಧರ್ಮ (೭) ರಜ್ಜುತ್ವರೂಪ ವಿಶೇಷಧರ್ಮ ಮತ್ತು ಹಾವಿನ ಹಾಗೆ ಉದ್ದವಿರುವಿಕೆ (ಹಗ್ಗದಧರ್ಮ) ಉಂಟು ಹಾಗೆಯೇ ಭ್ರಮವನ್ನು ಹೊಂದುವ ಮನುಷ್ಯನಿಗೆ ' ಇದಂತ್ವ ' ಎಂಬ ಸಾಮಾನ್ಯ ಧರ್ಮದಿಂದ ಯುಕ್ತವಾದ ರಜ್ಜುವಿನ ಜ್ಞಾನವು ಉಂಟು 'ಇದು ಹಗ್ಗವು' ಎಂದು ರಜ್ಜುತ್ವದ ( ಹಗ್ಗದ ಧರ್ಮದ ) ಜ್ಞಾನವಿಲ್ಲ (ಅಜ್ಞಾನವಿರುವುದು) ಮತ್ತು ಹಾವಿನಂತೆ ದೀರ್ಘತೆಯ ಜ್ಞಾನ, ಮತ್ತು ಆ ಜ್ಞಾನಕ್ಕೆ ಕಾರಣೀಭೂತವಾದ ಇಂದ್ರಿಯಾದಿಗಳು, ಆ ಇಂದ್ರಿಯಗಳಿಗೆ ಆಶ್ರಯವಾದ ದೇಹ, ಇವೆಲ್ಲವೂ ಉಂಟೆಂದು ರಜ್ಜುವಿನಲ್ಲಿ ಹಾವಿನ ಭ್ರಮೆ ಬರುತ್ತದೆ

' ಬ್ರಹ್ಮಸತ್ಯಂ ಜಗನ್ಮಿಥ್ಯಾ ' ಎಂದು ಹೇಳುವ ಅದ್ವೈತಿಗಳ ಮತದಂತೆ ಬ್ರಹ್ಮಾತಿರಿಕ್ತವಾದ ಬೇರೆ ವಸ್ತುವೇ ಇಲ್ಲದಿರುವುದರಿಂದ ಬ್ರಹ್ಮನಲ್ಲಿ ಬ್ರಹ್ಮನಿಗೆ ಯೇ ಭ್ರಮೆಯುಂಟಾಗುವದು ಬ್ರಹ್ಮನು ಭ್ರಮೆಗೆ ಅಧಿಷ್ಠಾನ ಆಶ್ರಯ ಎಂದು ಹೇಳಬೇಕಾಗುವುದು ಬ್ರಹ್ಮನು ನಿರ್ಧರ್ಮಕನು ಎಂದರೆ ಬ್ರಹ್ಮನು ಸಕಲಧರ್ಮ ದಿಂದ ರಹಿತನಾದುದರಿಂದ ಆ ಬ್ರಹ್ಮನಲ್ಲಿ ಅಧಿಷ್ಠಾನವಾಗಲು ಆವಶ್ಯಕವಾದ ಸಾಮಾನ್ಯ ಧರ್ಮ, ವಿಶೇಷಧರ್ಮ, ಮತ್ತು ಆರೋಪಿತವಾಗುವ ಜಗತ್ತಿನ ಸಾರೂಪ್ಯ ಇವೆಲ್ಲವೂ ಇಲ್ಲ, ಮತ್ತು ಭ್ರಮೆಗೆ ಕಾರಣೀಭೂತವಾದ ಸಾಮಾನ್ಯಧರ್ಮದ ಜ್ಞಾನ, ವಿಶೇಷಧರ್ಮದ ಅಜ್ಞಾನ, ಸಾರೂಪ್ಯದ ಜ್ಞಾನ, ಆ ಜ್ಞಾನಕ್ಕೆ ಕಾರಣೀಭೂತವಾದ ದೇಹ, ಇಂದ್ರಿಯಾದಿಗಳೂ ಇಲ್ಲ ಆದುದರಿಂದ ಭ್ರಮೆಗ ಅಧಿಷ್ಠಾನವೂ ಮತ್ತು ಅದಕ್ಕೆ ಆಶ್ರಯನೂ ಬ್ರಹ್ಮನಾಗಲು ಶಕ್ಯವಿಲ್ಲದಿರುವುದರಿಂದ ಜಗತ್ತಿನ ಭ್ರಮೆ ಕೂಡುವದಿಲ್ಲ. ಮತ್ತು ಪೂರ್ವದಲ್ಲಿ ಹೇಳಿದ ಕಾರಣಗಳಿಂದ ಈ ಭ್ರಮೆಕೂಡುವದಿಲ್ಲವೆಂದು ಶಂಕರಾಚಾರ್ಯರೂ ಮತ್ತು ಭಾಮತೀಕಾರರೇ ಮೊದಲಾದ ಅದ್ವೈತಿಗಳುಕೂಡ ಬ್ರ. ಸೂ.(೪-೧-೩)ದ ವ್ಯಾಖ್ಯಾನದಲ್ಲಿ "ಯುಕ್ತಂ ಹಿ

ಇತ್ಯಾದಿ ವಾಕ್ಯಗಳಿಂದ ಅಂಗೀಕಾರ ಮಾಡಿದ್ದಾರೆ ಆದುದರಿಂದ ಜಗತ್ತಿನ ಭ್ರಮೆ ಕೂಡುವದಿಲ್ಲವಾದಕಾರಣ ಬ್ರಾಹ್ಮಣಾದಿ ಸಮಸ್ತ ಜಗತ್ತು ರಜ್ಜು ಸರ್ಪದಂತೆ ಭ್ರಮೆಯ ಮೂಲಕ ತೋರುವುದು ಮಿಥ್ಯಾ=ಮೂರು ಕಾಲದಲ್ಲಿಯೂ ಇಲ್ಲದಿರುವುದು ಎಂದು ಪ್ರತಿವಾದಿ ಹೇಳುವುದು ಯುಕ್ತವಲ್ಲ

ಭಾಮತೀಕಾರನು ಬ್ರಹ್ಮಸೂತ್ರ ೪ ೧-೩ ದ ವ್ಯಾಖ್ಯಾನದಲ್ಲಿಯೇ 'ನಿರಂಶಸ್ಯಾಪಿ' ‡ ಇತ್ಯಾದಿ ವಾಕ್ಯಗಳಿಂದ ಮತ್ತು ಈ ಬ್ರಹ್ಮಸೂತ್ರ ೧-೧-೧ ದ 'ನೈಸರ್ಗಿಕೋಽಯಂ ಲೋಕವ್ಯವಹಾರಃ' ಇತ್ಯಾದಿ ಶಂಕರ ಭಾಷ್ಯದ ವ್ಯಾಖ್ಯಾನದ ಸಮಯದಲ್ಲಿ 'ಸ್ವಾಭಾವಿಕೋಽನಾದಿರಯಂ' + ಇತ್ಯಾದಿ ವಾಕ್ಯಗಳಿಂದ 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂದು ಈ ನಮ್ಮ ಅದ್ವೈತಮತದಲ್ಲಿ ಬ್ರಹ್ಮಾತಿರಿಕ್ತವಾದ ವಸ್ತುವೇ ಇಲ್ಲದಿರುವುದರಿಂದ ಬ್ರಹ್ಮನೇ ಜಗತ್ತಿನ ಭ್ರಮೆಗೆ ಅಧಿಷ್ಠಾನ ಮತ್ತು ಆಶ್ರಯನು (ಭ್ರಮ ಹೊಂದುವವನು) ಆ ಬ್ರಹ್ಮನಲ್ಲಿ ಭ್ರಮೆಯು ಅಧಿಷ್ಠಾನವಾಗುವದಕ್ಕೆ ಮತ್ತು ಆಶ್ರಯವಾಗುವದಕ್ಕೆ ಆವಶ್ಯಕವಾದ ಧರ್ಮಗಳು ಯದ್ಯಪಿ ವಾಸ್ತವಿಕವಾಗಿ (ಪಾರಮಾರ್ಥಿಕವಾಗಿ) ಇಲ್ಲ ಆದರೂ ಅಂತಹ ಧರ್ಮಗಳು ಕಲ್ಪಿತವಾದುವು, (ಅಧ್ಯಸ್ತ ಭ್ರಮೆಯಿಂದ ತೋರುವ) ಅಂತಹ ಕಲ್ಪಿತವಾದ ಧರ್ಮಗಳು ಇರುವುದರಿಂದ ಬ್ರಹ್ಮನು ಜಗತ್ತಿನ ಭ್ರಮೆಗೆ ಅಧಿಷ್ಠಾನನೂ ಮತ್ತು ಆಶ್ರಯನು ಆಗುವನು ಜಗತ್ತಿನ ಭ್ರಮೆಗೆ ಅಧಿಷ್ಠಾನ ಮತ್ತು ಆಶ್ರಯ ಆಗುವದಕ್ಕೆ ಕಾರಣೀಭೂತ ಧರ್ಮಗಳ ಆರೋಪಕ್ಕೆ (ಭ್ರಮೆಗೆ) ಬೇಕಾದ ಧರ್ಮಗಳು ಕೂಡ ಆ ಪೂರ್ವದವೇ ಆರೋಪಿತವಾದುವು. ಹೀಗೆ ಪೂರ್ವ ಪೂರ್ವ ಅನಾದಿ ಭ್ರಮ ಪರಂಪರೆಯಿಂದಲೇ ಬ್ರಹ್ಮನು ಜಗತ್ತಿನ ಭ್ರಮೆಗೆ ಅಧಿಷ್ಠಾನನೂ ಮತ್ತು ಆಶ್ರಯನೂ ಆಗುವನು ಹೇಗೆ ಬೀಜಾಂಕುರ ಪರಂಪರೆಯನ್ನು ಒಪ್ಪುವದು ಹೇಗೆ ದುಷ್ಟವಾಗುವದಿಲ್ಲವೋ (ಸ್ವೀಕರಿಸಲು ಯೋಗ್ಯವಾದುದು) ಹಾಗೆಯೇ ಭ್ರಮಪರಂಪರೆಯನ್ನು ಸ್ವೀಕರಿಸಲು ದುಷ್ಟವಾದುದಲ್ಲ ಹೀಗೆಂದು ಈ ಭ್ರಮೆಗೆ ಕಾರಣಗಳಿರುವದರಿಂದ ಅದು ಸಂಭವಿಸುವುದು ಎಂದು ಹೇಳಿದ್ದಾನೆ ಆದುದರಿಂದ ಭ್ರಮೆಗೆ ಕಾರಣಗಳಿಲ್ಲದಿರುವುದರಿಂದ ಭ್ರಮೆ ಸಂಭವಿಸುವುದಿಲ್ಲವೆಂದು ಹೇಳುವದೂ ಭಾಮತೀಕಾರನ ಸಿದ್ಧಾಂತ ವಾಕ್ಯವಲ್ಲ ಅದು ಪೂರ್ವಪಕ್ಷದ ವಾಕ್ಯವು ಸಿದ್ಧಾಂತ ವಾಕ್ಯವನ್ನು ನೋಡದೆಯೆ, ಪೂರ್ವಪಕ್ಷದ ವಾಕ್ಯದ ಮೇಲಿಂ

‡ ನಿರಂಶಸ್ಯಾಪಿ ಚ ಅನಾದ್ಯನಿರ್ವಾಚ್ಯಾವಿದ್ಯಾತದ್ವಾಸನಾ ಸಮಾರೋಪಿತ ವಿವಿಧ ಪ್ರಪಂಚಾತ್ಮನ, ಸಾಂಶಸ್ಯೇವ ಕಸ್ಯಚಿದಂಶಸ್ಯ ಅವಗ್ರಹಣಾತ್ ವಿಭ್ರಮ ಇವ

+ ಸ್ವಾಭಾವಿಕೋಽನಾದಿರಯಂ ವ್ಯವಹಾರಃ। ವ್ಯವಹಾರಾನಾದಿತಯಾ ತತ್ಕಾರಣಸ್ಯ ಅಧ್ಯಾಸಸ್ಯ ಅನಾದಿತೋಕ್ತಾ। ತತಶ್ಚ ಪೂರ್ವ ಪೂರ್ವ ಮಿಥ್ಯಾ ಜ್ಞಾನೋಪದರ್ಶಿತಸ್ಯ ಬುದ್ಧೀಂದ್ರಿಯ ಶರೀರಾದೇಃ ಉತ್ತರೋತ್ತರಾಧ್ಯಾಸೋಪಯೋಗ ಇತ್ಯನಾದಿತ್ವಾತ್ ಬೀಜಾಂಕುರವತ್ ನ ಪರಸ್ಪರಾಶ್ರಯತ್ವಮಿತ್ಯರ್ಥಃ ॥

ದಯೆ ಭ್ರಮೆಗೆ ಕಾರಣವಿಲ್ಲವೆಂದು ಪ್ರತಿವಾದಿಯು ಒಪ್ಪಿದ್ದಾನೆ ಎಂದು ವಾದಿಯು ಹೇಳುವುದು ಯೋಗ್ಯವಲ್ಲವೆಂದು ಹೇಳುವ ಪ್ರತಿವಾದಿಯ ಮಾತು ಸರಿಯಾದುದಲ್ಲ ಹೀಗೆಂದು ಕೋರ್ಟು ನಿರ್ಣಯಿಸುತ್ತದೆ

ಕಾರಣಗಳು —

ಭಾಮತೀಕಾರ ಪ್ರಭೃತಿ ಅದ್ವೈತಿಗಳೂ ಕೂಡ ಈ ಜಗತ್ತಿನ ಭ್ರಮೆ ಕೂಡುತ್ತದೆಂದು ಹೇಳಿಲ್ಲ ಪ್ರತ್ಯುತ 'ನಿರಂಶಸ್ಯಾಪಿ' ಇತ್ಯಾದಿ ವಾಕ್ಯಗಳಿಂದ ಸಾಂಶ ಪದಾರ್ಥದಲ್ಲಿ (ಧರ್ಮದಿಂದ ಯುಕ್ತವಾದ ಪದಾರ್ಥದ ವಿಷಯದಲ್ಲಿ) ಹೇಗೆ ಭ್ರಮೆ ಬರುತ್ತದೆಯೋ ಹಾಗೆಯೇ ಬ್ರಹ್ಮನು ನಿರಂಶನು (ಧರ್ಮ ರಹಿತನು) ಆದರೂ ಅನಾದಿ ಅವಿದ್ಯಾ ವಾಸನೆಯಿಂದ ನಾನಾವಿಧ ಆರೋಪಿತ (ಕಲ್ಪಿತ) ವಾದ ಧರ್ಮಗಳಿಂದ ಕೂಡಿಕೊಂಡವನಂತೆ ತೋರುತ್ತಿರುವ ಅವನಲ್ಲಿ (ಬ್ರಹ್ಮನಲ್ಲಿ) 'ವಿಭ್ರಮ ಇವ' ಭ್ರಮೆಬಂದ ಹಾಗೆ ತೋರುತ್ತದೆ

ವಸ್ತುತಃ ಚನ್ನಾಗಿ ವಿಚಾರಮಾಡಿ ನೋಡಿದರೆ ಭ್ರಮವೂ ಇಲ್ಲ ಭ್ರಮದಿಂದ ತೋರುವ ಕರ್ತೃತ್ವ, ಭೋಕ್ತೃತ್ವ, ಇತ್ಯಾದಿ ಸಂಸಾರವೂ ಇಲ್ಲ ಭ್ರಮವನ್ನೂ ಸಂಸಾರವನ್ನೂ ಒಪ್ಪಿಕೊಂಡರೆ ದ್ವೈತಿಗಳು ಹೇಳುವ ಎಲ್ಲಾ ಅನುಪಪತ್ತಿಗಳು (ದೋಷಗಳು) ಬರುತ್ತವೆ. ಆದುದರಿಂದ ಈ ಭ್ರಮವು ಹೇಗೆ ಬಂದಿತು. ಮತ್ತು ಸಂಸಾರವು ಹೇಗೆ ಉಂಟಾಗಿರುವದು ಎಂಬುದನ್ನು ನಮಗೆ ಹೇಳುವದಕ್ಕೆ ಬರುವದಿಲ್ಲ (ಅನಿರ್ವಚನೀಯ) ಎಂದು ಹೇಳುವದೇ ಸರಿ ಹೀಗೆಂದು ಈ ಬ್ರಹ್ಮಸೂತ್ರ ೪-೧-೩ ದ ವ್ಯಾಖ್ಯಾನದಲ್ಲಿ † ಭ್ರಮವು ಕೂಡುವದಿಲ್ಲವೆಂದು ಸ್ಪಷ್ಟವಾಗಿ ಹೇಳಿ, ಭ್ರಮವನ್ನೊಪ್ಪಿದರೆ ದ್ವೈತಿಗಳು ಹೇಳುವ ಸಮಸ್ತ ದೋಷಗಳು ಬರುವವು ಎಂದು ಅಂಗೀಕರಿಸಿರುವದರಿಂದ ಭ್ರಮವು ಕೂಡುತ್ತದೆಂದು ಹೇಳುವುದು ಅತ್ಯಂತ ಯುಕ್ತವಾಗಿಲ್ಲ.

ಅವಿಚಿತ್ರ ವಿಜ್ಞಾನದಲ್ಲಿ — ವಿಚಿತ್ರವಾದ ಎಂದರೆ ನಾನಾ ವಿಧವಾದ ಪ್ರಪಂಚದ ಭ್ರಮವು ಹೇಗೆ ಬರುವುದೆಂದು ಬೌದ್ಧರನ್ನು ಅದ್ವೈತಿಗಳು ಆಕ್ಷೇಪಿಸಿದ್ದಾರೆ. ಅದಕ್ಕೆ ಬೌದ್ಧರು ವಿಚಿತ್ರ ವಾಸನಾದಿಂದ ವಿಚಿತ್ರ ಪ್ರಪಂಚದ ಭ್ರಮವು ಬರುತ್ತದೆಂದು ಹೇಳಿದ್ದಾರೆ ಅದಕ್ಕೆ ಅದ್ವೈತಿಗಳು 'ವಿಚಿತ್ರವಾಸನೆ ಉಂಟಾಗಬೇಕಾದರೆ ಅದಕ್ಕೂ ಪೂರ್ವದಲ್ಲಿರುವ ವಿಚಿತ್ರ ಜಗತ್ತಿನ ಜ್ಞಾನವೂ ಇರಬೇಕು. ಮತ್ತು ಆ ವಿಚಿತ್ರ ಜಗತ್ತಿನ ಜ್ಞಾನವು ಹೇಗೆ ಉಂಟಾಯಿತು ಎಂಬ

---

† ಪರಮಾರ್ಥತಸ್ತು ನ ವಿಭ್ರಮೋ ನಾಮ ಕಶ್ಚಿನ್ನ ಸಂಸಾರೋ ನಾಮ । ಕಿಂತು ಸರ್ವಮೇತತ್ ಸರ್ವಾನುಪಪತ್ತಿ ಭಾಜನತ್ವೇನ ಅನಿರ್ವಚನೀಯಮಿತಿಯುಕ್ತಮುತ್ಪಶ್ಯಾಮಃ । (೪-೨-೩)

+ (ಒಂದೇತರದ ವಿಜ್ಞಾನದಲ್ಲಿ (ವಸ್ತುವಿನಲ್ಲಿ) ನಾನಾಬಗೆಯ ವಸ್ತುವಿನ ಭ್ರಮವುಂಟಾಗುವದು ಹೇಗೆ)

ಆಕ್ಷೇಪಕ್ಕೆ ಭ್ರಮ ಪರಂಪರೆಯನ್ನೇ ಒಪ್ಪಿ ವಿಚಿತ್ರ ವಾಸನಾಪರಂಪರೆಯನ್ನು ಬೌದ್ಧರು ಹೇಳಲು ಅದಕ್ಕೆ ಅದ್ವೈತಿಗಳು ವಾಸನಾ ಪರಂಪರೆಯನ್ನು ಅದರ ಸಲುವಾಗಿ ಭ್ರಮಪರಂಪರೆಯನ್ನು ಒಪ್ಪಿದರೆ ಅನವಸ್ಥಾದೋಷ ಬರುವುದು. ಆದುದರಿಂದ ಈ ಉಭಯ ಪರಂಪರೆಯನ್ನು ಒಪ್ಪುವದು ಯೋಗ್ಯವಲ್ಲ ಎಂದು ಅದ್ವೈತಿಗಳು ದೂಷಿಸಿದ್ದಾರೆ. ಅದರ ಮೇಲೆ ಬೌದ್ಧರು ಹೇಗೆ ಬೀಜಾಂಕುರ ಪರಂಪರೆಯನ್ನು ಸರ್ವರೂ ಒಪ್ಪಿರುವರೋ ಹಾಗೆಯೇ ವಾಸನಾ ಭ್ರಮಪರಂಪರೆಯನ್ನು ಒಪ್ಪತಕ್ಕುದ್ದಾಗಿದೆ ಎಂದು ಸಮಾಧಾನ ಹೇಳಿದ್ದಾರೆ ಬೀಜಕ್ಕೆ ಅಂಕುರವು ಕಾರಣವು ಅಂಕುರಕ್ಕೆ ಬೀಜವು ಕಾರಣವು ಎಂಬುದು ಪ್ರಾಮಾಣಿಕವಾದುದು. ಆ ಪ್ರಾಮಾಣಿಕವಾದ ಕಾರ್ಯಕಾರಣ ಭಾವವನ್ನು ಕೂಡಿಸುವದಕ್ಕಾಗಿ ಬೀಜಾಂಕುರ ಪರಂಪರೆ ಅಂಗೀಕರಿಸಲು ಯೋಗ್ಯವಾಗುತ್ತದ ಆದರೆ ನಿಮ್ಮ(ಬೌದ್ಧ) ಮತದಲ್ಲಿ ಅವಿಚಿತ್ರವಾದ ( ಒಂದೇ ವಿಧವಾದ ) ವಿಜ್ಞಾನದಲ್ಲಿ ವಿಚಿತ್ರ ಜಗತ್ತಿನ ಭ್ರಮವೇ ಅಪ್ರಾಮಾಣಿಕವಾದುದರಿಂದ ಆ ಅಪ್ರಾಮಾಣಿಕ ಭ್ರಮವನ್ನು ಕೂಡಿಸುವದಕ್ಕಾಗಿ ಭ್ರಮಪರಂಪರಾ, ವಾಸನಾ ಪರಂಪರಾ, ಇವೆರಡನ್ನೂ ಅಂಗೀಕಾರ ಮಾಡುವದು ಉಚಿತವಲ್ಲವೆಂದು ಶಂಕರಾಚಾರ್ಯರು ಮೊದಲಾದ ಅದ್ವೈತಿಗಳು ಬ್ರ ಸೂ ೨-೨-೩೦ ಈ ಸೂತ್ರದ ವ್ಯಾಖ್ಯಾನದಲ್ಲಿ ಹೇಳಿದ್ದಾರೆ. ಹೀಗೆ ಬೌದ್ಧರಿಗೆ ಅದ್ವೈತಿಗಳು ಉತ್ತರಕೊಟ್ಟಿರುವದರಿಂದ 'ಅಪ್ರಾಮಾಣಿಕ ಭ್ರಮದ ಉಪಪತ್ತಿಗಾಗಿ ಭ್ರಮಪರಂಪರೆಯನ್ನು ಒಪ್ಪಿದರೆ ಅನವಸ್ಥಾರೂಪದೋಷ ಬರುತ್ತದಾದುದರಿಂದ ಭ್ರಮಪರಂಪರೆಯನ್ನು ಒಪ್ಪಕೂಡದೆಂದು ಅದ್ವೈತಿಗಳೇ ಒಪ್ಪಿಕೊಂಡಿದ್ದಾರೆಂದು ಸಿದ್ಧವಾಗುವುದು ಹೀಗಿದ್ದರೂ ಅದ್ವೈತ ಮತದಲ್ಲಿ ಭ್ರಮವು ಕೂಡುವದಿಲ್ಲವೆಂದು ತಾವೇ ಒಪ್ಪಿಯೂ ಆ ಅಪ್ರಾಮಾಣಿಕ ಭ್ರಮವನ್ನು ಕೂಡಿಸುವದಕ್ಕಾಗಿ ಭ್ರಮಪರಂಪರೆಯನ್ನು ಮೇಲೆ ತೋರಿಸಿದಂತೆ ಹೇಳುವದು ಸರಿಯಾದುದಲ್ಲ

ಜಗತ್ತಿಗೆ ಭ್ರಮ ಕೂಡುವುದಿಲ್ಲವೆಂದು ಚನ್ನಾಗಿ ತಮಗೆ ಮನವರಿಕೆಯಾಗಿದ್ದರೂ ಜಗತ್ತಿನ ಭ್ರಮವು ಕೂಡದಿದ್ದರೆ ಜೀವನಿಗೆ ಸಂಸಾರವೂ, ಪರಮಾತ್ಮನಿಂದ ಭೇದವೂ ಇತ್ಯಾದಿ ಜಗತ್ತು ಸತ್ಯವೂ ಆಗಿ ಅದ್ವೈತ ಮತವೇ ಮುಳುಗಿ ಹೋದೀತು ( ಅಪ್ರಾಮಾಣಿಕವಾದೀತು ) ಎಂದು ತಿಳಿದು ಅದ್ವೈತಿಗಳು ಹಾಗಾಗಬಾರದೆಂದು ಭ್ರಮವು ಕೂಡುವದಿಲ್ಲವೆಂಬುದು ಪೂರ್ವಪಕ್ಷವು ಸಿದ್ಧಾಂತವಲ್ಲ ಹೀಗೆಂದು ಜನರನ್ನು ಮೋಸಗೊಳಿಸುವದಕ್ಕಾಗಿ ' ಸಾಂಶಸ್ಯೇವ ನಿರಂಶಸ್ಯಾಪಿ ವಿಭ್ರಮ ಇವ " ಸಾಂಶ ( ಧರ್ಮದಿಂದ ಕೂಡಿದ ) ಪದಾರ್ಥದಲ್ಲಿ ಹೇಗೆ ಭ್ರಮವು ಬರುವದೋ ಹಾಗೆಯೇ ನಿರಂಶ ( ಧರ್ಮರಹಿತವಾದ ) ಬ್ರಹ್ಮನಲ್ಲಿ ಭ್ರಮವು ಬಂದಹಾಗೆ ತೋರುತ್ತದೆ, ಎಂದು ಹೇಗೋ ಸಮಾಧಾನವನ್ನು ಹೇಳಿದಹಾಗೆ ತೋರಿಸಿ, ವಸ್ತುತಃ ವಿಚಾರ ಮಾಡಲಾಗಿ ಭ್ರಮವೂ ಇಲ್ಲ ಸಂಸಾರವೂ ಇಲ್ಲ

ಭ್ರಮ ಮತ್ತು ಸಂಸಾರ ಇವುಗಳನ್ನು ಒಪ್ಪಿದರೆ ದ್ವೈತಿಗಳು ಹೇಳುವ ಸರ್ವ ದೋಷಗಳು ಉಂಟಾಗುತ್ತವೆ. ಆದುದರಿಂದ ಭ್ರಮವುಂಟಾದುದು ಎಲ್ಲಿ? ಯಾರಿಗೆ? ಇತ್ಯಾದಿ ಯಾವುದಕ್ಕೂ ಸರಿಯಾಗಿ ಉತ್ತರ ಹೇಳಲು ಬರುವದಿಲ್ಲ ಆದುದರಿಂದ ಇಲ್ಲಿ ಅನಿರ್ವಚನೀಯವೆಂದು ಹೇಳುವದೇ ಯೋಗ್ಯವಾದುದು ಹೀಗೆ ತನ್ನ ಮನೋಗತವಾದ ಸಿದ್ಧಾಂತವನ್ನು ಭಾಮತೀಕಾರನು ಹೇಳಿ "ಯದ್ಯೇವಂ ಪ್ರತಿಬುದ್ಧೋಽಸಿ ನಾಸ್ತಿ ಕಸ್ಯ ಚಿದಪ್ರಬೋಧಃ" ಈ ವಾಕ್ಯದಿಂದ ಶಂಕರಾಚಾರ್ಯರಾದರೂ ಹೀಗೆಯೆ ಒಪ್ಪಿದ್ದಾರೆಂದು ತಿಳಿಸಿದ್ದಾನೆ ಆದುದರಿಂದ ಭ್ರಮವು ಕೂಡುವದಿಲ್ಲವೆಂದು ಹೇಳುವುದು ಪೂರ್ವಪಕ್ಷವೆಂದು ಜನರನ್ನು ಮೋಸಗೊಳಿಸುವದಕ್ಕಾಗಿ ಅದ್ವೈತಿಗಳು ಹೇಳಿದರೂ ಸಿದ್ಧಾಂತ ಮಾಡುವ ಸಮಯದಲ್ಲಿ ಭ್ರಮವನ್ನು ಕೂಡಿಸಿಲ್ಲ ಪ್ರತ್ಯುತ ಭ್ರಮವು ಕೂಡುವದಿಲ್ಲವೆಂದೇ ಸ್ಪಷ್ಟವಾಗಿ ಹೇಳಿರುವುದರಿಂದ ಅದ್ವೈತಿಗಳು ಭ್ರಮವು ಕೂಡುವದಿಲ್ಲವೆಂದು ಒಪ್ಪಿದ್ದಾರೆಂದು ವಾದಿಯ ಹೇಳಿಕೆ ಸತ್ಯವಾದುದೆಂದೇ ಕೋರ್ಟಿನವರು ನಿರ್ಣಯಿಸುತ್ತಾರೆ

ಕಾರ್ಯರೂಪವಸ್ತು, ಕಾರಣರೂಪವಸ್ತು ಮಾಯಾ ಅವಿದ್ಯಾದಿಂದ ಕಲ್ಪಿತವಾಗಿರುವುದರಿಂದ ಅದು ಕಾರ್ಯವು ಹೇಗೆ? ಅದು ಕಾರಣವು ಹೇಗೆ? ಮತ್ತು ಅವುಗಳ ಪರಸ್ಪರ ಸಂಬಂಧವು ಹೇಗೆ? ಎಂದು ಪ್ರಶ್ನೆ ಮಾಡಲು, ಇವುಗಳ ಉಪಪತ್ತಿಯನ್ನು ಹೇಳುವದಕ್ಕಾಗಿ ಯತ್ನ ಮಾಡಕೂಡದು ಮಾಯೆ ಅನುಪಪದ್ಯಮಾನವಾದುದರಿಂದ ( ಮಾಯೆ ನಿತ್ಯವಾದುದೋ, ಅಥವಾ ಅನಿತ್ಯವಾದುದೋ, ಕಲ್ಪಿತವಾದುದೋ ಅಥವಾ ಸತ್ಯವಾದುದೋ ಜೀವಾಶ್ರಿತವಾದುದೋ ಅಥವಾ ಬ್ರಹ್ಮಾಶ್ರಿತವಾದುದೋ ಇತ್ಯಾದಿ ಪ್ರಶ್ನೆ ಮಾಡಲಾಗಿ ಉತ್ತರವನ್ನು ಹೇಳಿ ಉಪಪತ್ತಿಯನ್ನು ಸಾಧಿಸಲು ಬರತಕ್ಕುದಲ್ಲವಾದುದರಿಂದ ) ಮಾಯೆಗೆ ಆಶ್ರಯ, ವಿಷಯ ಇತ್ಯಾದಿ ಕೂಡದೆ ಇರುವದು ಜಗತ್ತಿನ ಭ್ರಮಕ್ಕೆ ಅಧಿಷ್ಠಾನ ಆಶ್ರಯ ಕೂಡದೆ ಇರುವುದೂ ಭ್ರಮಪರಂಪರೆಯನ್ನು ಅಂಗೀಕಾರ ಮಾಡಿದರೆ ಅನವಸ್ಥಾದೋಷ ಬರುವುದೆಂಬುದೂ ಮಾಯಿಕ ಅದ್ವೈತಮತ ವಿಷಯದಲ್ಲಿ ಪ್ರಮಾಣ ಹೇಳಲು ಬರದೆ ಇರುವದೂ ಇವೆಲ್ಲ ಅದ್ವೈತ ಮತಕ್ಕೆ ಭೂಷಣವೇ! ಎಂದರೆ ಅದ್ವೈತ ಮತಕ್ಕೆ ಸಾಧಕವೇ ಆಗುತ್ತದೆಂದು ಹೇಳುತ್ತಾರೆ †

† ಅಸ್ತು ವಾ ಅನುಪಪತ್ತಿರೇವ ಕಾರ್ಯಕಾರಣಯೋರ್ಮಾಯಾಮಾತ್ರಕತ್ವಾತ್ ಅನುಪಪತ್ತಿರ್ಮಾಯಾಮುಪೋದ್ಬಲಯತಿ ಅನುಪಪದ್ಯಮಾನಾರ್ಥತ್ವಾನ್ಮಾಯಾಯಾಃ ಬ್ರ. ಸೂ. ೧. ೪ ೨೨ ಭಾಮತಿ

' ಮಾಯಾಯಾಂ ಅನುಪಪತ್ತಿರಲಂಕಾರ ಇತಿ ನ ಮಾಯಾವಾದೇ ಅತ್ಯಂತಾನುಪಪಾದನಾರ್ಥಂ ಪ್ರಯತಿತವ್ಯಂ ಇತಿ (ಕಲ್ಪತರು ಪರಿಮಳ ಅಪ್ಪಯ್ಯ ದೀಕ್ಷಿತನ ವಾಕ್ಯವು) ' ತರ್ಕ್ಯಮಾಯಾಂ ಶಕ್ತ್ಯೇನ ' ... ... ಸರ್ವಾನುಪಪತ್ತೇರ್ಭೂಷಣತ್ವಾತ್ ( ಅದ್ವೈತಸಿದ್ಧಿ ) ' ಭೂಷಣತ್ವಾದಿತಿ ಉಕ್ತಂ ಹಿ ಮಾಯಿನೋ ಅನವಸ್ಥಾದಯೋ ದೋಷಾಃ ಸರ್ವೇಂ ನಿಷ್ಪ್ರಚಿ ಪಶ್ಯತಃ ಅದ್ವೈತಿನಾಂ ತೇ [illegible]ಸ್ಪದ ಪ್ರಸಂಜೇ ಕಿಂ ಪ್ರಸಂಜಕಾಃ ಇತಿ ' ಗೌಡಬ್ರಹ್ಮಾನಂದೀ ( ಲಘುಚಂದ್ರಿಕಾ ) ದುರ್ಘಟತ್ವಮವಿದ್ಯಾಯಾಃ ಭೂಷ

ನಾವು ( ಅದ್ವೈತಿಗಳು ) ಭ್ರಮಕ್ಕೆ ಅಧಿಷ್ಠಾನ ಮತ್ತು ಆಶ್ರಯವನ್ನು ಹೇಳಿ ಆ ಭ್ರಮವನ್ನು ಕೂಡಿಸುವದಕ್ಕೆ ಯತ್ನ ಮಾಡಬಾರದು ಅವಿದ್ಯಾ ಮತ್ತು ಅವಿದ್ಯೆಯ ಕಾರ್ಯವಾದ ಭ್ರಮಾದಿಗಳಿಗೆ ದುರ್ಘಟತ್ವವು (ಕೂಡಿಸುವುದಕ್ಕೆ ಬಾರದೆ ಇರುವುದು ) ಭೂಷಣವೇ ಸರಿ ಕೂಡಿಸುವುದಕ್ಕೆ ಬಂದರೆ ( ಉಪಪನ್ನವಾದರೆ ) ಅದೂ ಒಂದು ಪ್ರಾಮಾಣಿಕವಾಗಿ ಅದಕ್ಕೂ ಸತ್ತಾ (ಸತ್ವವು) ಸಿದ್ಧಿಯಾಗಿ ಬ್ರಹ್ಮವೊಂದೇ ಸತ್ಯವು ಎಂಬ ನಮ್ಮ ಅದ್ವೈತಮತವು ನಷ್ಟವಾಗುವುದು ಆದುದರಿಂದ ಭ್ರಮ ಮತ್ತು ಅದ್ವೈತಮತ ಇತ್ಯಾದಿ ಪದಾರ್ಥಗಳ ವಿಷಯದಲ್ಲಿ ಅನವಸ್ಥಾ, ಅನ್ಯೋನ್ಯಾಶ್ರಯ, ಚಕ್ರಕ, ಸ್ವವ್ಯಾಹತಿ ಇತ್ಯಾದಿ ಎಷ್ಟೆಷ್ಟು ದೋಷಗಳು ಬರುವವೋ ಅವೆಲ್ಲವೂ ಅದ್ವೈತಿಗಳಾದ ನಮಗೆ ಅನುಕೂಲವಾದವುಗಳೇ! ಎಂದರೆ ನಮಗೆ ಇಷ್ಟವಾದ ಬ್ರಹ್ಮಾತಿರಿಕ್ತವಾದ ಭ್ರಮವೂ ಮತ್ತು ಅದ್ವೈತ ಮತವೂ ಇತ್ಯಾದಿಗಳ ಅಭಾವವನ್ನು ( ಭ್ರಮವಿಲ್ಲ, ಅದ್ವೈತಮತವಿಲ್ಲ ) ತಿಳಿಸುತ್ತವೆ ಹೀಗೆಂದು ಪ್ರತಿವಾದಿ ( ಅದ್ವೈತಿ ) ಯೇ ಒಪ್ಪಿರುವುದರಿಂದಲೂ ಮತ್ತು ವಸ್ತುತಃ ವಿಚಾರಮಾಡಿ ನೋಡಿದರೆ ಭ್ರಮ ಇತ್ಯಾದಿ ಜಗತ್ತು ಅದ್ವೈತ ಮತದಂತೆ ಕೂಡದಿರುವುದರಿಂದ ಅದ್ವೈತ ಮತದಲ್ಲಿ ಬ್ರಾಹ್ಮಣ ವರ್ಣಾದಿ ಜಗತ್ತು ಕಲ್ಪಿತವಾದುದು ( ಭ್ರಮದಿಂದ ಕಾಣುವುದು ) ಹೀಗೆಂದು ಹೇಳುವುದು ಯುಕ್ತವಲ್ಲ ಬ್ರಾಹ್ಮಣ ವರ್ಣಾದಿ ಜಗತ್ತು ಪಾರಮಾರ್ಥಿಕ ಸತ್ಯವಾದುದು ಎಂಬ ವಿಷಯದಲ್ಲಿ ಶ್ರುತ್ಯಾದಿ ಪ್ರಮಾಣಗಳು ಇರುವುದರಿಂದ ಇವೆಲ್ಲವೂ ( ಎಲ್ಲಾ ಜಗತ್ತು ) ಪಾರಮಾರ್ಥಿಕ ಸತ್ಯವೆಂದೇ ಕೋರ್ಟು ನಿರ್ಣಯಿಸುತ್ತದೆ

---

## ಸ್ವಪ್ನ ಪದಾರ್ಥ ವಿಷಯವಾಗಿ ಜಜ್ಜಮೆಂಟ (ತೀರ್ಮಾನ)

### ಸ್ವಪ್ನ ಪದಾರ್ಥ ವಿಷಯದಲ್ಲಿ:—

ವಾದಿ ಮತ್ತು ಪ್ರತಿವಾದಿಗಳು ದಾಖಿಲ ಮಾಡಿದ ಪ್ರಮಾಣಗಳನ್ನು ವಿಚಾರಮಾಡಿ, ಮತ್ತು ವಾದಿ ಪ್ರತಿವಾದಿಗಳ ವಕೀಲರ ಆರ್ಗ್ಯುಮೆಂಟು ( ವಿವಾದ, ಬಹಸ್ ) ಕೇಳಿ ಸ್ವಪ್ನ ಸಂಬಂಧವಾದ ಪದಾರ್ಥಗಳು ಸುಳ್ಳು ( ಮೂರು ಕಾಲದಲ್ಲಿಯೂ ಇಲ್ಲದಿರುವುದು) ಅಲ್ಲ ಎಂದೂ ಪಾರಮಾರ್ಥಿಕ ಸತ್ಯ (ನಿಜವಾದ ನಿಜ) ಎಂದೂ ಕೋರ್ಟು ತೀರ್ಪನ್ನು ಕೊಡುತ್ತದೆ

---

೩೦ ನ ತು ದೂಷಣಂ ಕಥಂಚಿತ್ ಘಟಯಿತುಂ ಶಕ್ಯೇ ವಿದ್ಯಾಗಂ ದುರ್ಘಟಂಭವೇತ್' ' ಸ ಭ್ರಾಂತೋ ನಾಮ ಕಶ್ಚಿತ್ ನ ಸಂಸಾರೋ ನಾಮ ಕಶ್ಚಿತ್ ಸರ್ವಮೇತತ್ ಸರ್ವಾತ್ಮನಾ [illegible] ಯುಕ್ತಮುತ್ಪಶ್ಯಾಮ ( ೪ ೧, ೩ ) ಸೂತ್ರದ ಭಾಷ್ಯ [illegible] ಪ್ರತಿಬುದ್ಧ [illegible] ನಾಸ್ತಿ ಕಸ್ಯಚಿದಪ್ರಬೋಧ. ಇತ್ಯಾದಿ ( ೪-೧-೩ ಶಂಕರಾಚಾರ್ಯರ ಸೂತ್ರ,ಭಾಷ್ಯ )

## ಕಾರಣಗಳು:—

### ವಾದಿಯು ದಾಖಲ ಮಾಡಿದ—

'ಅಥ ರಥಾನ್ ರಥಯೋಗಾನ್ ಪಥಃ ಸೃಜತೇ . ..ಅಥಾನಂದಾನ್ ಮುದಃ ಪ್ರಮುದ. ಸೃಜತೇ . .ಅಥ ವೇಶಾಂತಾನ್ ಪುಷ್ಕರಿಣೀ ಸ್ರವಂತೀ. ಸೃಜತೇ ಸ ಹಿ ಕರ್ತಾ ( ಬೃಹ ೪-೩-೧೦ ) ಈ ಉಪನಿಷತ್ತಿನಲ್ಲಿ ರಥ, ಕುದುರೆ, ಮತ್ತು ಮಾರ್ಗ, ಇವುಗಳನ್ನು ಉತ್ಪನ್ನ ಮಾಡುತ್ತಾನೆ ಹಾಗೆಯೇ ಆನಂದ ( ಸುಖವಿಶೇಷ ) ಮುದ (ಪುತ್ರಾದಿಲಾಭದಿಂದಾಗುವ ಸಾಧಾರಣವಾದ ಆನಂದ) ಪ್ರಮುದ ( ವಿಶೇಷಾನಂದ ) ಇವುಗಳನ್ನು ಪಲ್ವಲಾಃ ( ಸಣ್ಣ ಕೆರೆಗಳು ) ಪುಷ್ಕರಿಣೀಃ = ( ದೊಡ್ಡ ಸ್ವಚ್ಛ ಕೆರೆಗಳು ) ಸ್ರವಂತೀ =ನದಿಗಳು ಇವುಗಳನ್ನು, ಸ್ವಪ್ನ ಕಾಲದಲ್ಲಿ ಯಾವ ಪರಮಾತ್ಮನು ಸೃಷ್ಟಿಮಾಡುತ್ತಾನೋ ಆತನೇ ಸರ್ವ ಜಗತ್ತನ್ನೂ ಸೃಷ್ಟಿಸುವನು ಹೀಗೆ ಪರಮಾತ್ಮನಿಂದ ಸ್ವಪ್ನ ಪದಾರ್ಥಗಳು ಸೃಷ್ಟಿಯಾಗುತ್ತವೆಂದು ಹೇಳಿದೆ " ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಮಾಣ ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ " ಕಾಠಕ ( ೫-೮ ) ಈ ವಾಕ್ಯದಲ್ಲಿಯೂ ಈಶ್ವರನು, ಜನರು ಇಚ್ಛಿಸಿದ ಪುತ್ರಾದಿ ಪದಾರ್ಥಗಳನ್ನು ಸ್ವಪ್ನಾವಸ್ಥೆಯಲ್ಲಿ ನಿರ್ಮಾಣ ಮಾಡುತ್ತಾನೆ ಹೀಗೆಂದು ಹೇಳಿದೆ. ಮತ್ತು ಮೊಲದ ಕೋಡಿನಂತೆ ಸ್ವಪ್ನ ಪದಾರ್ಥಗಳು ತ್ರಿಕಾಲದಲ್ಲಿಯೂ ಇಲ್ಲದಿರುವುದಾದರೆ ಆ ಪದಾರ್ಥಗಳನ್ನು ಈಶ್ವರನು ಸೃಷ್ಟಿಸುತ್ತಾನೆಂಬುದು ಅಸಂಗತವು ಈ ಎರಡೂ ಕಾರಣಗಳಿಂದ ಆ ಸ್ವಪ್ನ ಪದಾರ್ಥಗಳು ಸತ್ಯವೇ, ಸುಳ್ಳಲ್ಲವೆಂದು ಸಿದ್ಧವಾಗುತ್ತದೆ.

'ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಭಿಪಶ್ಯತಿ ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ ' ಇತ್ಯಾದಿ ಈ ಛಾಂದೋಗ್ಯಶ್ರುತಿಯು ಕೆಲವು ಸ್ವಪ್ನ ಪದಾರ್ಥಗಳು ಶುಭಸೂಚಕವೆಂದು ತಿಳಿಸುತ್ತದೆ. ಮತ್ತು ' ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ ' (ಐತರೇಯ) ಇತ್ಯಾದಿಶ್ರುತಿಯು ಕೆಲವು ಸ್ವಪ್ನ ಪದಾರ್ಥಗಳನ್ನು ಅಶುಭ ಸೂಚಕಗಳೆಂದು ಹೇಳುತ್ತದೆ. ಈ ಪ್ರಕಾರವಾಗಿ ಎರಡೂ ಶ್ರುತಿಗಳು ಸ್ವಪ್ನ ಪದಾರ್ಥಗಳು ಶುಭಾಶುಭ ಸೂಚಕಗಳೆಂದು ಹೇಳುವುದರಿಂದ ಮತ್ತು ಸುಳ್ಳು ಪದಾರ್ಥಗಳಿಗೆ ಇಂತಹ ಸೂಚಕತ್ವ ಧರ್ಮವು ಕೂಡುವುದಿಲ್ಲವಾದುದರಿಂದ, ' ಸ್ವಾಪ್ನಪದಾರ್ಥಾಃ ಸತ್ಯಾಃ ಅರ್ಥಕ್ರಿಯಾಕಾರಿತ್ವಾತ್ ' ಇತ್ಯಾದಿ ಅನುಮಾನದಿಂದಲೂ ಸ್ವಾಪ್ನ ಪದಾರ್ಥಗಳೂ ಸತ್ಯವೆಂದೇ ಸಿದ್ಧವಾಗುತ್ತದೆ.

ಯಾವ ಕಾಲದಲ್ಲಿಯೂ ಇಲ್ಲದಿರುವ ಶಶವಿಷಾಣಾದಿಗಳಿಂದ ಕಾರ್ಯವು ಹುಟ್ಟುವುದಿಲ್ಲವಾದುದರಿಂದ ಸ್ವಾಪ್ನಕಾಮಿನೀ ಸಂಭೋಗ ಇತ್ಯಾದಿ ಸ್ವಾಪ್ನ

ಪದಾರ್ಥಗಳು ಮೂರು ಕಾಲಗಳಲ್ಲಿಯೂ ಇಲ್ಲದಿರುವುವು ಆದರೆ ಆ ಪದಾರ್ಥಗಳಿಂದ ರೇತೋತ್ಸರ್ಜನಾದಿ ಕಾರ್ಯಗಳು ಹೇಗೆ ಉತ್ಪನ್ನ ವಾಗುವುವು ರೇತೋತ್ಸರ್ಜನಾದಿ ಕಾರ್ಯಗಳಂತೂ ಸ್ವಾಪ್ನ ಕಾಮಿನೀ ಸಂಭೋಗದಿಂದ ಉತ್ಪನ್ನವಾಗುವುದರಿಂದ ಸತ್ಯವಾದುದು ಎಂದೇ ಸಿದ್ಧಿಸುತ್ತದೆ ಮೂರು ಕಾಲದಲ್ಲಿಯೂ ಇಲ್ಲದಿರುವುದು ಎಂದರೆ ಸುಳ್ಳು ಪದಾರ್ಥವಲ್ಲಂದೇ ಸಿದ್ಧವಾಗುತ್ತದೆ

ಹೇಗೆ, 'ಘಟ ಸನ್ ಪಟಃಸನ್' = ಘಟವು ಸತ್ಯವು, ಪಟವು ಸತ್ಯವು, ಎಂದು ಜಾಗ್ರತ್ ಕಾಲದಲ್ಲಿ ಪ್ರತ್ಯಕ್ಷವಾಗುವುದರಿಂದ ಘಟಾದಿ ಪದಾರ್ಥಗಳು ಸತ್ಯವೆಂದು ತಿಳಿಯಬೇಕಾದುದೋ ಹಾಗೆಯೇ 'ಗಜಃಸನ್ ಘಟ ಸನ್' =ಆನೆ ಸತ್ಯವು, ಘಟವು ಸತ್ಯವು ಎಂದು ಸ್ವಪ್ನ ಕಾಲದಲ್ಲಿಯೂ ಕೂಡ ಪ್ರತ್ಯಕ್ಷ ಬರುವುದರಿಂದ, ಪ್ರತ್ಯಕ್ಷದಿಂದಲೂ ಕೂಡ ಸ್ವಾಪ್ನ ಪದಾರ್ಥಗಳು ಸತ್ಯವೆಂದೇ ಸಿದ್ಧವಾಗುತ್ತದೆ

"ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ (೨-೨-೨೯) ಈ ಬ್ರಹ್ಮಸೂತ್ರದಿಂದ ಸ್ವಾಪ್ನ ಪದಾರ್ಥಗಳಿಗೆ ಬಾಧಬರುವುದೆಂದು ಸೂತ್ರಕಾರರು ಹೇಳಿದ್ದಾರೆ ಆದುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳೆಂದು ಪ್ರತಿವಾದಿಯು ಹೇಳುವದು ಉಚಿತವಲ್ಲ ಏಕೆಂದರೆ ಆ ಸೂತ್ರದಲ್ಲಿ ಸರ್ವ ಸ್ವಾಪ್ನ ಪದಾರ್ಥಗಳಿಗೆ ಬಾಧ ಉಂಟಾಗುವದೆಂದು ಹೇಳಿಲ್ಲ ಮತ್ತು 'ಸ್ವಪ್ನೇ ಸಚ್ಚ ಅಸಚ್ಚ ಸರ್ವಂ ಪಶ್ಯತಿ" (ಷಟ್ಪ್ರಶ್ನೆ ೪-೫) ಈ ಉಪನಿಷತ್ತಿನ ವಾಕ್ಯದಲ್ಲಿ ಜೀವವು ಸ್ವಪ್ನಾವಸ್ಥೆಯಲ್ಲಿ ಸತ್ಯ ಪದಾರ್ಥಗಳನ್ನೂ, ಅಸತ್ಯ ಪದಾರ್ಥಗಳನ್ನೂ ನೋಡುತ್ತಾನೆ ಈ ಪ್ರಕಾರ ಸ್ವಪ್ನಾವಸ್ಥೆಯಲ್ಲಿ ಕಾಣುವ ಪದಾರ್ಥಗಳು ಸತ್ಯವೆಂದು ಹೇಳಿದೆ. ಆದರೆ ಸ್ವಪ್ನಾವಸ್ಥೆಯಲ್ಲಿ ಗೋಚರವಾಗುವ ಬಾಧಿತ ಮತ್ತು ಅಬಾಧಿತ ಸಮಸ್ತ ಪದಾರ್ಥಗಳೂ ಮಿಥ್ಯೆಯಾದರೆ ಸ್ವಪ್ನಾವಸ್ಥೆಯಲ್ಲಿ ಜ್ಞಾತವಾಗುವ ಆತ್ಮನಿಗೂ ಕೂಡ ಮಿಥ್ಯಾತ್ವವನ್ನು ಒಪ್ಪಬೇಕಾದೀತು ಸ್ವಪ್ನಾವಸ್ಥೆಯಲ್ಲಿ ಜ್ಞಾತವಾಗುವ ಆತ್ಮನು ಬಾಧಿತನಾಗದಿರುವುದರಿಂದ ಹೇಗೆ ಅವನ ಸತ್ಯತ್ವವನ್ನು ಒಪ್ಪುವರೋ ಅದರಂತೆಯೆ ಬಾಧಿತವಾಗದೆ ಇದ್ದ ಸ್ವಪ್ನ ಪದಾರ್ಥಗಳ ಸತ್ಯತ್ವವನ್ನು ಒಪ್ಪಿಕೊಂಡು ಸ್ವಾಪ್ನ ಪದಾರ್ಥಗಳಲ್ಲಿ ಯಾವುದು ಬಾಧಿತವಾಗುವುದೋ ಅದನ್ನು ಅಸತ್ಯವೆಂದು ಒಪ್ಪಿದರೆ ಆ ಸೂತ್ರಬಾಧವು ಉಂಟಾಗುವದಿಲ್ಲ

ಸಮಸ್ತ ಸ್ವಾಪ್ನ ಪದಾರ್ಥಗಳಿಗೆ ಬಾಧ (ಇಲ್ಲ ಎಂಬ ಜ್ಞಾನವು) ಉಂಟಾಗುವುದರಿಂದ ಅವೆಲ್ಲವೂ ಸುಳ್ಳಾದುವು ಎಂಬ ಪ್ರತಿವಾದಿಯ ಹೇಳಿಕೆಯು ಸರಿಯಾದುದು ಅಲ್ಲ.

(೧) ಕಾರ್ತೀಕ ಮಾಸದಲ್ಲಿ ಕಣ್ಣಿಗೆ ಬಿದ್ದ ಒಬ್ಬ ಮನುಷ್ಯನನ್ನು ಪುನಃ ಎಲ್ಲಿಯಾದರೂ ನೋಡುವಾಗ ಇವನು ವೈಶಾಖಮಾಸದಲ್ಲಿ ಕಣ್ಣಿಗೆ ಬಿದ್ದವನು

ಎಂದು ತಿಳಿದು ಬರುತ್ತದೆ ಸ್ವಲ್ಪ ಹೊತ್ತಿನ ಮೇಲೆ ಸರಿಯಾಗಿ ನೆನಪು ಉಂಟಾಗಿ ಇವನು ವೈಶಾಖ ಮಾಸದಲ್ಲಿ ಕಣ್ಣಿಗೆ ಬಿದ್ದವನಲ್ಲ ಕಾರ್ತೀಕದಲ್ಲಿ ಕಣ್ಣಿಗೆ ಬಿದ್ದವನು ಎಂಬ ಬಾಧಜ್ಞಾನವು ಬರಲು ಆ ಮನುಷ್ಯನಲ್ಲಿ ತೋರುವ ವೈಶಾಖ ಮಾಸದಲ್ಲಿ ಗೋಚರನಾದವನೆಂಬ ಧರ್ಮವು ಸುಳ್ಳು, ಆದರೂ ಆ ಮನುಷ್ಯನೇ ಸುಳ್ಳು ಎಂದು ಆಗುವುದಿಲ್ಲ ಅದರಂತೆಯೇ ' ನೇದಂ ಜಾಗ್ರತ್ ಕಿಂತು ಸ್ವಾಪ್ನಮೇವ ' ಈ ಪದಾರ್ಥವು ಜಾಗ್ರತ್ಕಾಲದುದು ಅಲ್ಲ ಸ್ವಾಪ್ನಕಾಲದುದು ' ಎಂದು ಜ್ಞಾನ ಉಂಟಾಗುತ್ತದೆ. ' ನೇದಂ ' ಈ ಪದಾರ್ಥವೇ ಇಲ್ಲ ಎಂಬ ಬಾಧಜ್ಞಾನ ಬರದೇ ಇರುವದರಿಂದ ಆ ಬಾಧ ಜ್ಞಾನದಿಂದ ಸ್ವಾಪ್ನ ಪದಾರ್ಥದಲ್ಲಿ ನೋಡಿದ ಜಾಗ್ರತ್ಕಾಲೀನತ್ವವು ಮಾತ್ರ ಸುಳ್ಳು, ಸ್ವಾಪ್ನ ಪದಾರ್ಥವು ಸುಳ್ಳಲ್ಲ.

ಮಿಂಚು ಪೂರ್ವಕ್ಷಣದಲ್ಲಿಯೂ, ಉತ್ತರಕ್ಷಣದಲ್ಲಿಯೂ ಇಲ್ಲದುದು, ಮಧ್ಯಕ್ಷಣದಲ್ಲಿ ಮಾತ್ರ ಹುಟ್ಟಿ, ತತ್ಕಾಲದಲ್ಲಿಯೇ ನಷ್ಟವಾಗುತ್ತದೆ, ಇದು ಎಲ್ಲರಿಗೂ ಅನುಭವಸಿದ್ಧವೇ! ಇದರಂತೆಯೇ ಸ್ವಾಪ್ನ ಪದಾರ್ಥವು ಕೂಡ ಅದೇ ಕ್ಷಣದಲ್ಲಿ ಉತ್ಪನ್ನವಾಗಿ ಆಗಲೇ ನಷ್ಟವಾಗುತ್ತದೆ. ಹೀಗೆಂದು ಹೇಳುವುದರಿಂದ ಏನೂ ಬಾಧಕ ಉಂಟಾಗುವದಿಲ್ಲ ಆದುದುರಿಂದ ಸ್ವಾಪ್ನ ಪದಾರ್ಥವು ಪೂರ್ವ ಕ್ಷಣದಲ್ಲಿಯೂ, ಉತ್ತರ ಕ್ಷಣದಲ್ಲಿಯೂ ಇಲ್ಲದುದು, ಮಧ್ಯಕ್ಷಣದಲ್ಲಿ ಉತ್ಪನ್ನವಾಗಿ ನಷ್ಟವಾಗುವುದು ಕೂಡುವುದಿಲ್ಲವೆಂದು ಪ್ರತಿವಾದಿಯ ಹೇಳಿಕೆ ಸರಿಯಾದುದಲ್ಲ.

" ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ " ಈ ಸೂತ್ರದಲ್ಲಿ ಸೂತ್ರಕಾರರು ಸ್ವಾಪ್ನ ಪದಾರ್ಥವು ಮಿಥ್ಯೆಯೆಂಬ ವಿಷಯದಲ್ಲಿ ಆರು ಕಾರಣಗಳನ್ನು ಹೇಳಿದ್ದಾರೆಂದು ತೋರಿಸಿ ಸ್ವಪ್ನದಲ್ಲಿ ಕಂಡುಬರುವ ರಥ, ಕುದುರೆ, ನದಿ, ದಿವಸ, ಗ್ರೀಷ್ಮಋತು, ಇತ್ಯಾದಿ ಪದಾರ್ಥಗಳು ಸುಳ್ಳು ಎಂದು ಹೇಳಿದೆ ಎಂದು ಪ್ರತಿವಾದಿಯು ಹೇಳಿದ್ದಾನೆ. ಆ ಆರು ಕಾರಣಗಳೂ ಸರಿಯಾದುದಲ್ಲ. ಮತ್ತು ಅದನ್ನು ಒಪ್ಪುವುದು ಸ್ವವ್ಯಾಹತವಾಗುತ್ತದೆ. ಆದುದರಿಂದ ಪ್ರತಿವಾದಿ ಹೇಳಿದ ಅರ್ಥವು ಸೂತ್ರಕಾರರಿಗೆ ಸಮ್ಮತವಾದುದಲ್ಲ. ಏಕೆಂದರೆ—

೧. ಶಂಕರಾಚಾರ್ಯ ಮುಂತಾದವರು ಬೃಹದಾರಣ್ಯಕ ಉಪನಿಷತ್ತಿನ ತಮ್ಮ ವ್ಯಾಖ್ಯಾನಗಳಲ್ಲಿ " ವಾಸನಾಮಾತ್ರರೂಪಾನ್ " " ವಾಸನಾಮಯೀ ಸೃಷ್ಟಿಃ " ಇತ್ಯಾದಿ ವಾಕ್ಯಗಳಿಂದ ಸ್ವಪ್ನ ಪದಾರ್ಥಗಳಿಗೆ ಸಂಸ್ಕಾರವು ( ವಾಸನಾ ) ಉಪಾದಾನ ಕಾರಣವೆಂದು ಹೇಳಿದ್ದಾರೆ. ಭಾಮತಿಕಾರನುಕೂಡ ಬ್ರಹ್ಮಸೂತ್ರ ೨-೧-೩೧ ದ ವ್ಯಾಖ್ಯಾನದಲ್ಲಿ ಬಾಹ್ಯಪದಾರ್ಥಗಳಾದ ಕಾಷ್ಠಾದಿಗಳ ಅಪೇಕ್ಷೆಯಿಲ್ಲದೆಯೇ ದೇಹದಲ್ಲಿ ಇರುವ ಆಂತರಿತ ಕಾರಣದಿಂದೆಯೆ ( ವಾಸನಾದಿಂದೆಯೆ ) ರಥಾದಿಗಳ ಸೃಷ್ಟಿ ಕಂಡುಬರುತ್ತದಾದುದರಿಂದ ಇದು ಸ್ವಪ್ನ ಸೃಷ್ಟಿಯೇ

ಅಲ್ಲ ಎಂದು ಅಪಲಾಪ ಮಾಡಲು ಬರುವ ಹಾಗಿಲ್ಲವೆಂದು ಹೇಳಿದ್ದಾನೆ. ಹೀಗೆ ಹೇಳಿರುವುದರಿಂದಲೂ ಸ್ವಾಪ್ನ ಪದಾರ್ಥಗಳಿಗೆ ಸಂಸ್ಕಾರವು (ವಾಸನಾ) ಉಪಾದಾನ ಕಾರಣವುಂಟೆಂದು ಸಿದ್ಧವಾಗುತ್ತಿದ್ದರಿಂದ "ಸ್ವಾಪ್ನ ಪದಾರ್ಥಗಳಿಗೆ ಉಪಾದಾನ ಕಾರಣವಿಲ್ಲವಾದುದರಿಂದ ಮಿಥ್ಯಾ" ಎಂದು ಹೇಳುವ ಮೊದಲನೆಯ ಕಾರಣವು ಅಯುಕ್ತವೂ ಸ್ವವ್ಯಾಹತವೂ ಆಗುವುದು

೨ ದೇಹದಲ್ಲಿರುವ ವಾಸನಾದಿಂದ ಸ್ವಾಪ್ನರಥಾದಿಗಳು ಪರಿಣತವಾಗಿರುವುದರಿಂದ ( ವಾಸನೆಯೇ ರಥರೂಪದಿಂದ ವ್ಯಕ್ತವಾಗಿರುವುದರಿಂದ ) ಆ ಸ್ವಾಪ್ನ ಪದಾರ್ಥಗಳು ( ರಥಾದಿಗಳು ) ದೇಹದೊಳಗೆ ಇರಲು ಬಾಧಕವೇನೂ ಇಲ್ಲ ಆದುದರಿಂದ ಸ್ವಪ್ನದಲ್ಲಿ ಕಾಣುವ ದೊಡ್ಡ ದೊಡ್ಡ ಕುದುರೆ, ರಥ, ಪರ್ವತ ಇತ್ಯಾದಿ ಪದಾರ್ಥಗಳು ದೇಹದೊಳಗೆ ಇರಲು ಸರಿಯಾದ ಸ್ಥಳವಿಲ್ಲ ಆದುದರಿಂದ ಆ ಸ್ವಪ್ನವು ಸುಳ್ಳಾದುದು ಎಂದು ಹೇಳುವ ಎರಡನೆಯ ಕಾರಣವು ಸರಿಯಲ್ಲ.

೩ ಪರಮಾತ್ಮನು ಸ್ವಪ್ನಕಾಲದಲ್ಲಿ ರಥಾದಿಗಳನ್ನೂ ಹೇಗೆ ಸೃಜಿಸುತ್ತಾನೆಯೋ ಹಾಗೆಯೇ ಸ್ವಪ್ನಕಾಲದಲ್ಲಿ ಹಗಲನ್ನೂ ಗ್ರೀಷ್ಮ ಋತುವನ್ನೂ ಸೃಷ್ಟಿಸುವನು ಆದುದರಿಂದ ಸ್ವಪ್ನಕಾಲದಲ್ಲಿ ರಾತ್ರಿಯಲ್ಲಿ ಹಗಲನ್ನೂ ವಸಂತ ಋತುವಿನಲ್ಲಿ ಗ್ರೀಷ್ಮ ಋತುವನ್ನೂ ನೋಡುವದು ಕೂಡುತ್ತದೆ. ಆದುದರಿಂದ ರಾತ್ರಿಯಲ್ಲಿ ನಿದ್ದೆ ಹೋಗುತ್ತಿದ್ದ ಮನುಷ್ಯನು ಸ್ವಪ್ನದಲ್ಲಿ ಹಗಲನ್ನು ಕಾಣುತ್ತಾನೆ ವಸಂತ ಋತುವಿನಲ್ಲಿ ಮಲಗಿದವನು ಸ್ವಪ್ನದಲ್ಲಿ ಗ್ರೀಷ್ಮಋತುವನ್ನು ನೋಡುತ್ತಾನೆ. ರಾತ್ರಿಯಲ್ಲಿ ದಿವಸವಿರುವುದಿಲ್ಲ ವಸಂತ ಋತುವಿನಲ್ಲಿ ಗ್ರೀಷ್ಮಋತುವಿರುವದಿಲ್ಲ. ಆದುದರಿಂದ ಸ್ವಪ್ನವು ಸುಳ್ಳಾದುದು ಎಂದು ಹೇಳುವ ಪ್ರತಿವಾದಿಯ ಮೂರನೆಯ ಕಾರಣವು ಯುಕ್ತವಲ್ಲ

೪ ಒಂದು ನಿಮಿಷದಲ್ಲಿಯೇ ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿಮಾಡುವವನು ಇಲ್ಲ ಆದುದರಿಂದ ಸ್ವಪ್ನವು ಸುಳ್ಳು ಹೀಗೆಂದು ಪ್ರತಿವಾದಿಯು ಈ ವಿಷಯವಾಗಿ ಹೇಳುವ ನಾಲ್ಕನೆಯ ಕಾರಣವು ಯುಕ್ತವಾದುದಲ್ಲ. ಏಕೆಂದರೆ 'ಸ ಹಿ ಕರ್ತಾ' ಇತ್ಯಾದಿ ಶ್ರುತಿಯಲ್ಲಿ ಈಶ್ವರನೇ ಸ್ವಾಪ್ನ ಪದಾರ್ಥಗಳ ಕರ್ತೃವು. (ಕಾರಣನು) ಎಂದು ಹೇಳಿದೆ ಮತ್ತು 'ಸರ್ವೋಪೇತಾ ಚ ತದ್ದರ್ಶನಾತ್' ( ಬ್ರ. ಸೂ ೨-೧-೩೦) ಈ ಸೂತ್ರದ ವ್ಯಾಖ್ಯಾನ ಕಾಲದಲ್ಲಿ "ಸರ್ವಕರ್ಮಾ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ" ಇತ್ಯಾದಿ ಪ್ರಮಾಣಗಳನ್ನು ಉದಾಹರಿಸಿ, ಪರಮಾತ್ಮನು ವಿಚಿತ್ರ ಸಾಮರ್ಥ್ಯವುಳ್ಳವನು ಹೀಗೆಂದು ಶಂಕರಾಚಾರ್ಯರೂ ಹೇಳಿರುವುದರಿಂದ ಒಂದು ನಿಮಿಷದಲ್ಲ ಸ್ವಾಪ್ನ ಪದಾರ್ಥಗಳನ್ನು ನಿರ್ಮಾಣ ಮಾಡುವವನಿದ್ದಾನೆಂಬುದು ಸಿದ್ಧವಾಗುತ್ತದೆ.

೫ ಸ್ವಾಪ್ನ ಪದಾರ್ಥಗಳ ಜ್ಞಾನವು ಹುಟ್ಟುವುದು ಸರ್ವರಿಗೂ ಅನುಭವ ಸಿದ್ಧವಾದುದು ಕಾರಣವಿಲ್ಲದೆ ಕಾರ್ಯದ ಉತ್ಪತ್ತಿ ಅಸಂಗತವು. ಆದುದರಿಂದ ಆ ಸ್ವಪ್ನಜ್ಞಾನಕ್ಕೆ ( ಕಾರ್ಯಕ್ಕೆ ) ಕಾರಣ ಉಂಟೆಂದು ಸರ್ವರೂ ಒಪ್ಪಬೇಕಾದುದು ಆ ಕಾರಣವು ಯಾವದು? ಹೀಗೆ ವಿಚಾರ ಮಾಡಿದರೆ, ಸ್ವಪ್ನಕಾಲದಲ್ಲಿ ಮನಸ್ಸು ಉಪರತವಾಗಿರುವುದಿಲ್ಲ (ಜಾಗ್ರತವಾಗಿರುವುದು ) ಆದುದರಿಂದ ಮನಸ್ಸನ್ನೇ ಕಾರಣವನ್ನಾಗಿ ಹೇಳಬೇಕು. ಅಥವಾ ಬೇರೆ ಯಾವದಾದರೊಂದು ಕಾರಣವನ್ನು ತೋರಿಸಲೇ ಬೇಕಾಗುವುದು ಆದುದರಿಂದ ಸ್ವಾಪ್ನ ಪದಾರ್ಥಗಳ ಜ್ಞಾನಕ್ಕೆ ಕಾರಣವಿಲ್ಲವೆಂದೂ ಅದರಿಂದ ಸ್ವಪ್ನವೇ ಸುಳ್ಳೆಂದೂ ಹೇಳುವ ಐದನೆಯ ಕಾರಣವೂ ನಿರಾಧಾರವಾದುದು

೬ 'ನ ತತ್ರ ರಥಾ ನ ರಥಯೋಗಾಃ ನ ಪಂಥಾನೋ ಭವಂತಿ ಅಥ ರಥಾನ್ ರಥಯೋಗಾನ್ ಪಥಃ ಸೃಜತೇ ' ಈ ಶ್ರುತಿಯು ಪೂರ್ವದಲ್ಲಿ ರಥಾದಿಗಳು ಇರಲಿಲ್ಲವೆಂದೂ ಅಥ=ಆ ನಂತರ ಈಶ್ವರನು ರಥಾದಿಗಳನ್ನು ಸೃಜಿಸಿದನೆಂದೂ ಹೇಳುತ್ತದೆ ಆದುದರಿಂದ ರಥಾದಿ ಪದಾರ್ಥಗಳು ಪೂರ್ವದಲ್ಲಿ ಇರಲಿಲ್ಲ ( ಪ್ರಾಗಭಾವ ಪ್ರತಿಯೋಗಿ ) ಎಂದೇ ಸಿದ್ಧವಾಗುವುದು. ಆದರೆ ಎಂದಿಗೂ ಇರುವುದಿಲ್ಲವೆಂದು ( ಅತ್ಯಂತಾಭಾವ ಪ್ರತಿಯೋಗಿ ) ಸಿದ್ಧವಾಗುವುದಿಲ್ಲ

ಲಗ್ನವಾಗುವ ಮುಂಚ ಮಕ್ಕಳು ಇರಲಿಲ್ಲ, ಆಮೇಲೆ ಹುಟ್ಟಿದರು ಎಂದು ಹೇಳಿದರೆ ಲಗ್ನದ ಪೂರ್ವದಲ್ಲಿ ಆ ಮಕ್ಕಳು ಇರಲಿಲ್ಲವೆಂದೇ ಸಿದ್ಧವಾಗುವುದು. ಅವರು ಮಿಥ್ಯಾ ( ತ್ರಿಕಾಲದಲ್ಲಿಯೂ ಇಲ್ಲದಿರುವವರು ) ಎಂದು ಎಂದಿಗೂ ಸಿದ್ಧಿಸದು 'ಪೂರ್ವದಲ್ಲಿ ಇರಲಿಲ್ಲ, ಆಮೇಲೆ ಹುಟ್ಟಿದರು' ಎಂದಿಷ್ಟೇ ಹೇಳಿದ ಮಾತ್ರಕ್ಕೆ ಆ ಪದಾರ್ಥಗಳು ಸುಳ್ಳೆಂದಾಗುವದಾದರೆ, ಮೊದಲು ಬಿ ಎ ಪರೀಕ್ಷೆ ಆಗಿರಲಿಲ್ಲ, ಈಗ ಆಗಿದ್ದಾನೆ, ಮೊದಲು ಮನೆ ಇರಲಿಲ್ಲ, ಈಗ ಮನೆ ಕಟ್ಟಿದೆ, ಹೀಗೆ ಹೇಳಲು ಬಿ. ಎ ಆದುದು ಸುಳ್ಳು, ಮನೆ ಸುಳ್ಳು ಎಂದು ಒಪ್ಪಬೇಕಾದೀತು! ಆದುದರಿಂದ ಈ ವೇದವು 'ಪೂರ್ವದಲ್ಲಿ ರಥಾದಿಗಳು ಇರಲಿಲ್ಲ. ಆ ಮೇಲೆ ಸೃಷ್ಟವಾದುವು' ಹೀಗೆಂದು ಹೇಳುವುದರಿಂದ ಸ್ವಾಪ್ನ ರಥಾದಿಗಳು ಎಂದೂ ಇಲ್ಲದುವಲ್ಲ (ಮಿಥ್ಯಾ ಆದುವು) ಎಂದು ಸಿದ್ಧವಾಗುವುದಿಲ್ಲ. ಆದುದರಿಂದ ಸ್ವಾಪ್ನ ರಥಾದಿಗಳಿಗೆ "ನ ತತ್ರ ರಥಾಃ" ಈ ಶ್ರುತಿಯಿಂದ ಬಾಧಜ್ಞಾನ ( ಸ್ವಪ್ನ ಪದಾರ್ಥಗಳು ಎಂದಿಗೂ ಇಲ್ಲದುವು ಎಂಬ ಜ್ಞಾನ ) ಉತ್ಪನ್ನವಾಗುವುದಿಲ್ಲ,

ಹೀಗಿರುವುದರಿಂದ "ಇದಂ ರಜತಂ" ( ಇದು ಬೆಳ್ಳಿ ) ಈ ಜ್ಞಾನಕ್ಕೆ 'ನೇದಂ ರಜತಂ=ಇದು ಬೆಳ್ಳಿಯಲ್ಲ' ಎಂಬ ಬಾಧಜ್ಞಾನ ಉಂಟಾಗುವುದೆಂದು ಹೇಗೆ ಆ ಬೆಳ್ಳಿಯನ್ನು ( ಸತ್ಯವೆಂದು ) ಒಪ್ಪಕೊಡದೋ ಹಾಗೆಯೇ 'ನ ತತ್ರ ರಥಾ.' ಇತ್ಯಾಗಿ ಶ್ರುತಿಯಿಂದ ಸ್ವಾಪ್ನ ರಥಾದಿಗಳು ತ್ರಿಕಾಲದಲ್ಲಿಯೂ ಇಲ್ಲ

ದುವು ಎಂಬ ಬಾಧಜ್ಞಾನವು ಹುಟ್ಟುವುದಾದ ಕಾರಣ ಸ್ವಾಪ್ನ ಪದಾರ್ಥಗಳು ಮಿಥ್ಯೆ ಎಂದು ತಿಳಿಯಬೇಕೆಂದೂ ಉಪಪಾದನೆ ಮಾಡುವ ಆರನೆಯ ಕಾರಣವು ಸರಿಯಾದುದಲ್ಲ ಆದುದರಿಂದ ಶಂಕರಾಚಾರ್ಯರ ಆ ಸೂತ್ರಾರ್ಥವು ಯುಕ್ತವಾದುದಲ್ಲ

'ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವು' ಎಂಬ ವಿಷಯವಾಗಿ ಪ್ರತಿವಾದಿಯು ಹೇಳಿದ ಆರು ಕಾರಣಗಳು ಅಯುಕ್ತವಾದುವು ಆದುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳಾದುವು (ಮಿಥ್ಯಾ) ಎಂದು ಸಿದ್ಧಿಸುವದಿಲ್ಲ ಅಯುಕ್ತವಾದ ಕಾರಣಗಳನ್ನು ಸೂತ್ರಕಾರರು ಹೇಳುತ್ತಾರೆಂಬುದೂ ಅಸಂಗತವಾದುದು 'ಸಂಧ್ಯೇ ಸೃಷ್ಟಿರಾಹ ಹಿ' ನಿರ್ಮಾತಾರಂ ಚೈಕೇ ಪುತ್ರಾದಯಶ್ಚ' ಈ ಸೂತ್ರಗಳು 'ಮಾಯಾಮಾತ್ರಂ ತು' ಇತ್ಯಾದಿ ಸೂತ್ರಗಳಿಗಿಂತ ಪೂರ್ವದಲ್ಲಿವೆ ಇವುಗಳಲ್ಲಿ ಸ್ವಾಪ್ನ ಪದಾರ್ಥಗಳು ಈಶ್ವರನಿಂದ ಸೃಷ್ಟವಾದುವು ಎಂದು ಹೇಳಿದೆ. 'ಸ್ವಪ್ನೇ .ಸಚ್ಚ ಅಸಚ್ಚ ಪಶ್ಯತಿ' ಈ ಶ್ರುತಿ ಸ್ಪಷ್ಟವಾಗಿ ಸ್ವಪ್ನಕಾಲದಲ್ಲಿ ಜೀವನು ಸತ್ಯ ಪದಾರ್ಥಗಳನ್ನು ನೋಡುತ್ತಾನೆ ಎಂದು ಹೇಳುತ್ತದೆ 'ಮಾಯಾ ಮಾತ್ರಂ ತು . . . . ' ಈ ಸೂತ್ರವು ಶಂಕರಾಚಾರ್ಯರು ಹೇಳಿದಂತೆ ಸ್ವಪ್ನವು ಮಿಥ್ಯೆಯಾದುದು ಎಂಬುದನ್ನು ತಿಳಿಸುವುದಕ್ಕಾಗಿ ಪ್ರಸಕ್ತವಾಗಿಲ್ಲ. ಈ ಸೂತ್ರದಲ್ಲಿ ಮಿಥ್ಯಾ ಬೋಧಕವಾದ ಪದವೂ ಇಲ್ಲ 'ಮಾಯಾಮಾತ್ರಂ' ಈ ಪದಕ್ಕೆ 'ಮಾಯಾ ವಯುನಂ ಜ್ಞಾನಂ' ಹೀಗೆ ನಿಘಂಟುವಿನಲ್ಲಿ ಮಾಯಾ ಶಬ್ದಕ್ಕೆ ಜ್ಞಾನ ಎಂದು ಅರ್ಥವು ಉಕ್ತವಾಗಿದೆ ಶಂಕರಾಚಾರ್ಯರೂ ಕೂಡ ಈ 'ಮಾಯೆ' ಎಂಬ ಪದಕ್ಕೆ 'ಪ್ರಜ್ಞಾ' ಎಂದು ಅರ್ಥ ಮಾಡಿದ್ದಾರೆ. ಸ್ವಾಪ್ನ ಪದಾರ್ಥಗಳು ಮಾಯಾಮಾತ್ರಂ (ಜ್ಞಾನಮಯ=ಜ್ಞಾನಾಂಶಭೂತ ವಾಸನಾಮಯ=ವಾಸನೆಯಿಂದ ಪರಿಣತವಾದುವು) ಎಂದಾಗುತ್ತದೆ. 'ಮಾಯಾಮಾತ್ರಂ' ಎಂಬ ಪದಕ್ಕೆ ಮಿಥ್ಯಾ (ತ್ರಿಕಾಲದಲ್ಲಿಯೂ ಇಲ್ಲದುದು) ಎಂದು ಅರ್ಥವಾಗುವುದಿಲ್ಲ. ಜಾಗ್ರತ್‌ಕಾಲದಲ್ಲಿ ಜ್ಞಾನಕ್ಕೆ ವಿಷಯವಾಗುವ (ತಿಳಿದು ಬರುವ) ಪದಾರ್ಥಗಳಲ್ಲಿ 'ಶುಕ್ತಿರಜತ, ರಜ್ಜುಸರ್ಪ' ಇತ್ಯಾದಿಗಳು ಬಾಧಿತವಾಗುತ್ತವೆ. ಅದರಂತೆಯೇ ಸ್ವಪ್ನ ಕಾಲದಲ್ಲಿ ತಿಳಿದು ಬರುವ ಜಾಗ್ರತ್ಕಾಲವೃತ್ತಿತ್ವ (ಜಾಗ್ರತ್ ಅವಸ್ಥೆಯಲ್ಲಿ ಇರುವಿಕೆ) ಮತ್ತು ಸ್ವಾಪ್ನ ಪದಾರ್ಥಗಳಿಗೆ ಜಾಗ್ರತ್ಕಾಲೀನ ಬಾಹ್ಯ ವಸ್ತುಗಳಿಂದ ಅಭೇದವು ತಿಳಿಯುವದು ಬಾಹ್ಯ ವಸ್ತುವಿನಂತೆ ಸ್ಥೂಲಾಕಾರ ಇತ್ಯಾದಿ ಕೆಲವು ಪದಾರ್ಥಗಳು ಬಾಧಿತವಾಗುವದರಿಂದ ಸುಳ್ಳಾದರೂ ಈಶ್ವರನು ಸಂಸ್ಕಾರವನ್ನು ಉಪಾದಾನ ಕಾರಣವನ್ನಾಗಿ ಮಾಡಿ ಜೀವನ ಅದೃಷ್ಟವನ್ನು ನಿಮಿತ್ತ ಕಾರಣವನ್ನಾಗಿ ಮಾಡಿಕೊಂಡು ಸ್ವಪ್ನದಲ್ಲಿ ರಥ, ಕುದುರೆ ಇತ್ಯಾದಿ ಪದಾರ್ಥಗಳನ್ನು ಸೃಜಿಸುತ್ತಾನೆ. ಆದುದರಿಂದ ಅವು ಸುಳ್ಳಲ್ಲವೆಂದೂ ಸತ್ಯವೇ ಎಂದೂ ಕೋರ್ಟು ವ್ಯವಸ್ಥಾಪಿಸುತ್ತದೆ

## ಡಿಕ್ರಿ ( ತೀರ್ಪು )

೧. ಜಗತ್ತು ಪಾರಮಾರ್ಥಿಕ ಸತ್ಯವಾದುದು ಎಂಬ ವಿಷಯದಲ್ಲಿ ವೇದ, ಸೂತ್ರ, ಗೀತಾ, ಪ್ರತ್ಯಕ್ಷ ಅನುಮಾನ ಇವೆಲ್ಲ ಪ್ರಮಾಣಗಳು ಆಧಾರವಾಗಿವೆ

೨. ಜಗತ್ತು ಮಿಥ್ಯೆಯಾದುದು ಎಂದು ತೋರಿಸಲಿಕ್ಕೆ ವೇದ, ಸೂತ್ರ, ಗೀತಾ ಪ್ರತ್ಯಕ್ಷ ಅನುಮಾನಗಳಲ್ಲಿ ಒಂದಾದರೂ ಆಧಾರವಾಗಿಲ್ಲ

೩ ಜಗತ್ತು ಜ್ಞಾನದಲ್ಲಿ ಕಲ್ಪಿತವು ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದಿರುವುದು ) ಎಂದು ವಿಜ್ಞಾನವಾದಿಗಳಾದ ಬೌದ್ಧರು ಹೇಳಿದಾಗ್ಗೆ ಅದಕ್ಕೆ ಶಂಕರಾಚಾರ್ಯ ಮೊದಲಾದ ಅದ್ವೈತಿಗಳು, ಜಗತ್ತು ಪ್ರಮಾಣಗಳಿಂದ ಉಪಲಬ್ಧವಾಗುವುದರಿಂದಲೂ, ಆ ಉಪಲಬ್ಧಿಗೆ ಯಾವ ಅವಸ್ಥೆಯಲ್ಲಿಯೂ (ಎಂದೂ) ಬಾಧೆ ಉಂಟಾಗುವುದಿಲ್ಲವಾದುದರಿಂದಲೂ ಜಗತ್ತು ಸತ್ಯವಾದುದೇ ಎಂದು ತಿಳಿಯಬೇಕೆಂದು ಹೇಳಿ ಪುನಃ ಅವರೇ ಜಗತ್ತು ಜ್ಞಾನದಲ್ಲಿ=ಬ್ರಹ್ಮನಲ್ಲಿ ಕಲ್ಪಿತ ( ಸುಳ್ಳು ) ವಾದುದು ಎಂದು ಹೇಳುವುದು ವ್ಯಾಹತವಾಗುತ್ತದೆ. ( ತಮ್ಮ ಮಾತನ್ನೇ ವಿರೋಧಿಸಿದಂತೆ ಆಗುತ್ತದೆ. )

೪ ಪ್ರಪಂಚವು ಪ್ರಮಾಣಗಳಿಂದ ಉಪಲಬ್ಧವಾಗುವದರಿಂದ, ಪ್ರಪಂಚವು ಇಲ್ಲವೆಂದು ಹೇಳುವುದು ಅಶಕ್ಯವಾದುದು ಈ ದೂಷಣ ಇಷ್ಟು ಸ್ಪಷ್ಟವಾಗಿರಲು ಸೂತ್ರಕಾರರು, ಜಗತ್ತನ್ನು ಸುಳ್ಳೆಂದು ನಿರೂಪಿಸುವ ಶೂನ್ಯ ವಾದಿಗಳಾದ ಬೌದ್ಧರನ್ನು ಖಂಡಿಸಿರುವದಿಲ್ಲ ಹೀಗೆಂದು ಅದ್ವೈತಿಗಳು ಪ್ರಪಂಚಾಭಾವವನ್ನು ಹೇಳುವ ಮತವು ಖಂಡನೆಗೆ ಕೂಡ ಯೋಗ್ಯವಾದುದಲ್ಲ ಎಂದು ತುಚ್ಛೀಕರಿಸಿ, ಪುನ ತಾವೇ ಸರ್ವ ಪ್ರಮಾಣಗಳಿಂದ ವಿರುದ್ಧವಾದ ಪ್ರಪಂಚಾಭಾವವನ್ನು ಸ್ವೀಕರಿಸಿದುದು ಅತ್ಯಂತ ಅಯುಕ್ತವೂ ಸ್ವವ್ಯಾಹತವೂ ಆಗಿದೆ

೫. ಅದ್ವೈತ ಮತಾನುಸಾರ ಜಗತ್ತಿನ ಭ್ರಮಕ್ಕೆ ಕಾರಣೀಭೂತವಾದ ಅಧಿಷ್ಠಾನ ಮತ್ತು ಆಶ್ರಯ ( ಭ್ರಾಂತ ಪುರುಷ ) ಇತ್ಯಾದಿಗಳು ಕೂಡದಿರುವದರಿಂದ ಜಗತ್ತಿನ ಭ್ರಮವೇ ಇಲ್ಲದಿರುವುದರಿಂದ ಜಗತ್ತು ಕಲ್ಪಿತ ( ಭ್ರಮದಿಂದ ತೋರುವುದು ) ಎಂಬುದು ಅಸಂಗತ.

೬ ಅಬಾಧಿತವಾದ ಸ್ವಾಪ್ನ ಪದಾರ್ಥಗಳೂ ಸತ್ಯವೇಯೆ

೭. ಪ್ರಮಾಣಗಳು ವ್ಯಾವಹಾರಿಕ ಸತ್ಯತ್ವನ್ನು ಹೇಳುತ್ತವೆ. ನಾವು ( ಬೌದ್ಧರು ) ಪ್ರಪಂಚದ ವಿಷಯದಲ್ಲಿ ಪಾರಮಾರ್ಥಿಕ ಸತ್ಯತ್ವವು ಇಲ್ಲವೆಂದು ಹೇಳುತ್ತೇವೆ. ಆದುದರಿಂದ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧಿಸುವವನಿಗೆ ಪ್ರಮಾಣದಿಂದ ವಿರೋಧವಲ್ಲ ಹೀಗೆಂದು ಬೌದ್ಧರು ಹೇಳಿರಲಾಗಿ ಆಯಾ ಪ್ರಮಾಣಗಳು ತಮಗೆ ವಿಷಯೀಭೂತವಾದ ಪ್ರಪಂಚದ ಪಾರಮಾರ್ಥಿಕ ಸತ್ಯತ್ವವನ್ನೇ

( ತಾತ್ವಿಕತ್ವ ) ವನ್ನೇ ಹೇಳುತ್ತವೆ, ವ್ಯಾವಹಾರಿಕ ಸತ್ಯತ್ವವನ್ನು ನಿರೂಪಿಸುವದಿಲ್ಲ ಆದುದರಿಂದ ಜಗತ್ತಿನಲ್ಲಿ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧಿಸುವ ನಿಮಗೆ ( ಬೌದ್ಧರಿಗೆ ) ಪ್ರಮಾಣಗಳಿಂದ ಬಾಧವು ತಪ್ಪುವುದುದಲ್ಲವೆಂದು ಅದ್ವೈತಿಗಳು ಖಂಡಿಸಿದ್ದಾರೆ ಹೀಗಿದ್ದರೂ ತಾವೂ ಬೌದ್ದರಂತೆ ಪ್ರಪಂಚಕ್ಕೆ ವ್ಯಾವಹಾರಿಕ ಸತ್ಯತ್ವವನ್ನು ಪ್ರಮಾಣಗಳು ಹೇಳುತ್ತವೆ, ನಾವು ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ನಿಷೇಧಿಸುವದಿಲ್ಲ. ಆದುದರಿಂದ ಪ್ರಮಾಣ ಬಾಧವು ನಮಗೆ ಬರುವುದಿಲ್ಲ ಎಂದು ಅದ್ವೈತಿಗಳು ಹೇಳುವದು ಸ್ವವ್ಯಾಘಾತವಾಗಿದೆ ಆದುದರಿಂದ ಬ್ರಾಹ್ಮಣಾದಿ ವರ್ಣಗಳೂ, ಬ್ರಹ್ಮಚರ್ಯಾದಿ ಆಶ್ರಮಗಳೂ, ಯಜ್ಞ, ದೇವತೆಗಳೂ, ವೇದಗಳೂ, ಸ್ನಾನ ಸಂಧ್ಯಾ ಗಂಗಾದಿ ತೀರ್ಥಗಳೂ ಸ್ವರ್ಗಾದಿ ಪರಲೋಕಗಳೂ ಇತ್ಯಾದಿ ಸಮಸ್ತ ದ್ವೈತ ಪ್ರಪಂಚವು ಪಾರಮಾರ್ಥಿಕ ಸತ್ಯವೆಂದೇ ಕೋರ್ಟು ತೀರ್ಮಾನಿಸುತ್ತದೆ

ಈ ಕೋರ್ಟಿನ ಶಾಸನವನ್ನು ಲ್ಲಂಘಿಸಿ ಬ್ರಾಹ್ಮಣಾದಿ ಸಮಸ್ತ ಜಗತ್ತು ಸುಳ್ಳೆಂದು ತಿಳಿದು, ಅದರಂತೆಯೇ ಉಪದೇಶ ಮಾಡಿ ಮನಸಿನಲ್ಲಿ ವಸ್ತುಗತ್ಯಾ ಬ್ರಾಹ್ಮಣ್ಯವು ಸುಳ್ಳಾದುದು ಯಜ್ಞ, ಗಂಗಾದಿ ತೀರ್ಥ, ವೇದ, ದೇವತೆಗಳು ಇತ್ಯಾದಿ ಸರ್ವವೂ ಸುಳ್ಳಾದುದು ಎಂದು ತಿಳಿದು ಯಾವ ಅದ್ವೈತಿಗಳು ಆಸ್ತಿಕ ಜನರನ್ನು ವಂಚಿಸುವುದಕ್ಕಾಗಿ ತಾವೂ ಆಸ್ತಿಕರಂತೆ ಸ್ನಾನ ಸಂಧ್ಯಾ ಯಜ್ಞ ಯಾಗಾದಿಗಳನ್ನು ಮಾಡಿದರೂ ಅವರು ಆ ಯಜ್ಞಯಾಗಾದಿಗಳ ಸರಿಯಾದ ಫಲವನ್ನು ಹೊಂದುವುದಿಲ್ಲ ಏಕೆಂದರೆ ಇಂತಹ ಜನರಿಗೆ ಈಶ್ವರಪ್ರಾಪ್ತಿ ಇಲ್ಲವೆಂದು ಅವರು ಪುನರಾವೃತ್ತಿ ರಹಿತವಾದ ಅಧೋಗತಿಯನ್ನು ಹೊಂದುತ್ತಾರೆಂದೂ ' ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯಧ ಮಾಂ ಗತಿಂ ' ಈ ಶ್ಲೋಕದಿಂದ ಗೀತೆಯು ಹೇಳುತ್ತದೆ ಆದುದರಿಂದ ಸಕಲ ಸಜ್ಜನರೂ ( ಸುಖರೂಪ ಮೋಕ್ಷವನ್ನು ಬಯಸುವ ಜನರು ) ಬ್ರಾಹ್ಮಣಾದಿ ವರ್ಣಗಳು ಸತ್ಯವೆಂದು ತಿಳಿದು ದೇವತೆಗಳ ಪ್ರೀತ್ಯರ್ಥವಾಗಿ, ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಸ್ನಾನ ಸಂಧ್ಯಾ ಯಜ್ಞಾದಿ ಕರ್ಮಗಳನ್ನು ಮಾಡಿ ಆಯಾ ದೇವತೆಗಳ ಪ್ರೀತಿ ದ್ವಾರಾ ಪರಮಾತ್ಮನ ಜ್ಞಾನವನ್ನು ಸಂಪಾದಿಸಿ ಐಹಿಕ ಮತ್ತು ಪಾರಮಾರ್ಥಿಕ ಫಲವನ್ನು ಹೊಂದಿ ಕೃತಾರ್ಥರಾಗಬೇಕು.

(ಸಹಿ) ಧರ್ಮರಾಜ ಹೆಚ್. ಬಿ.
ಚೀಫ್ ಜಡ್ಜ್,
ಹೈಕೋರ್ಟು ಸಂಯಮನೀಪುರಂ.

ತಾ ೨೮-೮-೧೯೨೮

ಶ್ರೀ

# ಸಂಯಮನೀಪುರದ ಹೈಕೋರ್ಟ್ of ಜೂಡಿಕೇಚರ್

## O. S. No. 564 of 1927.

**೨೮ ನೆಯ ಕಲಿಯುಗದ ಶಾಲಿವಾಹನ ಶಕ ೧೮೪೯.**

**ಚೀಫ್ ಜಸ್ಟಿಸ್ ಧರ್ಮರಾಜ ಎಚ್. ಬಿ ಇವರ ಸಮ್ಮುಖದಲ್ಲಿ ಜರುಗಿದ ವೇದಾಂತವಿಚಾರಣೆಯು**

**ಸಿವಿಲ್ ಸೂಟ್**

---

| | |
|---|---|
| ವಾದಿ—ಸತ್ಯಬೋಧಾಚಾರ್ಯ | ಪ್ರತಿವಾದಿ—ಗಂಗಾಧರಶಾಸ್ತ್ರಿ |
| ವಕೀಲ— | ವಕೀಲ— |
| ಮಾಧವದಾಸ P B D. | ಹರಿಹರಶರ್ಮ P B S. |

### ದಾವೆ

ವಾದಿಯು ಬರೆದುಕೊಂಡ ಅರ್ಜಿಯೇನಂದರೆ.—

೧ ವಾದಿಯು ವೈದಿಕ ಆಸ್ತಿಕ ಸಮಾಜದ ಪ್ರತಿನಿಧಿಯೆಂದು ಕೋರ್ಟಿನ ಅಪ್ಪಣೆಯನ್ನು ಪಡೆದು ಈ ದಾವೆಯನ್ನು ಹಾಕಿಕೊಂಡಿದ್ದಾನೆ

೨ ಕೋರ್ಟಿನ ಅಪ್ಪಣೆಯನ್ನು ಪಡೆದು ಈ ದಾವೆಯಲ್ಲಿ ಅದ್ವೈತ ಸಮಾಜದ ಪ್ರತಿನಿಧಿಯೆಂದು ಗಂಗಾಧರಶಾಸ್ತ್ರಿಗಳನ್ನು ಪ್ರತಿವಾದಿಯಾಗಿ ತೆಗೆದುಕೊಂಡಿದೆ.

೩ ವಾದಿಯು ಆಸ್ತಿಕವಾದ ವೈದಿಕ ಮತಕ್ಕೆ ಸಂಬಂಧಿಸಿದವನು

೪ ವೈದಿಕ ಮತದ ತತ್ವಗಳು —

(a) ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮಚರ್ಯಾದ್ಯಾಶ್ರಮಗಳು, ಯಜ್ಞಾದಿಕ್ರಿಯೆಗಳು, ದೇವತೆಗಳು, ವೇದಗಳು, ಗಂಗಾದಿ ತೀರ್ಥಗಳು, ಸ್ವರ್ಗಾದಿ ಪರಲೋಕಗಳು, ಈ ಲೋಕ ಇತ್ಯಾದಿ ಸಮಸ್ತ ಜಗತ್ತು ಸತ್ಯವಾದುದು.

(b) ವಿಷ್ಣುವು ( ಪರಬ್ರಹ್ಮನು ) ಸರ್ವೋತ್ತಮನು, ಸರ್ವಜ್ಞನು, ಸರ್ವಕರ್ತನು, ಅನಂತಕಲ್ಯಾಣಗುಣಗಳಿಂದ ಪರಿಪೂರ್ಣನು.

(c) ಪರಬ್ರಹ್ಮನು ಜೀವನಿಂದ ಭಿನ್ನನು.

(d) ಪರಬ್ರಹ್ಮನು ಸರ್ವೋತ್ತಮನು, ಸರ್ವಕರ್ತನು, ಜೀವನಿಂದ ಭಿನ್ನನು ಎಂಬ ಜ್ಞಾನವೇ ಮೋಕ್ಷ ಸಾಧನವು.

೨೪ ಈ ತತ್ವಗಳು ವೇದ, ವೇದಾರ್ಥ ನಿರ್ಣಾಯಕಗಳಾದ ಬ್ರಹ್ಮಸೂತ್ರ, ಶ್ರೀಮದ್ಭಗವದ್ಗೀತೆ ಇವುಗಳಲ್ಲಿ ಹೇಳಿದೆಯಾದುದರಿಂದ ಸಮಸ್ತರಾದ ವೈದಿಕ ಜನರು ಈ ತತ್ವಗಳನ್ನು ಅಂಗೀಕಾರ ಮಾಡುವ ವಿಷಯದಲ್ಲಿ ಬದ್ಧರಾಗಿದ್ದಾರೆ.

೬ ಈ ವೈದಿಕ ಮತವು ಅನಾದಿ ಕಾಲದಿಂದ ನಡೆದು ಬಂದಿದೆ.

೭ ತತ್ವಗಳ ವಸ್ತುಸ್ಥಿತಿ ಹೀಗಿದ್ದರೂ, ಗೌಡಪಾದಾಚಾರ್ಯರೂ ಅವರ ಪರಮಶಿಷ್ಯರಾದ ಶಂಕರಾಚಾರ್ಯರೂ ವೇದ, ಬ್ರಹ್ಮಸೂತ್ರ, ಗೀತಾ ಇವುಗಳಿಗೆ ಬೇರೆ ಅರ್ಥವನ್ನು ಕಲ್ಪಿಸಿ ವಿಜ್ಞಾನವಾದಿಯಾದ ಬೌದ್ಧ ಮತಕ್ಕೆ ಮತ್ತು ಶೂನ್ಯವಾದಿಯಾದ ಬೌದ್ಧಮತಕ್ಕೆ ವೈದಿಕ ಮತದ ವೇಷವನ್ನು ಕೊಟ್ಟು ವೈದಿಕ ಮತದಹಾಗೆ ಭಾಸವಾಗುವಂತೆ ಮಾಡಿ ಜನರನ್ನು ಮಂಕುಗೊಳಿಸಿ ವೈದಿಕ ತತ್ವಗಳಿಗೆ ವಿರುದ್ಧವಾದ ತತ್ವಗಳನ್ನು ಉಪದೇಶಿಸಿದರು.

ಹೀಗೆ ಮಾಡಿದುದು ಪ್ರಾಚೀನ ಶಿಕ್ಷಾನಿಯಮದ ಪ್ರಕಾರವಾಗಿ ಭಗವದ್ಗೀತಾ ಸೆಕ್ಷನ್ (ಅಧ್ಯಾಯ)೧೬ ರಲ್ಲಿ ಹೇಳಿದ ಶಿಕ್ಷೆಗೆ ತಕ್ಕ ಅಪರಾಧವಾಗುತ್ತದೆ

೮ ಅದ್ವೈತ ಮತದ ಪ್ರತಿವಾದಿಯು ಹೀಗೆ ಉಪದೇಶಿಸುತ್ತಾನೆ:—

( a ) ವಿಷ್ಣು ( ಪರಬ್ರಹ್ಮನು ) ಸರ್ವೋತ್ತಮನಲ್ಲ, ಸರ್ವಜ್ಞನಲ್ಲ, ಸರ್ವಕರ್ತನಲ್ಲ, ಅನಂತಗುಣಪರಿಪೂರ್ಣನೂ ಅಲ್ಲ. ಅವನು ಎಲ್ಲ ಧರ್ಮಗಳಿಂದ ರಹಿತನು

( b ) ಮೇಲೆ ೪ (a) ವಿಭಾಗದಲ್ಲಿ ಹೇಳಿದ ಬ್ರಹ್ಮಾದಿ ಎಲ್ಲ ಜಗತ್ತು ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದುದು )

( c ) ಪರಬ್ರಹ್ಮನು ಸುಜೀವನಿಂದ ಭಿನ್ನನಲ್ಲ.

( d ) ಪರಮಾತ್ಮನು ಜೀವನಿಂದ ಭಿನ್ನನು, ಸರ್ವೋತ್ತಮನು ಎಂಬೀ ಜ್ಞಾನವು ಮೋಕ್ಷಕ್ಕೆ ಸಾಧನವಲ್ಲ. "ಅಹಂ ಬ್ರಹ್ಮಾಸ್ಮಿ" ( ನಾನೇ ಬ್ರಹ್ಮನು ) ಎಂಬ ಜ್ಞಾನವೇ ಮೋಕ್ಷಸಾಧನವು

೯ ವೇದ, ಸೂತ್ರ, ಗೀತಾ ಇವುಗಳಲ್ಲಿ ಉಕ್ತವಾದ ತತ್ವಗಳನ್ನು ವಿರುದ್ಧ ರೀತಿಯಿಂದ ತಿಳಿದುಕೊಂಡು "ನಷ್ಟಾತ್ಮಾನೋಽಲ್ಪಬುದ್ಧಯಃ । ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥" ( ಗೀತಾ ಅಧ್ಯಾಯ ೧೬ ಶ್ಲೋಕ ೯ ) ಇದರಲ್ಲಿ ಹೇಳಿದಂತೆ ಕೇವಲ ತಾವಷ್ಟೇ ಅಧೋಗತಿಗೆ ಇಳಿಯುವುದಲ್ಲದೆ ಬೇರೆ ಸಜ್ಜನರನ್ನೂ ಕೂಡ ಆಸ್ತಿಕ ಮತದಿಂದ ಬಿಡಿಸಿ ಅವೈದಿಕವಾದ ಅದ್ವೈತ ಮತವನ್ನು ಆಶ್ರಯಿಸಿಸುವಂತೆ ಮಾಡಿ ಅಧೋಗತಿಯನ್ನು ಹೊಂದಿಸುವವರಾಗಿದ್ದಾರೆ.

ಆದುದರಿಂದ ಕೋರ್ಟಿನವರು ಸಜ್ಜನರ ಕ್ಷೇಮಕ್ಕಾಗಿ ಕೆಳಗೆ ಆರಿಕೆ ಮಾಡಿಕೊಂಡಂತೆ ತೀರ್ಮಾನಿಸಬೇಕೆಂದು ಪ್ರಾರ್ಥನೆ.

(೧) ಪರಬ್ರಹ್ಮನು ಜೀವನಿಂದ ಭಿನ್ನನೂ, ಸರ್ವೋತ್ತಮನೂ ಆಗಿದ್ದಾನೆ.

(೨) ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ವೇದ, ಯಜ್ಞ, ದೇವತಾ, ಗಂಗಾದಿತೀರ್ಥಗಳು ಇತ್ಯಾದಿ ಜಗತ್ತು ಸತ್ಯವಾದುದು; ಮಿಥ್ಯಾ ಅಲ್ಲದುದು. ಇವೇ ವೈದಿಕ ಮತದ ತತ್ವಗಳು.

(೩) ಪ್ರತಿವಾದಿಯು ಹೇಳಿದ "ಬ್ರಹ್ಮನು ನಿರ್ಗುಣನು; ಅವನು ಜೀವನಿಂದ ಅಭಿನ್ನನು, ಬ್ರಾಹ್ಮಣವರ್ಣಾದಿ ಜಗತ್ತು ಸುಳ್ಳು (ಮಿಥ್ಯಾ) ಎಂಬಿವುಗಳು ವೈದಿಕ ಮತದ ತತ್ವಗಳಲ್ಲ.

(೪) ವೇದ, ಬ್ರಹ್ಮಸೂತ್ರ, ಗೀತಾ ಇವುಗಳಿಗೆ ವಿರುದ್ಧವಾದ ಅರ್ಥವನ್ನು ಕಲ್ಪಿಸಿ, ಜಗತ್ತು ಮಿಥ್ಯೆಯಾದುದು, ಬ್ರಹ್ಮನು ನಿರ್ಗುಣನು ಈ ಮೊದಲಾದ ಪ್ರತಿವಾದಿಯ ಉಪದೇಶವು ಶಾಸ್ತ್ರಗಳಿಗೆ ವಿರುದ್ಧವಾದುದೆಂದು ತೀರ್ಮಾನವನ್ನು ಕೊಡಿಸಬೇಕು.

(೫) ಮತ್ತೂ ಕೋರ್ಟಿನವರಿಗೆ ಯಾವ ಯಾವುದು ಯುಕ್ತವೆಂದು ಕಂಡು ಬರುವುದೋ ಆದೆಲ್ಲವನ್ನೂ ತೀರ್ಮಾನಿಸಬೇಕು

೧೦ ಕೋರ್ಟಿನವರು ಈ ಪ್ರಕಾರ ಮಾಡದಿದ್ದರೆ ಜನರು ಬಹಳ ಕಷ್ಟಭಾಗಿಗಳಾಗುತ್ತಾರೆ.

ತಾ|| ೨೫-೩-೧೯೩೭ (ರುಜು) ಸತ್ಯಬೋಧಾಚಾರ್ಯ.

ಮೇಲೆ ೧೦ ವಿಭಾಗಗಳಲ್ಲಿ ಹೇಳಿದ ವಿಷಯವು ನಿಜವಾದುದೆಂದು ನನ್ನ ಸ್ವಂತಬುದ್ಧಿಯಿಂದಲೂ, ನಮ್ಮ ಗುರುಗಳ ಉಪದೇಶದಿಂದಲೂ ನಾನು ಹೇಳುತ್ತೇನೆ.

(ರುಜು) ಸತ್ಯಬೋಧಾಚಾರ್ಯ

Madhava Rao P. B. D.

*Adv. for Plaintiff.*

---

# ಸಂಯಮನೀಪುರದ ಹೈಕೋರ್ಟ್

## O. S No 564.

## ಪ್ರತಿವಾದಿಯ ಸ್ಟೇಟಮೆಂಟ ( ಹೇಳಿಕೆ )

| ವಾದಿ. | | ಪ್ರತಿವಾದಿ |
|---|---|---|
| ಸತ್ಯಬೋಧಾಚಾರ್ಯ | } | ಗಂಗಾಧರಶಾಸ್ತ್ರಿ |

ಪ್ರತಿವಾದಿಯು ಬರೆದು ಕೊಟ್ಟ ಸ್ಟೇಟಮೆಂಟ

೧ ವಾದಿಯು ಹಾಕಿಕೊಂಡ ಅರ್ಜಿಯಲ್ಲಿ ಹೇಳಿದ ಎಲ್ಲ ವಿಷಯಗಳು ಸುಳ್ಳು

೨ ವಾದಿಯ ಅರ್ಜಿಯ ನಾಲ್ಕನೆಯ ವಿಭಾಗದಲ್ಲಿ ಹೇಳಿದ ತತ್ವಗಳು, ವೇದ, ಸೂತ್ರ, ಗೀತಾ ಇವುಗಳಲ್ಲಿ ಹೇಳಿವೆ ಆದರೂ ವೇದ, ಬ್ರಹ್ಮಸೂತ್ರ, ಗೀತಾ ಇವುಗಳಿಗೆ ಈ ತತ್ವಗಳು ಸತ್ಯವಾದುದೆಂದು ತಿಳಿಸಿಕೊಡುವ ವಿಷಯದಲ್ಲಿ ತಾತ್ಪರ್ಯವಿಲ್ಲವಾದುದರಿಂದ ಈ ತತ್ವಗಳು ವೈದಿಕವಲ್ಲ.

೩ ವಾದಿಯ ಮತವು ಅನಾದಿಕಾಲದಿಂದ ಬಂದುದಲ್ಲ

೪ ವಾದಿಯು ನಾಲ್ಕನೆಯ ವಿಭಾಗದಲ್ಲಿ ಹೇಳಿದ ವಿಷಯವು ತುಂಬಾ ಸುಳ್ಳು

(a) ನಮ್ಮ ಅದ್ವೈತ ಮತವೇ ವೈದಿಕವಾದುದು.

(b) ಅದ್ವೈತ ಮತವು ಬೌದ್ಧಮತವೆಂದು ಹೇಳುವುದು ಅಯುಕ್ತವು.

(c) ನನ್ನಿಂದ ಹೇಳಲ್ಪಡುವದೇ ವೇದಾರ್ಥವು.

೫ ಅದ್ವೈತ ಮತದ ತತ್ವಗಳು:—

(a) ಬ್ರಹ್ಮಾತಿರಿಕ್ತವಾದ ಬ್ರಾಹ್ಮಣಾದಿವರ್ಣ, ದೇವತಾ, ಸಂಧ್ಯಾವಂದನಾದಿ ಕರ್ಮ ಇತ್ಯಾದಿ ಜಗತ್ತು ಸ್ವಪ್ನದ ಹಾಗೆ ಸುಳ್ಳಾದುದು.

(b) ಪರಬ್ರಹ್ಮನು ನಿರ್ಗುಣನು ( ಸಕಲ ಧರ್ಮರಹಿತನು )

(c) ಜೀವ ಬ್ರಹ್ಮರು ಒಂದೇಯೇ

(d) 'ಅಹಂ ಬ್ರಹ್ಮಾಸ್ಮಿ' ( ನಾನೇ ಬ್ರಹ್ಮ ) ಎಂಬ ಜ್ಞಾನವು ಮೋಕ್ಷಸಾಧನವು.

೬ ಈ ವಿಷಯವು ಪೂರ್ವದಲ್ಲಿಯೇ ತೀರ್ಮಾನವಾಗಿರುವುದರಿಂದ ಪುನಃ ವಿಚಾರಣೆ ಮಾಡುವ ಅಧಿಕಾರವು ಕೋರ್ಟಿನವರಿಗೆ ಇಲ್ಲ ( Resjudicata ).

೭ ವಾದಿಯು ೯ ನೆಯ ವಿಭಾಗದಲ್ಲಿ ಹೇಳಿದ ವಿಷಯವು ಸುಳ್ಳಾದುದು.

೮ ನಮ್ಮ ಅದ್ವೈತ ಮತದ ಆಶ್ರಯದಿಂದ ನಾವು ನಷ್ಟವಾಗಿಲ್ಲ. ಈ ಮತವನ್ನು ಅನುಸರಿಸುವುದರಿಂದ ಬೇರೆಯವರಾದರೂ ನಾಶವನ್ನು ಹೊಂದಿಲ್ಲ.

ಈ ಕಾರಣಗಳಿಂದ ಕೋರ್ಟಿನವರು ವಾದಿಗೆ ಯಾವ ಬಗೆಯಾಗಿಯೂ ತೀರ್ಮಾನವನ್ನು ಕೊಡದೆ ಅವನ ಅರ್ಜಿಯನ್ನು ತೆಗೆದು ಹಾಕಬೇಕೆಂದು ಪ್ರಾರ್ಥನೆ.

ತಾ|| ೩೦-೩-೧೯೨೭ (ರುಜು) ಗಂಗಾಧರಶಾಸ್ತ್ರಿ

ಈ ವಿಷಯವನ್ನು ನನ್ನ ಸ್ವಂತ ಬುದ್ಧಿಯಿಂದಲೂ, ನಮ್ಮ ಗುರುಗಳ ಉಪದೇಶದಿಂದಲೂ ನಾನು ನಿಜವೆಂದು ಹೇಳುತ್ತೇನೆ.

(ರುಜು) ಗಂಗಾಧರಶಾಸ್ತ್ರಿ.

ವಕೀಲ—ಹರಿಹರಶರ್ಮ P. B S.

## ವಾದಗ್ರಸ್ತ ವಿಷಯ (ಇಸ್ಯೂ) ಗಳು=Issues.

೧ ರೇಸಜ್ಯೂಡಿಕೇಟ (Resjudicata) ಹೌದೇ ಅಲ್ಲವೆ? ಎಂದರೆ ಈ ವಿಷಯದ ನಿರ್ಣಯವು ಪೂರ್ವದಲ್ಲಿ ಆಗಿರುವುದರಿಂದ ಪುನಃ ಇದರ ವಿಚಾರಣೆ ಮಾಡುವ ಅಧಿಕಾರವು ಕೋರ್ಟಿನವರಿಗೆ ಉಂಟೇ ಇಲ್ಲವೆ?

೨ (a) ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಮುಂತಾದ ಸರ್ವ ಜಗತ್ತು ಸತ್ಯವಾದುದೇ ಅಥವಾ ಸುಳ್ಳಾದುದೇ?

(b) ಸ್ವಪ್ನವು ಸತ್ಯವೇ, ಮಿಥ್ಯೆಯೆ?

೩ ಪರಬ್ರಹ್ಮನು ಸರ್ವಜ್ಞನು, ಸರ್ವಶಕ್ತನು, ಜಗತ್ಕರ್ತನು ಮತ್ತು ಸಮಸ್ತ ಕಲ್ಯಾಣಗುಣಗಳಿಂದ ಪರಿಪೂರ್ಣನು ಹೌದೆ ಅಲ್ಲವೆ?

೪ ಪರಬ್ರಹ್ಮನು ಜೀವನಿಂದ ಭಿನ್ನನೇ ಅಭಿನ್ನನೆ?

೫ (a) ಅದ್ವೈತ ಮತವು ಬೌದ್ಧಮತದಿಂದ ಭಿನ್ನವಾದುದೇ ಅಲ್ಲವೆ.?

(b) ಅದ್ವೈತ ಮತವು ವೈದಿಕವಾದುದೇ, ಅಲ್ಲವೆ?

---

## ರೇಸ್‌ಜ್ಯೂಡಿಕೇಟಿನ ವಿಚಾರಣೆ.

ತಾ|| ೩-೪-೧೯೨೭.

ಪ್ರತಿವಾದಿಯ ವಕೀಲ—ಪೂರ್ವದಲ್ಲಿಯೇ ಈ ವಿಷಯದಲ್ಲಿ ತೀರ್ಮಾನವಾಗಿದ್ದುದರಿಂದ ಪುನಃ ಈ ವಿಷಯವಾಗಿ ವಿಚಾರಣೆ ನಡಿಸುವ ಆವಶ್ಯಕತೆಯಿಲ್ಲ.

ವಾದಿಯ ವಕಿಲ—ಪ್ರತಿಯೊಬ್ಬ ಬ್ರಾಹ್ಮಣನು ನಿತ್ಯದಲ್ಲಿ ಸಂಧ್ಯಾವಂದನಾದಿ ಕರ್ಮಗಳನ್ನು ಹೇಗೆ ಮಾಡಬೇಕಾದುದೋ ಹಾಗೆಯೇ ಪ್ರತಿಯೊಬ್ಬ ಮನುಷ್ಯನು ಪ್ರತಿದಿವಸವೂ ದಾವೆಯಲ್ಲಿ ನಮೂದಿಸಿರುವ ದ್ವೈತಾದ್ವೈತವೇ ಮುಂತಾದ ವಿಚಾರ ಮಾಡಬೇಕು ಎಂದು "ಆತ್ಮಾವಾರೇ ದ್ರಷ್ಟವ್ಯ· ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ" "ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ"

" ತಮೇವಂ ವಿದ್ವಾನ ಮೃತ ಇಹ ಭವತಿ " ಇತ್ಯಾದಿ ಶ್ರುತಿಗಳು ಉಪದೇಶಿಸುತ್ತಿರುವುದರಿಂದ ಈ ತತ್ವಗಳ† ವಿಚಾರ ಮಾಡುವುದು ಪ್ರತಿಯೊಬ್ಬ ಮನುಷ್ಯನ ಕರ್ತವ್ಯ ವಾಗಿದೆ

ಈ ಶ್ರುತಿಗಳನ್ನನುಸರಿಸಿಯೇ ದ್ವೈತಾದ್ವೈತ ಮತಸ್ಥರಾದ ಶಂಕರಾಚಾರ್ಯ, ರಾಮಾನುಜಾಚಾರ್ಯ, ಮಧ್ವಾಚಾರ್ಯ, ದೇಶಿಕಾಚಾರ್ಯ, ವಿದ್ಯಾರಣ್ಯ, ಅಕ್ಷೋಭ್ಯತೀರ್ಥರು, ಜಯತೀರ್ಥ, ವ್ಯಾಸರಾಯ, ಮಧುಸೂದನಸರಸ್ವತಿ, ಅಪ್ಪಯ್ಯ ದೀಕ್ಷಿತ, ವಿಜಯೀಂದ್ರತೀರ್ಥ, ಸತ್ಯನಾಥತೀರ್ಥ ಪ್ರಭೃತಿಗಳಾದ ನಮ್ಮ ಪೂರ್ವಜರು ದ್ವೈತಾದ್ವೈತ ಮತದ ವಿಚಾರವನ್ನು ಪ್ರತಿವೊಬ್ಬರೂ ಪ್ರತಿನಿತ್ಯವು ಮಾಡಿದ್ದಾರೆ ಅದುದರಿಂದ ಪ್ರತ್ಯೇಕ ಮನುಷ್ಯನು ಪ್ರತಿನಿತ್ಯವೂ ಇದರ ವಿಚಾರವನ್ನು ನಡಿಸುವದು ಅವಶ್ಯಕವು. ಮಾಡದಿದ್ದರೆ ದೋಷವು ಈ ಕಾರಣದಿಂದ ಈ ವ್ಯಾಜ್ಯವು ರೇಸ್ ಜ್ಯೂಡಿಕೇಟವಲ್ಲ

---

## ಕೋರ್ಟಿನ ಆರ್ಡರ

ಕೋರ್ಟು ರೇಸ್‌ಜ್ಯೂಡಿಕೇಟ ವಿಷಯವಾಗಿ ಪ್ರಿಲಿಮಿನರಿ ವಿಚಾರಣೆ ಮಾಡಿ ವಾದಿ ಹೇಳಿದ ಮೇರೆಗೆ ತತ್ವ ವಿಚಾರ ಮಾಡುವುದು ಪ್ರತಿಯೊಬ್ಬ ಮನುಷ್ಯನಿಗೆ ಆವಶ್ಯಕವಾದುದು ಎಂಬುದು, ಇಬ್ಬರೂ ಪ್ರಮಾಣವೆಂದು ಅಂಗೀಕರಿಸಿದ ಶ್ರುತಿವಚನಗಳಿಂದಲೂ, ದ್ವೈತಾದ್ವೈತ ಮತದ ಆಚಾರ್ಯರ ಪರಂಪರಾಚಾರದಿಂದಲೂ, ಸಿದ್ಧವಾಗುವುದರಿಂದ ಈ ವಿಚಾರವು ರೆಸ್ ಜ್ಯೂಡಿಕೇಟ ( ಕೋರ್ಟಿನವರು ಪುನ ವಿಚಾರ ಮಾಡುವುದಕ್ಕೆ ಅಯೋಗ್ಯವಾದುದು ) ಅಲ್ಲೆಂದು ಠರಾಯಿಸುತ್ತದೆ

ಮತ್ತು ವಿಚಾರ ಮಾಡಬೇಕಾದ ಇಶ್ಯು ( Issues ) ಗಳು=ವಿಷಯಗಳು ಅಧಿಕವಾಗಿಯೂ ಮುಖ್ಯವಾಗಿಯೂ ಇರುವುದರಿಂದ ವಾದಿ ಪ್ರತಿವಾದಿಗಳ ಸೌಕರ್ಯಾರ್ಥವಾಗಿ ಒಂದೊಂದೇ ವಿಷಯುವನ್ನು ಕುರಿತು ವಿಚಾರ ನಡಿಸಿ ಆ ವಿಷಯವಾಗಿ ( ಇಶ್ಯುವನ್ನು ) ತೀರ್ಮಾನಿಸಬೇಕೆಂದು ನಿರ್ಣಯಿಸಿದೆ ಮೊದಲು ಜಗತ್ತು ಸತ್ಯವೇ, ಮಿಥ್ಯೆಯೇ ಎಂಬ ವಿಷಯದಲ್ಲಿ ವಿಚಾರ ಮಾಡಬೇಕೆಂದು ನಿರ್ಣಯವಾಗಿದೆ.

( Sd. ) Dharma Raj H. B.
Chief Judge High Court
Samyamanipur.

† ತತ್ವವಿಚಾರವೆಂದರೆ ದ್ವೈತಾದ್ವೈತ ಪಕ್ಷಗಳಲ್ಲಿ ಗುಣದೋಷಗಳನ್ನು ಚೆನ್ನಾಗಿ ಪರಿಶೀಲಿಸಿ, ದೋಷಯುಕ್ತವಾದ ಪಕ್ಷವನ್ನು ಅಯುಕ್ತವೆಂದು ತಿಳಿದ ನಿರ್ದುಷ್ಟವಾದ ಪಕ್ಷವನ್ನು ಸಿದ್ಧಾಂತವೆಂದು ತಿಳಿಯುವದು.

# ಸಂಯಮನೀಪುರದ ಹೈಕೋರ್ಟ್.

## O S. No 564 of 1927.

**ವಾದಿ — ಸತ್ಯಬೋಧಾಚಾರ್ಯ** ಪ್ರತಿವಾದಿ ಗಂಗಾಧರಶಾಸ್ತ್ರಿ

**ವಾದಿಯ ವಿಚಾರಣೆ.**

---

೨೦-೪-೧೯೨೭

ಕೋರ್ಟ—ನಿಮ್ಮ ಹೆಸರೇನು ?

ವಾದಿ— **ಸತ್ಯಬೋಧಾಚಾರ್ಯ**

ಕೋರ್ಟ—ದೇವರ ಆಣೆಯನ್ನು ತೆಗೆದುಕೊಂಡು ನಾನು ಕೋರ್ಟಿನ ಸಮ್ಮುಖದಲ್ಲಿ ಎಲ್ಲ ಸತ್ಯವನ್ನು ಹೇಳುತ್ತೇನೆಂದು ಹೇಳಿ

ವಾದಿ— ದೇವರ ಆಣೆಯನ್ನು ತೆಗದುಕೊಂಡು ನಾನು ಕೋರ್ಟಿನ ಸಮ್ಮುಖದಲ್ಲಿ ಎಲ್ಲ ಸತ್ಯವನ್ನು ಹೇಳುತ್ತೇನೆ

ವಾದಿಯ ವಕೀಲ—ಈ ದಾವೆ ಮಾಡುವವರು ನೀವೆ ಅಷ್ಟೆ ?

ವಾದಿ— ಹೌದು ನಾವೇ !

ವಾ. ವ — ದಾವೆ ಏನು ?

ವಾದಿ— ಪ್ರತಿವಾದಿಯು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಾದ ಬ್ರಾಹ್ಮಣವರ್ಣಾದಿ ಜಗತ್ತನ್ನು ಸುಳ್ಳಾದುದು ಎಂದು ಹೇಳಿ ಸಜ್ಜನರನ್ನು ಭ್ರಾಂತರನ್ನಾಗಿ ಮಾಡಿ ತನ್ನ ಜೊತೆಗೆ ತಮಸ್ಸಿಗೆ (ನಿತ್ಯ ನರಕಕ್ಕೆ) ಕರೆದುಕೊಂಡು ಹೋಗುತ್ತಾನೆ. ಆದುದರಿಂದ ಹೀಗೆ ಮಾಡಬಾರದೆಂದು ಅಪ್ಪಣೆಯಾಗಬೇಕೆಂದು ದಾವೆ ಇದೆ

ವಾ. ವ.—ನೀವು ಹೆಳುವುದೇನು ?

ವಾದಿ— ಬ್ರಾಹ್ಮಣಾದಿ ಸರ್ವ ಜಗತ್ತು ಸತ್ಯವಾದುದು ಸುಳ್ಳಲ್ಲ ಎಂದು ನಾವು ಹೇಳುತ್ತೇವೆ.

ವಾ. ವ.—ನೀವು ಹೀಗೆ ಹೇಳುವುದಕ್ಕೆ ಆಧಾರವೇನು ?

ವಾದಿ—ಪ್ರತ್ಯಕ್ಷ, ಅನುಮಾನ, ಶ್ರುತಿ, ಸೂತ್ರ, ಗೀತಾ ರೂಪವಾದ ಪ್ರಸ್ಥಾನ ತ್ರಯ ಈ ಎಲ್ಲ ಪ್ರಮಾಣಗಳು ಆಧಾರವಾಗಿವೆ.

ವಾ, ವ.— ಶ್ರುತಿಯನ್ನು ಹೇಳಿ.

ವಾದಿ.— ವಿಶ್ವಂ ಸತ್ಯಂ ಮಘವಾನಾಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ ( ಋ. ೨-೭-೪ ೧೨ )

ವಾ. ವ ಈ ಶ್ರುತಿಯ ಅರ್ಥವೇನು ?

ವಾದಿ—ಎಲೈ ಯಶಸ್ವಿಯಾದ ಇಂದ್ರ ಬೃಹಸ್ಪತ್ಯಂತರ್ಗತ ಭಗವದ್ರೂಪವೆ! ನೀನು ಉತ್ಪನ್ನ ಮಾಡಿದ ' ವಿಶ್ವಂ ' = ಜಗತ್ತು ' ಸತ್ಯಂ ಇತ್ ' = ಸತ್ಯವೇ ಆದುದು, ಮಿಥ್ಯಾ ( ಆರೋಪಿತವು ) ಅಲ್ಲ, 'ಅಪಃ ಚನ'=ಜಲಾಭಿಮಾನಿಯಾದ ದೇವತೆಗಳೂ ನಿನ್ನ ' ವ್ರತಂ ' ಜಗತ್‌ಸೃಷ್ಟ್ಯಾದಿ ವ್ಯಾಪಾರವನ್ನು ಸತ್ಯವಾದುದೆಂದು ಅರಿತಿದ್ದಾರೆ ಎಂದು ಅರ್ಥವು

ವಾ ವ —ಇದರಿಂದ ಏನು ಸಿದ್ಧವಾಗುತ್ತದೆ.

ವಾ.—ಈ ಶ್ರುತಿಯಿಂದ ಈಶ್ವರನು ನಿರ್ಮಿಸಿದ ಎಲ್ಲ ಜಗತ್ತು ಸತ್ಯವೆಂದು ಸುಳ್ಳು (ಆರೋಪಿತ ) ಅಲ್ಲ ಎಂದು ಸಿದ್ಧ ವಾಗುತ್ತದೆ ಹಾಗೆಯೇ ಇಲ್ಲಿ ಹೇಳಿದ ಕರ್ಮಾಭಿಮಾನಿಗಳಾದ ದೇವತೆಗಳ ಪ್ರತ್ಯಕ್ಷದಿಂದಲೂ ಜಗತ್ತಿನ ಸತ್ಯತ್ವವು ಸಿದ್ಧವಾಗುತ್ತದೆ

ವಾ ವ —ಈ ವಾಕ್ಯದ ಮೇಲಿಂದ ಜಗತ್ ಸತ್ಯತ್ವ ವಿಷಯದಲ್ಲಿ ದೇವತೆಗಳ ಪ್ರತ್ಯಕ್ಷವು ಪ್ರಮಾಣವೆಂಬುದು ಹೇಗೆ ಸಿದ್ಧಿಸುತ್ತದೆ?

ವಾ.—"ಅಪಶ್ಚನ ಪ್ರಮಿನಂತಿ ವ್ರತಂ ವಾಂ" ಈ ವಾಕ್ಯದಿಂದ ಸಿದ್ಧಿಸುತ್ತದೆ.

ವ —ಅದು ಹೇಗೆ ?

ವಾ —ದೇವತೆಗಳು ನಿನ್ನ ಸೃಷ್ಟ್ಯಾದಿ ವ್ಯಾಪಾರಗಳನ್ನು ' ಪ್ರಮಿನಂತಿ ' ಸತ್ಯವೆಂದು ತಿಳಿಯುತ್ತಾರೆ ಎಂದು ಹೇಳಿರುವುದರಿಂದ ಪರಮಾತ್ಮನ ವಿಶ್ವಕರ್ತೃತ್ವಾದಿ ವ್ಯಾಪಾರವು ಸತ್ಯವೆಂಬುದು ದೇವತೆಗಳ ಪ್ರತ್ಯಕ್ಷದಿಂದ ಸಿದ್ಧವಾಗುತ್ತದೆ,

ವಾ. ವ —ಈ ವಿಷಯದಲ್ಲಿ ಮತ್ತೇನಾದರೂ ಆಧಾರವುಂಟೆ ?

ವಾ —ಅನೇಕ ಶ್ರುತಿ ಸ್ಮೃತಿಗಳು ಇವೆ.

ವಾ ವ —ಯಾವ ಶ್ರುತಿಗಳು ?

ವಾ.—೧ ' ತದೇತತ್ ಸತ್ಯಂ ' ( ಮುಂ೧-೨-೧ )' ೨ ' ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ (ಈಶಾ ೮) ೩. ಯಚ್ಚಿಕೇತ ಸತ್ಯಮಿತ್ ತನ್ನ ಮೋಘಂ (ಋಗ್ವೇದ ೮-೧-೧೩) ಇತ್ಯಾದಿ ಅನೇಕವುಂಟು

ವಾ ವ.—ಇವುಗಳಿಂದೇನು ಸಿದ್ಧವಾಗುತ್ತದೆ ?

ವಾ.—(೧) ತತ್ ಏತತ್=ಪೂರ್ವದಲ್ಲಿ ಹೇಳಿದ ಈ ಕರ್ಮಾದಿಗಳು 'ಸತ್ಯಂ' ಸತ್ಯವಾದುವುಗಳು.

(೨) ಪರಮಾತ್ಮನು 'ಯಾಥಾತಥ್ಯತಃ ಅರ್ಥಾನ್'=ಸತ್ಯವಾದ ಮಹದಾದಿ ಪದಾರ್ಥಗಳನ್ನು, ' ವ್ಯದಧಾತ್ '=ನಿರ್ಮಾಣ ಮಾಡುತ್ತ ಹೋದನು.

( ೩ ) ಪರಮಾತ್ಮನು ಯಾವ ಜಗತ್ತನ್ನು ನಿರ್ಮಿಸಿದನೋ ಅದು ಸತ್ಯವೇ ಆದುದು ಸುಳ್ಳಾದುದಲ್ಲ

ಹೀಗೆಂದು ಹೇಳಿದ್ದದರಿಂದ ಜಗತ್ತು ಸತ್ಯವಾದುದು, ಸುಳ್ಳಲ್ಲ ಎಂದು ಸಿದ್ಧವಾಗುತ್ತದೆ.

ವಾ. ವ.—ಸ್ಮೃತಿಯನ್ನು ಹೇಳಿ

ವಾ —' ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ' ( ಗೀತಾ ೧೬-೮ )

ವ —ನಿಮ್ಮ ಬುದ್ಧಿ ಸರಿಯಾಗಿದೆಯೋ ?

ವಾ—ಬುದ್ಧಿ ಸರಿಯಾಗಿಯೆ ಇದೆ

ವ —ಬುದ್ಧಿ ಸರಿಯಾಗಿದ್ದರೆ ( ನೀವು ಎಚ್ಚರಿಕೆಯಿಂದ ಮಾತಾಡುತ್ತಿದ್ದರೆ ) ಜಗತ್ತು ಸುಳ್ಳು ಎಂಬ ವಿಷಯದಲ್ಲಿ ಅನುಕೂಲವಾದ ಪ್ರಮಾಣವನ್ನೇಕೆ ಉದಾಹರಿಸಿದಿರಿ ?

ವಾ.—ಈ ವಾಕ್ಯಕ್ಕೆ ಪೂರ್ವೋತ್ತರದಲ್ಲಿರುವ ವಾಕ್ಯಗಳನ್ನು ನೋಡಿದರೆ ಈ ವಾಕ್ಯವು ಜಗತ್ತು ಸುಳ್ಳು ಎಂದು ಹೇಳುವ ವಿಷಯದಲ್ಲಿ ಅನುಕೂಲವಾದುದಲ್ಲ, ಇಷ್ಟೇ ಅಲ್ಲ ಜಗತ್ತು ಸತ್ಯವಾದುದು ಎಂಬ ವಿಷಯದಲ್ಲಿಯೇ ಅನುಕೂಲವಾದುದು ಎಂದು ತಿಳಿದು ಬರುತ್ತದೆ

ವ —ಆ ಪೂರ್ವೋತ್ತರ ವಾಕ್ಯಗಳನ್ನು ಹೇಳಿ ?

ವಾ —ದ್ವೌ ಭೂತಸರ್ಗೌ ಲೋಕೇಸ್ಮಿನ್ ದೈವ ಆಸುರ ಏವ ಚ ।

ದೈವೋ ವಿಸ್ತರಶ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ( ೧೬-೬ )

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ . . .( ೧೬-೮ )

ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾಂತ್ಯಧಮಾಂ ಗತಿಮ್(೧೬-೨೦)

ಅರ್ಥ—ದೈವಸೃಷ್ಟಿಯೆಂದೂ ಆಸುರಸೃಷ್ಟಿಯೆಂದೂ ಎರಡು ಬಗೆಯ ಭೂತಸೃಷ್ಟಿಯುಂಟು ಇವುಗಳಲ್ಲಿ ದೈವ ಸೃಷ್ಟಿಯನ್ನು ವಿಸ್ತಾರವಾಗಿ ಹೇಳಿದುದಾಯಿತು ಇನ್ನು ಮೇಲೆ, ಎಲೈ ಪಾರ್ಥನೆ ! ಆಸುರೀ ಸೃಷ್ಟಿಯನ್ನು ಹೇಳುತ್ತೇನೆ, ಕೇಳು ! ಹೀಗೆಂದು ಹೇಳಿ ಅಸುರ ವ್ಯಾಪಾರವನ್ನು ಹೇಳುವದಕ್ಕೆ ಆರಂಭಿಸಿ ಅಸುರರು ಜಗತ್ತು ಸುಳ್ಳಾದುದೆಂದು ಹೇಳುತ್ತಿರುವುದರಿಂದಲೇ ನನ್ನ ಹತ್ತಿರಕ್ಕೆ ಬಾರದೆ ಅಧೋಗತಿಯನ್ನು ಹೊಂದುತ್ತಾರೆ ಎಂದು ಶ್ರೀಕೃಷ್ಣನು ಹೇಳಿದ್ದುದರ ಮೇಲಿಂದ ಜಗತ್ತು ಸುಳ್ಳಲ್ಲ ಸತ್ಯವಾದುದೆಂದು ಸಿದ್ಧವಾಗುತ್ತದೆ

ವಾ. ವ —ಮತ್ತು ಆಧಾರಗಳೇನಾದರೂ ಇದ್ದರೆ ಹೇಳಿ

ವಾ.—ಎಷ್ಟೆಂದು ಹೇಳುವುದು ! ಶ್ರುತಿಪ್ರಭೃತಿ ಸಮಸ್ತ ಪ್ರಮಾಣಗಳು ಜಗತ್ತಿಗೆ ಸತ್ಯತ್ವವನ್ನು ಹೇಳುತ್ತವೆ.

ವಾ. ವ.—ಎಲ್ಲಾ ಪ್ರಮಾಣಗಳು ಜಗತ್ತಿನ ಸತ್ಯತ್ವವನ್ನು ಯಾವ ಪ್ರಕಾರವಾಗಿ ತಿಳಿಸುತ್ತವೆ ?

ವಾ.—ಪ್ರಮಾಣವೆಂದರೆ ಯಥಾರ್ಥವಾದ ಜ್ಞಾನವನ್ನು ಉತ್ಪನ್ನ ಮಾಡುವ ವಸ್ತು. ಜ್ಞಾನವು ಯಥಾರ್ಥವೆಂದರೆ, ವಿದ್ಯಮಾನ ( ಸತ್ಯ ) ಪದಾರ್ಥ

ಗಳನ್ನು ತಿಳಿಸಿ ಕೊಡುವುದು ಶ್ರುತಿ, ಗೀತಾ, ಬ್ರಹ್ಮಸೂತ್ರ ಪ್ರತ್ಯಕ್ಷ ಅನುಮಾನ ಇವೆಲ್ಲವುಗಳನ್ನು ಪ್ರಮಾಣವೆಂದು ಯಾವಾಗ ಒಪ್ಪಿಕೊಳ್ಳುವುದೋ ಆವಾಗ ಅವುಗಳಿಂದ ಉತ್ಪನ್ನವಾದ ಜ್ಞಾನದಿಂದ ತಿಳಿದು ಬರುವ ಪದಾರ್ಥವು ಸತ್ಯವಾದುದು ಎಂದು ಸಿದ್ಧವಾಗುತ್ತದೆ, ಆದುದರಿಂದ "ಬ್ರಾಹ್ಮಣೋಽಸ್ಯ ಮುಖಮಾಸೀತ್ ಪದ್ಭ್ಯಾಂ ಶೂದ್ರೋ ಅಜಾಯತ "... ..' ಯಜ್ಞೇನ ಯಜ್ಞಮಯಜಂತ' 'ಇಮಂ ಮೇ ಗಂಗೇ ಯಮುನೇ ಸ್ವರಸ್ವತಿ .... ' ಇತ್ಯಾದಿ ಶ್ರುತಿಗಳಿಂದಲೂ, 'ಚಾತುರ್ವರ್ಣ್ಯಂ ಮಯಾ ಸೃಷ್ಟಂ" "ಬ್ರಹ್ಮಾಣಮೀಶಂ" ಇತ್ಯಾದಿ ಗೀತಾ ವಾಕ್ಯಗಳಿಂದಲೂ, 'ಜನ್ಮಾದ್ಯಸ್ಯ ಯತಃ' 'ಕ್ಷತ್ರಿಯತ್ವಾವಗಶೇಶ್ಚೋತ್ತರತ್ರ ಚೈತ್ರರಥೇನ ಲಿಂಗಾತ್" ಇತ್ಯಾದಿ ಸೂತ್ರಗಳಿಂದಲೂ ಹಾಗೆಯೇ ಪ್ರತ್ಯಕ್ಷ ಅನುಮಾನಾದಿ ಪ್ರಮಾಣಗಳಿಂದಲೂ ತಿಳಿದು ಬರುವ ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ವೇದ, ದೇವತಾ, ಯಜ್ಞ, ಗಂಗಾದಿತೀರ್ಥ ಏವಮಾದಿ ಸಮಸ್ತ ಜಗತ್ತು ಸತ್ಯವಾದುದು ಎಂದು ಸಿದ್ಧವಾಗುತ್ತದ

ವಾ ವ —ಪ್ರತ್ಯಕ್ಷಾನುಮಾನಾದಿಗಳು ಜಗತ್ತಿನ ಸತ್ಯತ್ವವನ್ನು ಹೇಗೆ ತಿಳಿಸುತ್ತವೆ?

ವಾ —ಘಟಃ ಸನ್, ಪಟಃ ಸನ್=ಘಟವು ಸತ್ಯವಾದುದು, ಪಟವು ಸತ್ಯವಾದುದು ಇವೇ ಮುಂತಾದ ಬಾಧರಹಿತವಾದ ಸಮಸ್ತ ಪ್ರತ್ಯಕ್ಷಗಳು "ಜಗತ್ ಸತ್ಯಂ ಅರ್ಥಕ್ರಿಯಾಕಾರಿತ್ವಾತ್ ಈಶ್ವರ ಸೃಷ್ಟತ್ವಾತ್" ಜಗತ್ತು ಈಶ್ವರನಿಂದ ಸೃಷ್ಟವಾದುದರಿಂದ ಮತ್ತು ಅನೇಕ ಪದಾರ್ಥಗಳನ್ನು ಹುಟ್ಟಿಸುವಂಥಾದುದು ಆದುದರಿಂದಲೂ ಸತ್ಯವು ಹೀಗೆ ಅನುಮಾನಗಳು ಜಗತ್ಸತ್ಯತ್ವ ವಿಷಯದಲ್ಲಿ ಪ್ರಮಾಣವಾಗುತ್ತವೆ.

---

## ಕ್ರಾಸ್ ಎಗ್ಸಾಮಿನೇಶನ್.

ಪ್ರ ವ —ಆಚಾರ್ಯರೇ! ತಾವು ಹೇಳಿದ ಶ್ರುತಿ, ಸೂತ್ರ, ಗೀತಾ, ಪ್ರತ್ಯಕ್ಷ, ಅನುಮಾನ ಮುಂತಾದ ಪ್ರಮಾಣಗಳು ಜಗತ್ತಿನ ಸತ್ಯತ್ವವನ್ನು ತಿಳಿಸುತ್ತವೆ ಎಂಬುದು ಸರಿಯಾಗಿದೆ. ಆದರೆ ಆ ಸತ್ಯತ್ವವು ವ್ಯಾವಹಾರಿಕ ಆದುದರಿಂದ ಜಗತ್ತು ಮಿಥ್ಯಾ ಅಲ್ಲ ಎಂದು ಹೇಳುವುದಕ್ಕೆ ಹೇಗೆ ಸಾಧಕವಾಗುವುವು ಮತ್ತು ಜಗತ್ತು ಸುಳ್ಳು (ಮಿಥ್ಯಾ) ಎಂದು ಹೇಳುವ ಅದ್ವೈತ ಮತಕ್ಕೆ ಹೇಗೆ ವಿರುದ್ಧವಾಗುವುವು?

ವಾದಿ.—ಜಗತ್ತು ವ್ಯಾವಹಾರಿಕ ಸತ್ಯವೆಂದರೆ ನಿಜವಾದ ಸತ್ಯವಲ್ಲ ತೋರಿಕೆಯ ಸತ್ಯ ಎಂದು ಅರ್ಥವನ್ನು ಮಾಡಿ ಪೂರ್ವೋಕ್ತವಾದ ಶ್ರುತ್ಯಾದಿ ಪ್ರಮಾಣಗಳಿಂದ ಸಿದ್ಧವಾದ ಜಗತ್ತಿನ ಸತ್ಯತ್ವವನ್ನು ಸುಳ್ಳೆಂದು

ಹೇಳಿದರೆ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮನ ಸತ್ಯತ್ವವೂ ಹುಸಿಯೆಂದು ಒಪ್ಪಬೇಕಾಗುವುದರಿಂದ, ಶ್ರುತ್ಯಾದಿ ಪ್ರಮಾಣಗಳಿಂದ ತಿಳಿದು ಬರುವ ಸತ್ಯತ್ವವು ಪಾರಮಾರ್ಥಿಕವಾದ ಸತ್ಯತ್ವವೇ ಎಂದು ಹೇಳಬೇಕು ಆದುದರಿಂದ ಈ ಶ್ರುತಿಗಳಿಂದ ಜಗತ್ತಿಗೆ ಪಾರಮಾರ್ಥಿಕ ಸತ್ಯತ್ವವೇ ಸಿದ್ಧವಾಗುತ್ತದೆ

---

## ೧೯ ಎಕ್ಸಾಮಿನೇಶನ್

ವಾ. ವ — ವಿಜ್ಞಾನವಾದಿಗಳಾದ ಬೌದ್ಧರು ಮತ್ತು ಶೂನ್ಯವಾದಿಗಳಾದ ಬೌದ್ಧರು ಜಗತ್ತಿಗೆ ಸತ್ಯತ್ವವನ್ನು ಹೇಳುತ್ತಾರೆಯೋ, ಮಿಥ್ಯಾತ್ವವನ್ನು (ಆರೋಪಿತತ್ವವನ್ನು) ಹೇಳುತ್ತಾರೆಯೋ ?

ವಾ — ಜಗತ್ತು ಮಿಥ್ಯಾ (ಆರೋಪಿತ) ಎಂದೇ ಹೇಳುತ್ತಾರೆ.

ವಾ. ವ — ಹೀಗೆಂದು ಹೇಳುವ ಬೌದ್ಧರನ್ನು ಶಂಕರಾಚಾರ್ಯರು ಖಂಡಿಸಿದ್ದಾರೆಯೋ ?

ವಾ — ಶಂಕರಾಚಾರ್ಯರು ಖಂಡಿಸಿದ್ದಾರೆ ?

ವಾ ವ — ಹೇಗೆ ಖಂಡಿಸಿದ್ದಾರೆ ?

ವಾ — ಜಗತ್ತು ಪ್ರಮಾಣಗಳಿಂದ ಸತ್ಯವೆಂದು ಸಿದ್ಧವಾಗಿರಲು ಸತ್ಯವಲ್ಲ ಎಂದು ಹೇಳುವುದು ಯುಕ್ತವಲ್ಲ. ಜಗತ್ತು ಮಿಥ್ಯಾ ಎಂದು ಹೇಳಿದರೆ ಪ್ರಮಾಣಗಳಿಂದ ವಿರೋಧವು ಬರುತ್ತದೆ ಆದುದರಿಂದ ಜಗತ್ತು ಸತ್ಯವಾದುದಲ್ಲವೆಂದು ಒಪ್ಪಕೂಡದು ಎಂದು ಈ ಪ್ರಕಾರವಾಗಿ ಖಂಡಿಸಿದ್ದಾರೆ

ವಾ. ವ — ಅದಕ್ಕೆ ಬೌದ್ಧರು ಏನು ಸಮಾಧಾನವನ್ನು ಹೇಳಿದರು ?

ವಾ — ಪ್ರಮಾಣಗಳು ಜಗತ್ತಿಗೆ ವ್ಯಾವಹಾರಿಕ ಸತ್ಯವು (ತೋರಿಕೆಯ ಸತ್ಯ) ಎಂದು ಹೇಳುತ್ತವೆ. ನಾವು ಜಗತ್ತು ಪಾರಮಾರ್ಥಿಕ ಸತ್ಯ (ನಿಜವಾದ ಸತ್ಯ) ಅಲ್ಲ ಎಂದು ನಿಷೇಧ ಮಾಡುತ್ತೇವೆ ಆದುದರಿಂದ ಜಗತ್ತು ಮಿಥ್ಯಾ=ಸುಳ್ಳು, ಪಾರಮಾರ್ಥಿಕ ಸತ್ಯ (ನಿಜವಾದ ಸತ್ಯ) ಅಲ್ಲವೆಂದು ಹೇಳುವ ನಮ್ಮ ಮತಕ್ಕೆ ಪ್ರಮಾಣ ವಿರೋಧವುಂಟಾಗುವುದಿಲ್ಲವೆಂದು ಸಮಾಧಾನವನ್ನು ಹೇಳಿದ್ದಾರೆ.

ವಾ. ವ — ಅದನ್ನು ಅದ್ವೈತಿಗಳು ಹೇಗೆ ಖಂಡಿಸಿದರು ?

ವಾ — § ಪ್ರಮಾಣಗಳು ತಮ್ಮ ತಮ್ಮ ವಿಷಯಗಳು ಪಾರಮಾರ್ಥಿಕ ಸತ್ಯ (ನಿಜವಾದ ಸತ್ಯ) ವಾದವುಗಳು ಎಂದು ತಿಳಿಸಿ ಕೊಡುತ್ತವೆ. ವ್ಯಾವಹಾರಿಕ

§ ಪ್ರಮಾಣಾನಿ ಹಿ ಸ್ವಗೋಚರೇ ಪ್ರವರ್ತಮಾನಾನಿ ತತ್ತ್ವಮಿದಮಿತ್ಯೇವ ಪ್ರವರ್ತಂತೇ । ನ ಪುನಃ ಸಾಂವ್ಯವಹಾರಿಕಂ ನ ಪ್ರಾಮಾಣ್ಯಂ ನ ತು ತಾತ್ವಿಕಮಿತ್ಯೇವ ಪ್ರವರ್ತಂತೇ (ಭಾಮತೀ)

ಸತ್ಯವಾದುವುಗಳು ಪಾರಮಾರ್ಥಿಕ ಸತ್ಯವಾದುವುಗಳಲ್ಲ ಎಂದು ತಿಳಿಸುವುದಿಲ್ಲವಾದುದರಿಂದ ಜಗತ್ತು ಪಾರಮಾರ್ಥಿಕ ಸತ್ಯವಲ್ಲ ಎಂದು ಹೇಳುವ ನಿಮ್ಮ ( ಬೌದ್ಧ ) ಮತಕ್ಕೆ ಪ್ರಮಾಣ ವಿರೋಧವು ಬಂದೇ ಬರುವುದು ಎಂದು ಅದ್ವೈತಿಗಳು ಖಂಡಿಸಿದ್ದಾರೆ

ವಾ ವ —' ಇದಂ ರಜತಂ ' ಎಂದರೆ ಇದು ಬೆಳ್ಳಿಯು ಎಂಬ ಈ ಜ್ಞಾನವು ರಜತವು ಸತ್ಯವಾದುದೆಂದು ತಿಳಿಸಿ ಕೊಡುತ್ತದೆಯೋ ?

ವಾ.—ರಜತಕ್ಕೆ ಸತ್ಯತ್ವವನ್ನು ತಿಳಿಸಿ ಕೊಡುತ್ತದೆ

ವಾ. ವ —ರಜತಕ್ಕೆ ಸತ್ಯತ್ವವನ್ನು ತಿಳಿಸಿ ಕೊಡುತ್ತದೆಂದು ರಜತವನ್ನು ಸತ್ಯವೆಂದು ಒಪ್ಪುತ್ತೀರೋ ? ( ಏಕೆ ಒಪ್ಪುವದಿಲ್ಲ ) ?

ವಾ.—' ಇದಂ ರಜತಂ ' ಎಂಬ ಜ್ಞಾನವುಂಟಾದಮೇಲೆ " ನೇದಂ ರಜತಂ ಕಿಂತು ಶುಕ್ತಿಶ್ಶೈವ " ( ಇದು ಬೆಳ್ಳಿಯಲ್ಲ ಕಪ್ಪೆಯ ಚಿಪ್ಪೆಯೇ ) ಎಂಬ ಬಾಧ ಜ್ಞಾನವು ಬರುವುದರಿಂದ ' ಇದಂ ರಜತಂ ' ಎಂಬ ಜ್ಞಾನದಿಂದ ರಜತವು ಸತ್ಯ ಎಂದು ತಿಳಿದು ಬಂದರೂ ಅದರ ಸತ್ಯತ್ವವನ್ನು ಒಪ್ಪುವುದಿಲ್ಲ

ವಾ ವ.—ಹಾಗಾದರೆ " ಜಗತ್ತು ಇಲ್ಲ " ಎಂಬ ಬಾಧ ಜ್ಞಾನ ಬರುವುದರಿಂದ ಜಗತ್ತಿಗೂ ಸತ್ಯತ್ವವನ್ನು ಒಪ್ಪಕೂಡದಷ್ಟೆ ?

ವಾ —ಜಗತ್ತಿಗೆ ಬಾಧವು ಯಾವ ಅವಸ್ಥೆಯಲ್ಲಿಯೂ ಬರುವದಿಲ್ಲವೆಂದು ಶಂಕರಾಚಾರ್ಯರು " ನೈವಂ ಜಾಗರಿತೋಪಲಬ್ಧಂ ವಸ್ತು ಕಸ್ಯಾಂಚಿದಪಿ ಅವಸ್ಥಾಯಾಂ ಬಾಧ್ಯತೆ " ಈ ವಾಕ್ಯದಿಂದ ಹೇಳಿದ್ದಾರೆ. ವಸ್ತುತ ಬಾಧವು ಉಂಟಾಗುವುದಿಲ್ಲವಾದುದರಿಂದ ಶ್ರುತಿ, ಸೂತ್ರ, ಗೀತಾ ಇತ್ಯಾದಿ ಪ್ರಮಾಣಗಳಿಂದ ತಿಳಿದು ಬರುವ ಬ್ರಾಹ್ಮಣಾವರ್ಣಾದಿ ಸಮಸ್ತ ಜಗತ್ತು ಪಾರಮಾರ್ಥಿಕ ಸತ್ಯವೇ ಆದುದು ಎಂದು ಸಿದ್ಧವಾಗುತ್ತದೆ

ವಾ. ವ.—' ವಿಶ್ವಂ ಸತ್ಯಂ ' ಈ ಶ್ರುತಿಯಲ್ಲಿ ' ಸತ್ಯಂ ' ಎಂಬದಕ್ಕೆ ವಿದ್ಯಾರಣ್ಯರು ( ವೇದಭಾಷ್ಯಕಾರರು ) ಯಾವ ಅರ್ಥವನ್ನು ಹೇಳಿದ್ದಾರೆ ?

ವಾ —ಸತ್ಯಂ=ಯಥಾರ್ಥವಾದುದೆ, ವಿದ್ಯಮಾನಮೇವ=ಇರುವುದೇ ನತ್ವಾರೋಪಿತಂ=ಆರೋಪಿತವಲ್ಲದುದು ( ಕಲ್ಪಿತವಲ್ಲದುದು ), ನ ಮಿಥ್ಯಾ=ಸುಳ್ಳಾದುದು ಅಲ್ಲ ಎಂದೇ ಅರ್ಥ ಮಾಡಿದ್ದಾರೆ

ವಾ. ವ—ಈ ವಾಕ್ಯದಿಂದ ಏನು ಸಿದ್ಧಸುತ್ತದೆ ?

ವಾ —ಪರಮಾತ್ಮನ ಗುಣಕರ್ಮಾದಿ ಸರ್ವವು ಆರೋಪಿತ ( ಸುಳ್ಳು ) ಅಲ್ಲ, ಪಾರಮಾರ್ಥಿಕ ಸತ್ಯವಾದವುಗಳೇ ಎಂದು ಸಿದ್ಧವಾಗುತ್ತವೆ

---

# ಸಂಯಮನೀಪುರದ ಹೈಕೋರ್ಟ.

## O S. No 564 of 1927.

ವಾದಿ—ಸತ್ಯಬೋಧಾಚಾರ್ಯ
ವಕೀಲ—
ಮಾಧವದಾಸ P. B D.

ಪ್ರತಿವಾದಿ —ಗಂಗಾಧರಶಾಸ್ತ್ರಿ
ವಕೀಲ—
ಹರಿಹರಶರ್ಮ P. B S.

---

## ಪ್ರತಿವಾದಿಯ ವಿಚಾರಣೆ.

೧೭-೨-೧೯೨೭.

ಕೋರ್ಟ —ನೀವು ದೇವರ ಆಣೆಯನ್ನು ತೆಗೆದುಕೊಂಡು ಕೋರ್ಟಿನ ಸಮ್ಮುಖದಲ್ಲಿ ಹೇಳುವದೆಲ್ಲವನ್ನು ನಾನು ಸತ್ಯವಾಗಿ ಹೇಳುತ್ತೇನೆ ಸುಳ್ಳು ಹೇಳುವುದಿಲ್ಲ ಎಂದು ಹೇಳಿ ?

ಪ್ರ ಗಂ — ಮಹಾರಾಜರೆ ! ನಮ್ಮ ಮತದಲ್ಲಿ ಬ್ರಹ್ಮನನ್ನು ಬಿಟ್ಟು ಬೇರೆ ಸತ್ಯವಾದ ಪದಾರ್ಥವಿಲ್ಲದುದರಿಂದ ಎಲ್ಲವನ್ನು ಸತ್ಯವನ್ನೇ ಹೇಳುತ್ತೇನೆಂದು ಹೇಗೆ ಹೇಳಲಿ ?

ಕೋರ್ಟ—ಹಾಗಾದರೆ ಸುಳ್ಳು ಹೇಳುತ್ತೇನೆಂದು ಹೇಳುತ್ತೀರೋ ?

ಪ್ರ ಗಂ —ಇಲ್ಲ ಮಹಾರಾಜರೆ ! ನಮ್ಮ ಮತದಲ್ಲಿ ಪಾರಮಾರ್ಥಿಕ ಸತ್ಯ, ವ್ಯಾವಹಾರಿಕ ಸತ್ಯ ಹೀಗೆ ಎರಡು ಪ್ರಕಾರದ ಸತ್ಯವುಂಟು. ಇದರಲ್ಲಿ ಪಾರಮಾರ್ಥಿಕ ಸತ್ಯವು ಬ್ರಹ್ಮನು ಉಳಿದುದೆಲ್ಲವೂ ವ್ಯಾವಹಾರಿಕ ಸತ್ಯವಾದುದರಿಂದ ಕೋರ್ಟಿನ ಸಮ್ಮುಖದಲ್ಲಿ ದೇವರ ಸಮ್ಮುಖದಲ್ಲಿ ದೇವರ ಆಣೆ ಮಾಡಿ ನಾವು ಹೇಳುವದೆಲ್ಲವು ವ್ಯಾವಹಾರಿಕ ಸತ್ಯವೆಂದು ಹೇಳುತ್ತೇವೆ

ವಾ ವ —ವ್ಯಾವಹಾರಿಕ ಸತ್ಯವೆಂದರೇನು ?

ಕೋರ್ಟ—ಈ ವಿಚಾರವು ಈಗ ಬೇಡ ಮುಂದೆ ಮಾಡಬಹುದು. ಶಾಸ್ತ್ರಿಗಳೇ ನಿಮ್ಮ ಹೆಸರೇನು ?

ಪ್ರ. ಗಂ —ಗಂಗಾಧರಶಾಸ್ತ್ರಿ

ಪ್ರ. ವ.—(ಸ್ಟೇಟಮೆಂಟತೋರಿಸಿ) ಈ ಸ್ಟೇಟಮೆಂಟ ಕೊಡುವವರು ನೀವೆಯೋ !

ಪ್ರ. ಗಂ—ಹೌದು

ಪ್ರ. ವ.—ನಿಮ್ಮ ಅಭಿಪ್ರಾಯವೇನು ?

ಪ್ರ ಗಂ — ವಾದಿಯ ದಾವೆಯಲ್ಲಿ ಹೇಳಿದ ಸರ್ವ ವಿಷಯವು ಸುಳ್ಳಾದುದರಿಂದ ಕೋರ್ಟಿನವರು ಈ ದಾವೆಯ ವಿಚಾರಣೆಯನ್ನು ನಡಿಸದೆ ದಾವೆಯನ್ನು ತೆಗೆದು ಹಾಕಿ ನಮಗೆ ಈ ದಾವೆಗಾಗಿ ಹಿಡಿದ ಖರ್ಚನ್ನು ವಾದಿಯ ಕಡೆಯಿಂದ ನಮಗೆ ಕೊಡಿಸಬೇಕೆಂದು ಪ್ರಾರ್ಥನೆ

ಪ್ರ ವ — ನಿಮಗೆ ಈ ವಿಷಯದಲ್ಲಿ ಆಧಾರವುಂಟೇ ?

ಪ್ರ ಗಂ. — ಉಂಟು.

ಪ್ರ. ವ. — ಅವುಗಳನ್ನು ಒಪ್ಪಿಸಿರಿ.

ಪ್ರ ಗಂ — ಆ ಆಧಾರಗಳು ನಮ್ಮ ಸಾಕ್ಷಿಗಳ ಹತ್ತಿರ ಇವೆಯಾದುದರಿಂದ ಅವರ ವಿಚಾರಣೆಯ ಸಂದರ್ಭದಲ್ಲಿ ಅವುಗಳನ್ನು ಒಪ್ಪಿಸುವೆವು

ಪ್ರ. ವ — ಸಾಕ್ಷಿಗಳನ್ನು ಹಾಜರು ಮಾಡುವಿರೋ ?

ಪ್ರ ಗಂ — ಮಾಡುತ್ತೇವೆ. ಅವಧಿಯನ್ನು ಕೊಡಿ ?

ಕೋರ್ಟ — ಹಿಯರಿಂಗ್ ೨೨-೨-೧೯೨೭ ದಿವಸ ಗೊತ್ತು ಮಾಡಿದೆ.

---

## ಪ್ರತಿವಾದಿಯ ಸಾಕ್ಷಿಯ ವಿಚಾರಣೆ.

೨೨ ೨-೧೯೨೭.

ಕೋರ್ಟ — ನಿಮ್ಮ ಹೆಸರೇನು ?

ಸಾಕ್ಷಿ — ಸುಬ್ರಹ್ಮಣ್ಯಶಾಸ್ತ್ರಿ

ಕೋರ್ಟ — ದೇವರ ಆಣೆ ಮಾಡಿ ಎಲ್ಲಾ ಸತ್ಯವಾಗಿ ಹೇಳುತ್ತೇನೆಂದು ಹೇಳಿ

ಸಾಕ್ಷಿ — ನಮ್ಮ ಮತದಲ್ಲಿ ಪಾರಮಾರ್ಥಿಕ ಸತ್ಯ ( ನಿಜವಾದ ಸತ್ಯ ) ವೆಂದೂ, ವ್ಯಾವಹಾರಿಕ ಸತ್ಯವೆಂದೂ ( ತೋರಿಕೆಯ ಸತ್ಯವೆಂದೂ ) ಎರಡು ವಿಧವಾದ ಸತ್ಯವುಂಟು ಇವುಗಳಲ್ಲಿ ಯಾವದನ್ನು ಹೇಳಬೇಕು ಈ ವಿಷಯವಾಗಿ ಅಪ್ಪಣೆಯಾಗಬೇಕು

ಕೋರ್ಟ — ಪಾರಮಾರ್ಥಿಕ ಸತ್ಯ ( ನಿಜವಾದ ಸತ್ಯ ) ವನ್ನು ನುಡಿಯುತ್ತೇನೆಂದು ಹೇಳಿ

ಸಾಕ್ಷಿ — ಬ್ರಹ್ಮನನ್ನು ಬಿಟ್ಟು ಬೇರೆ ಯಾವುದೂ ಪಾರಮಾರ್ಥಿಕ ಸತ್ಯವಲ್ಲ ಬ್ರಹ್ಮನೊಬ್ಬನೇ ಪಾರಮಾರ್ಥಿಕ ಸತ್ಯನು. ಆದುದರಿಂದ ನಾನು ಎಲ್ಲವನ್ನು ಪಾರಮಾರ್ಥಿಕ ಸತ್ಯವಾಗಿ ಹೇಳುತ್ತೇನೆಂದು ಹೇಗೆ ಹೇಳಲಿ ?

ಕೋರ್ಟ — ಹಾಗಾದರೆ ಹೇಗೆ ಹೇಳುತ್ತೀರಿ.

ಸಾಕ್ಷಿ — ವ್ಯಾವಹಾರಿಕ ಸತ್ಯ ( ತೋರಿಕೆಯ ಸತ್ಯ ) ವಾದುದನ್ನು ಹೇಳುತ್ತೇನೆಂದು ಹೇಳುತ್ತೇನೆ.

ವ. — ಬ್ರಾಹ್ಮಣವರ್ಣಾದಿ ಜಗತ್ತು ಸತ್ಯವಾದುದೇ, ಸುಳ್ಳಾದುದೇ ?

ಸಾ — ಸುಳ್ಳಾದುದು

ಪ್ರ ವ — ಸುಳ್ಳೆಂದರೇನು ?

ಸಾ — ' ಬ್ರಹ್ಮವ್ಯತಿರೇಕೇಣಾಭಾವಃ ' ಬ್ರಹ್ಮನಿಂದ ಬೇರೆಯಾದುದು ಇಲ್ಲ ಎಂದರೆ ಬ್ರಹ್ಮನಲ್ಲಿ ಆರೋಪಿತ ವಾದುದು.

ಪ್ರ ವ — ಈ ವಿಷಯದಲ್ಲಿ ಆಧಾರವೇನು ?

ಸಾ — ತದನನ್ಯತ್ವಮಾರಂಭಣಶಬ್ದಾದಿಭ್ಯಃ ( ಬ್ರ. ಸೂ ೨ ೧-೧೪ ) ಎಂಬ ಸೂತ್ರವು

ಪ್ರ ವ — ಶ್ರುತಿಗಳೂ ಆಧಾರವಾಗಿವೆಯೋ ?

ಪ್ರ ಸಾ ಆಗಿವೆ

ಪ್ರ ವ — ಅದನ್ನೇಕೆ ಹೇಳಲಿಲ್ಲ ?

ಪ್ರ ಸಾ. — ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುವ ಸಮಯದಲ್ಲಿ ಶಂಕರಾಚಾರ್ಯರು ಶ್ರುತಿಯ ಆಧಾರವನ್ನು ಕೊಟ್ಟು ಜಗತ್ತು ಮಿಥ್ಯಾ ಎಂದು ಹೇಳಿದ್ದಾರೆ ಸೂತ್ರಾರ್ಥವನ್ನು ಹೇಳುವಾಗ ಶ್ರುತಿಯನ್ನು ಹೇಳಬೇಕಾಗುವುದೆಂದು ಈಗ ಹೇಳಲಿಲ್ಲ

ಪ್ರ ವ — ಈ ಬ್ರಹ್ಮಸೂತ್ರದ ಅರ್ಥವೇನು ?

ಪ್ರ. ಸಾ. — " ತದನನ್ಯತ್ವಮಾರಂಭಣಶಬ್ದಾದಿಭ್ಯಃ " ಈ ಸೂತ್ರದಲ್ಲಿ " ತದನನ್ಯತ್ವಂ " -- ಈ ಪದವು ಪ್ರತಿಜ್ಞಾ ಭಾಗವು, ಎಂದರೆ ಅಭಿಪ್ರೇತವಾದ ಅರ್ಥವನ್ನು ತಿಳಿಸುವ ಭಾಗವು ' ಆರಂಭಣ ಶಬ್ದಾದಿಭ್ಯ ' ಎಂಬ ಭಾಗವು ಹೇತುವಿಗೆ ಎಂದರೆ ಅಭಿಪ್ರೇತವಾದ ಅರ್ಥದ ವಿಷಯವಾಗಿ ಪ್ರಮಾಣವನ್ನು ತಿಳಿಸುವುದು ಇದರಲ್ಲಿ ' ತದನನ್ಯತ್ವಂ ' ಎಂಬ ಪ್ರತಿಜ್ಞಾ ಭಾಗಕ್ಕೆ ' ತಯೋಃ ಅನನ್ಯತ್ವಂ ' ಕಾರ್ಯಭೂತವಾದ ಜಗತ್ತಿಗೆ ಕಾರಣಭೂತವಾದ ಬ್ರಹ್ಮನಿಂದ ಅಭೇದವು ಎಂದು ಅರ್ಥವು.

ಪ್ರ. ವ — ' ಆರಂಭಣಶಬ್ದಾದಿಭ್ಯಃ ' ಈ ಹೇತು ಭಾಗದ ಅರ್ಥವೇನು ?

ಪ್ರ. ಸಾ, — ' ಆರಂಭಣಶಬ್ದ ' ಎಂಬ ಪದದಿಂದ " ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ " ( ಛಾಂ ೬-೧ ೪ ) ಎಂಬ ಶ್ರುತಿಯನ್ನು ತೆಗೆದುಕೊಂಡು ' ಆದಿ ಶಬ್ದದಿಂದ ' " ಐತದಾತ್ಮ್ಯಮಿದಂ ಸರ್ವಂ ತತ್ ಸತ್ಯಂ ಸ ಆತ್ಮಾ ತತ್ವಮಸಿ" (ಛಾಂ ೬-೮-೭ ) (೨) " ಇದಂ ಸರ್ವಂ ಯದಯಮಾತ್ಮಾ " (ಬೃ ೨-೪-೬), (೩) ಬ್ರಹ್ಮೈವೇದಂ ಸರ್ವಂ" (ಮುಂ ೨-೨-೧೧), (೪) 'ಆತ್ಮೈವೇದಂ ಸರ್ವಂ' (ಛಾ. ೭-೨೫-೨ ), (೫) " ನೇಹ ನಾನಾಸ್ತಿ ಕಿಂಚನ " ( ಬೃ. ೪-೪-೧೯ ಕಾಂ ೨-೪-೧೧ ) ಹೀಗೆ ಐದು ಶ್ರುತಿಗಳನ್ನು ತೆಗೆದುಕೊಂಡು ಎಲ್ಲವನ್ನೂ ಕೂಡಿಸಿಕೊಂಡು, ೬ ಶ್ರುತಿಗಳಿಂದ ಜಗತ್ತು ಬ್ರಹ್ಮನಿಂದ ಬೇರೆ ( ಬ್ರಹ್ಮವ್ಯತಿರಿಕ್ತ ) ಅಲ್ಲವೆಂದು ಸಿದ್ಧವಾಗುತ್ತದೆ.

---

# ಕ್ರಾಸ್ ಎಕ್ಸಾಮಿನೇಶನ್.

ವಾ ವ.—ಈ ಸೂತ್ರದಲ್ಲಿ ' ಜಗತ್ತು ' ಎಂಬ ಪದವಿಲ್ಲ, ಹೀಗಿರುವಾಗ ಜಗತ್ತು ಬ್ರಹ್ಮನಿಂದ ಬೇರೆ ಅಲ್ಲವೆಂದು ಅರ್ಥವನ್ನು ಹೇಗೆ ಹೇಳುತ್ತೀರಿ ?

ಪ್ರ ಸಾ —' ತತ್ ' ಎಂಬ ಪದಕ್ಕೆ ' ಜಗತ್ತು ' ಎಂಬ ಅರ್ಥವನ್ನು ತೆಗೆದುಕೊಂಡು ಜಗತ್ತು ಬ್ರಹ್ಮನಿಂದ ಭಿನ್ನವಾದುದು ಅಲ್ಲವೆಂದು ಅರ್ಥ ಹೇಳುತ್ತೇವೆ.

ವಾ. ವ —ತತ್ ಪದದಿಂದ ' ಜಗತ್ತು ' ಎಂಬ ಅರ್ಥವನ್ನೇ ಏಕೆ ತೆಗೆದುಕೊಳ್ಳಬೇಕು. ಬೇರೆ ಅರ್ಥವನ್ನು ಸ್ವೀಕರಿಸಬಾರದು ಎಂಬ ವಿಷಯದಲ್ಲಿ ಆಧಾರವೇನು ?

ಪ್ರ ಸಾ— ಉತ್ತರವಿಲ್ಲ

ವಾ ವ—" ತದನನ್ಯತ್ವಂ " ಈ ಪದದಲ್ಲಿಯ ತತ್ ಎಂಬ ಪದಕ್ಕೆ ಬ್ರಹ್ಮ ಎಂಬ ಅರ್ಥವನ್ನು ಹೇಳುವ ವಿಷಯದಲ್ಲಿ ಆಧಾರವೇನು ? ಬೇರೆ ಅರ್ಥವನ್ನೇಕೆ ಮಾಡಬಾರದು ?

ಪ್ರ ಸಾ—ಉತ್ತರವಿಲ್ಲ

ವಾ ವ—ಮತ್ತು ' ತತ್ ಪದಕ್ಕೆ ಬ್ರಹ್ಮ ಮತ್ತು ಜಗತ್ತು ಎಂಬ ಅರ್ಥವನ್ನು ತೆಗೆದುಕೊಂಡರೂ ಜಡವಾದ ಜಗತ್ತಿಗೂ ಚೇತನವಾದ ಬ್ರಹ್ಮನಿಗೂ ಅಭೇದವುಂಟು ಎಂಬರ್ಥವು ಹೇಗೆ ಕೂಡೀತು ?

ಪ್ರ ಸಾ—*ನಾವು ' ಅನನ್ಯತ್ವಂ ' ಈ ಪದದಿಂದ ಜಗತ್ತು ಬ್ರಹ್ಮನಿಂದ ಅಭಿನ್ನವಾದುದು ಎಂದು ಹೇಳುವುದಿಲ್ಲ ಭೇದದ ನಿರಾಕರಣವನ್ನು ಮಾಡುತ್ತೇವೆ ಆದುದರಿಂದ ಅಭೇದವನ್ನು ಒಪ್ಪುವವರ ಮೇಲೆ ನೀವು ಹೇಳಿದ ದೋಷವು ಅಭೇದವನ್ನು ಒಪ್ಪದ ನಮ್ಮ ಮೇಲೆ ಬರುವುದಿಲ್ಲ.

ವಾ ವ—ಜಗತ್ತಿಗೆ ಬ್ರಹ್ಮನಿಂದ ಅಭೇದವಿಲ್ಲವೆಂದು ಹೇಳುವವರನ್ನು ನೀವು ನಿರಾಕರಿಸುವುದಿಲ್ಲವಷ್ಟೆ.

ಪ್ರ. ಸಾ.—ನಾವು ಜಗತ್ತಿಗೆ ಬ್ರಹ್ಮನಿಂದ ಅಭೇದವನ್ನು ನಿರಾಕರಿಸುವವರ ನಿರಾಕರಣ ಮಾಡುವುದಿಲ್ಲವೆಂದಿಷ್ಟೇ ಅಲ್ಲ. † ಪ್ರತ್ಯುತ ಅವರು ನಮ್ಮ ಸಹಕಾರಿಗಳೆಂದು ಹೇಳುತ್ತೇವೆ.

ವಾ ವ.—ಘಟವು ಪಟದಿಂದ ಭಿನ್ನವೂ, ಅಭಿನ್ನವೂ ಹೀಗೆ ಎರಡೂ ಆಗಬಹುದೇ ?

ಪ್ರ. ಸಾ —ಭೇದ ಅಭೇದ ಇವೆರಡು ಪರಸ್ಪರ ವಿರುದ್ಧವಾದುವುಗಳಾದುದರಿಂದ

---

* ನ ಖಲು ಅನನ್ಯತ್ವಮಿತ್ಯಭೇದಂ ಬ್ರೂಮಃ ಕಿಂತು ಭೇದಂ ವ್ಯಾಸೇಧಾಮಃ। ತತಶ್ಚ ನಾಭೇದಾಶ್ರಯದೋಷಪ್ರಸಂಗಃ ( ಭಾಮತಿ ೨-೧-೧೪ )

† ಕಿಂತ್ವಭೇದಂ ವ್ಯಾಸೇಧದ್ಭಿರ್ವೈಶೇಷಿಕಾದಿಭಿರಸ್ಮಾಕಂ ಸಾಹಾಯಕಮೇವ ಆಚರಿತಂ ಭವತಿ ( ಭಾ. ೨-೧-೧೪ ).

ಭಿನ್ನವಾದುದಾದರೂ ಇರಬೇಕು, ಅಭಿನ್ನವಾದುದಾದರೂ ಇರಬೇಕು ಆದ ಕಾರಣ ಘಟವು ಪಟದಿಂದ ಭಿನ್ನವೂ ಅಭಿನ್ನವೂ ಎರಡೂ ಆಗಲಾರದು

ವಾ. ವ —ಬ್ರಹ್ಮನು ಸತ್ಯ ಮತ್ತು ಅಸತ್ಯ ಎಂದು ಹೇಳಬಹುದೇ ? ಸತ್ಯವೂ ಅಲ್ಲ ಅಸತ್ಯವೂ ಅಲ್ಲ ಎಂದು ಹೇಳಬಹುದೇ ?

ಪ್ರ ಸಾ —ಸತ್ಯತ್ವ, ಅಸತ್ಯತ್ವ ಇವೆರಡು ಪರಸ್ಪರ ವಿರುದ್ಧವಾದುವು. ಆದುದರಿಂದ ಒಂದು ವಸ್ತು ಸತ್ಯರೂಪವಲ್ಲದಿದ್ದರೆ ಅಸತ್ಯರೂಪವಾಗಬಹುದು, ಅಸತ್ಯವಲ್ಲವಾದರೆ ಸತ್ಯವಾಗಬಹುದು, ಸತ್ಯವಾಗಿದ್ದರೆ ಅಸತ್ಯವಾಗಲಾರದು, ಅಸತ್ಯವಾಗಿದ್ದರೆ ಸತ್ಯವಾಗಲಾರದು. ಆದುದರಿಂದ ಬ್ರಹ್ಮನು ಅಸತ್ಯನಲ್ಲ ಆದುದರಿಂದ ಸತ್ಯವೇ ಒಂದೇ ವಸ್ತುವು ಸತ್ಯ, ಅಸತ್ಯವೆಂದು ಹೇಳಲು ಅವಕಾಶ ಹೇಗೆ ಇಲ್ಲವೊ ಹಾಗೆಯೇ ಸತ್ಯವೂ ಅಲ್ಲ, ಅಸತ್ಯವೂ ಅಲ್ಲ ಎಂದು ಹೇಳುವುದಕ್ಕೂ ಅವಕಾಶವಿಲ್ಲ

ವಾ ವ.—ಜೀವನು ಬ್ರಹ್ಮನಿಂದ ಭಿನ್ನನೂ ಅಭಿನ್ನನೂ ಎಂದು ಹೇಳಬಹುದೇ ?

ಪ್ರ ಸಾ —ಜೀವನು ಬ್ರಹ್ಮನಿಂದ ಭಿನ್ನನೂ ಅಭಿನ್ನನೂ ಎಂದು ಹೇಳಕೂಡದು

ವಾ ವ —ಜೀವನು ಬ್ರಹ್ಮನಿಂದ ಭಿನ್ನನೂ ಅಲ್ಲ, ಅಭಿನ್ನನೂ ಅಲ್ಲ ಎಂದು ಹೇಳಬಹುದೇ ?

ಪ್ರ ಸಾ— ಭಿನ್ನನೂ ಅಲ್ಲ, ಅಭಿನ್ನನೂ ಅಲ್ಲ ಎಂದು ಹೇಳಕೂಡದು

ವಾ ವ —ಜಗತ್ತು ಬ್ರಹ್ಮನಿಂದ ಭಿನ್ನವೆ, ಅಭಿನ್ನವೆ ?

ಪ್ರ ಸಾ —ಜಗತ್ತು ಬ್ರಹ್ಮನಿಂದ ಭಿನ್ನವೂ ಅಲ್ಲ, ಅಭಿನ್ನವೂ ಅಲ್ಲ

ವಾ ವ —ಭೇದಕ್ಕೂ, ಅಭೇದಕ್ಕೂ ಪರಸ್ಪರ ವಿರೋಧವುಂಟು. ಆದುದರಿಂದ ಜಗತ್ತು ಬ್ರಹ್ಮನಿಂದ ಭಿನ್ನವಾದರೂ ಆಗಬೇಕು, ಅಭಿನ್ನವಾದರೂ ಆಗಬೇಕು. ಭಿನ್ನವೂ ಅಲ್ಲ ಅಭಿನ್ನವೂ ಅಲ್ಲವೆಂದು ಹೇಳುವುದು ಹೇಗೆ ಕೂಡುವದು ( ಅನುಪಪತ್ತಿ ಬರವುದಿಲ್ಲವೆ ) ?

ಪ್ರ ಸಾ —ನಮ್ಮ ಅದ್ವೈತ ಮತದಲ್ಲಿ ಜಗತ್ತು ಮಾಯೆಯಿಂದ ಕಲ್ಪಿತವಾದುದರಿಂದ ಸಮಸ್ತ†ಅನುಪಪತ್ತಿ ( ದೋಷ ) ಗಳು ಭೂಷಣವೆ ಆದುದರಿಂದ ನೀವು ಹೇಳಿದ* ಅನುಪಪತ್ತಿಗಳು ನಮ್ಮ ಸ್ನೇಹಿತರುಗಳು

ವಾ ವ —ಜಗತ್ತು ಬ್ರಹ್ಮನಿಂದ ಭಿನ್ನವಾಗದೆ ಇದ್ದರೂ ಮಿಥ್ಯಾ ಎಂದು ಹೇಗೆ ಸಿದ್ಧಿಸುವದು ?

ಪ್ರ ಸಾ —ಉತ್ತರವಿಲ್ಲ

---

† ಅಸ್ತು ವಾ ಅನುಪಪತ್ತಿರೇವ ಕಾರ್ಯಕಾರಣಯೋರ್ಮಾಯಾತ್ಮಕತ್ವಾತ್ | ಅನುಪಪತ್ತಿರ್ಹಿ ಮಾಯಾಮುಪೋದ್ಬಲಯತಿ | ಅನುಪಪದ್ಯಮಾನಾರ್ಥತ್ವಾತ್ ಮಾಯಾಯಾಃ (ಭಾಮತೀ ೧-೪-೨೨)ಃ ಮಾಯಾಯಾಮನುಪಪತ್ತಿರಲಂಕಾರ ಇತಿ ನ ಮಾಯಾವಾದೇ ಅತ್ಯಂತಮುಪಪಾದನಾರ್ಥಂ ಪ್ರಯತಿತವ್ಯಂ ( ಕಲ್ಪತರು ಪರಿಮಳ ೧-೪-೨೨).

* ಅನವಸ್ಥಾದಯೋ ದೋಷಾಃ ಸತ್ತಾಂ ನಿಘ್ನಂತಿ ವಸ್ತುನಃ | ಅದ್ವೈತಿನಾಂ ತೇ ಸುಹೃದಃ ಪ್ರಪಂಚೇ ತತ್ಪ್ರಸಂಜಕಾಃ ||

# ಆರಂಭಣ ಶಬ್ದಾದಿಭ್ಯಃ ಎಂಬೀಹೇತುವಾಕ್ಯದ ವಿಚಾರಣೆ.

ವಾ. ವ —ಸೂತ್ರಕಾರರು ಈ ಸೂತ್ರದಲ್ಲಿ ' ವಾಚಾರಂಭಣಂ ವಿಕಾರೋ ನಾಮಧೇಯಂ ' ಎಂಬ ಶ್ರುತಿಯನ್ನು ತೆಗೆದುಕೊಂಡಿದ್ದಾರೆಂಬುದು ನಿಮಗೆ ಹೇಗೆ ಗೊತ್ತಾಯಿತು ?

ಪ್ರ ಸಾ —ಈ ಸೂತ್ರದಲ್ಲಿರುವ " ಆರಂಭಣಶಬ್ದ " ಎಂಬ ಪದದಿಂದ ವಾಚಾರಂಭಣಂ ಎಂಬ ಶ್ರುತಿಯನ್ನು ತೆಗೆದುಕೊಂಡಿದ್ದಾರೆಂದು ನಾವು ತಿಳಿದುಕೊಂಡಿದ್ದೇವೆ.

ವಾ ವ —ಒಂದು ಸಮಸ್ತಪದದಲ್ಲಿ ಪ್ರಥಮ ಭಾಗದಿಂದ ಶ್ರುತಿಯನ್ನು ತೋರಿಸಬೇಕೋ ಅಥವಾ ಎರಡನೆಯ ಭಾಗದಿಂದ ತೋರಿಸಬೇಕೊ ?

ಪ್ರ ಸಾ —ಮೊದಲನೆಯ ಭಾಗದಿಂದ ಶ್ರುತಿಯನ್ನು ತೋರಿಸಬೇಕು

ವಾ. ವ —"ವಾಚಾರಂಭಣಂ ವಿಕಾರೋ ನಾಮಧೇಯಂ " ಈ ಶ್ರುತಿಯಲ್ಲಿ ವಾಚಾರಂಭಣಂ ಎಂಬುದು ಒಂದೇ ಪದವಲ್ಲವೇ ?

ಪ್ರ ಸಾ. —ಒಂದೇ ಪದವೇ ಹೌದು

ವಾ. ವ —ಆರಂಭಣಂ ಎಂಬ ಪದವು ಶ್ರುತಿಯಲ್ಲಿಯ ವಾಚಾರಂಭಣ ಎಂಬ ಪದದ ಉತ್ತರಭಾಗವಾಗಿದೆಯಲ್ಲವೆ ?

ಪ್ರ ಸಾ —ಹೌದು ಉತ್ತರಭಾಗವೇ.

ವಾ ವ —ಯಾರಾದರೂ ಯಾವುದಾದರೊಂದು ಸೂತ್ರದಲ್ಲಿಯ ಅಥವಾ ಶ್ಲೋಕದಲ್ಲಿಯ ಒಂದು ಪದದ ಉತ್ತರ ಭಾಗವನ್ನು ತೆಗೆದು ಕೊಂಡು ಅದರಿಂದ ಕೂಡಿದ ಸಂಪೂರ್ಣ ಶ್ರುತಿಯನ್ನಾಗಲಿ, ಸಂಪೂರ್ಣವಾದ ಶ್ಲೋಕವನ್ನಾಗಲಿ ತೋರಿಸಿದ್ದಾರೆಯೋ ?

ಪ್ರ ಸಾ —ಹೀಗೆ ಯಾರೂ ತೋರಿಸಿಲ್ಲ

ವಾ ವ —' ವಾಚಾರಂಭಣಂ ' ಎಂಬ ಪದದಲ್ಲಿ ಉತ್ತರ ಭಾಗದಲ್ಲಿರುವ ಆರಂಭಣವೆಂಬ ಶಬ್ದದಿಂದ " ವಾಚಾರಂಭಣಂ ವಿಕಾರೋ " ಎಂಬೀ ಶ್ರುತಿಯನ್ನು ತೆಗೆದುಕೊಂಡಿದ್ದಾರೆ ಎಂದು ಹೇಳುವುದು ಹೇಗೆ ಕೂಡುತ್ತದೆ ?

ಪ್ರ ಸಾ —ಉತ್ತರವಿಲ್ಲ

ವಾ ವ — ಮೈಲಾರ್ಡ ' ಜಗತಃ ' ಕಾರ್ಯವಾದ ಜಗತ್ತಿಗೆ ' ತದನನ್ಯತ್ವಂ ' ಕಾರಣೀಭೂತವಾದ ಬ್ರಹ್ಮನಿಂದ ಅಭೇದವುಂಟು, ಬೇರೆ ಯಾದುದಲ್ಲ ( ಬ್ರಹ್ಮವ್ಯತಿರೇಕೇಣಾಭಾವ ) ಎಂಬ ವಿಷಯದಲ್ಲಿ ' ಆರಂಭಣ ಶಬ್ದಾದಿಭ್ಯಃ ' ' ವಾಚಾರಂಭಣಂ ವಿಕಾರೋ ನಾಮಧೇಯಂ ' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ ಎಂದು ' ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ' ಈ ಸೂತ್ರದ ಅರ್ಥವು ಹೀಗೆಂದು ತಿಳಿದು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುವುದು ಯುಕ್ತವಲ್ಲ. ಏಕೆಂದರೆ:—

(a) ' ವಾಚಾರಂಭಣಂ ' ಇತ್ಯಾದಿ ಶ್ರುತಿಗಳಿಂದ ಜಗತ್ತಿನ ಮಿಥ್ಯಾತ್ವವು ಸಿದ್ಧಿಸುವುದಿಲ್ಲ ವಾದುದರಿಂದ ಆ ಶ್ರುತಿಯ ಆಧಾರದಿಂದ ಜಗತ್ತು ಮಿಥ್ಯೆಯಾದುದು, ಎಂದು ' ತದನನ್ಯತ್ವಮಾರಂಭಣ ಶಬ್ದಾದಿಭ್ಯಃ ' ಎಂಬ ಸೂತ್ರವು ಹೇಳುತ್ತದೆಂದು ಶಂಕರಾಚಾರ್ಯರು ವ್ಯಾಖ್ಯಾನ ಮಾಡಿದುದು ಯುಕ್ತವಲ್ಲ

(b) ' ತದನನ್ಯತ್ವಮಾರಂಭಣ ಶಬ್ದಾದಿಭ್ಯ ' ಈ ಸೂತ್ರದಲ್ಲಿ ಜಗನ್ಮಿಥ್ಯಾತ್ವವನ್ನು ತಿಳಿಸುವ ಪದವೇ ಇಲ್ಲ.

(c) ಈ ಸೂತ್ರದಲ್ಲಿ ಜಗತ್ತನ್ನು ತಿಳಿಸುವ ಪದವೇ ಇಲ್ಲ ' ತತ್ ' ಪದದಿಂದ ಜಗತ್ತನ್ನು ತೆಗೆದುಕೊಳ್ಳಬೇಕು ಎಂಬ ವಿಷಯದಲ್ಲಿ ಆಧಾರವಿಲ್ಲ ಆದುದರಿಂದ ಈ ಸೂತ್ರವು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿ ಕೊಡುತ್ತದೆಂದು ಹೇಳುವುದು ಯುಕ್ತವಲ್ಲ

(d) ' ತದನನ್ಯತ್ವಂ ' ಈ ಪದದಲ್ಲಿರುವ ' ತತ್ ಎಂಬ ಪದದಿಂದ ಬ್ರಹ್ಮನನ್ನೇ ತೆಗೆದು ಕೊಳ್ಳಬೇಕೆಂಬ ವಿಷಯದಲ್ಲಿ ಆಧಾರವಿಲ್ಲ. ಪ್ರಕೃತಿ ಎಂಬುದನ್ನು ಸ್ವೀಕರಿಸಿ ಜಗತ್ತು ಪ್ರಕೃತಿಯಿಂದ ಅಭಿನ್ನವಾದುದು ಹೀಗೆಂದು ಅರ್ಥವನ್ನೇಕೆ ಮಾಡಬಾರದು.

(e) ' ತತ್ ' ಪದದಿಂದ ' ಬ್ರಹ್ಮ ' ನನ್ನು ತೆಗೆದುಕೊಂಡರೂ ' ಅನನ್ಯತ್ವ ' ಈ ಪದವು ಜಗತ್ತಿಗೂ ' ತತ್ ' ಪದದಿಂದ ಬೋಧ್ಯನಾದ ಯಾವ ಬ್ರಹ್ಮನೋ ಆ ಬ್ರಹ್ಮನಿಗೂ ಅಭೇದವನ್ನು = ಭೇದಾಭಾವವನ್ನೇ ತಿಳಿಸಿ ಕೊಡುತ್ತದೆಯೇ ಹೊರತು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿ ಕೊಡುವುದಿಲ್ಲ

(f) ಭೇದಾಭೇದಗಳು ವಿರುದ್ಧವಾಗಿವೆ. ಆದುದರಿಂದ ಜಗತ್ತು ಬ್ರಹ್ಮನಿಂದ ಭಿನ್ನವೆಂದಾದರೂ ಆಗಬೇಕು; ಇಲ್ಲವೆ ಅಭಿನ್ನವೆಂದಾದರೂ ಆಗಬೇಕು ಜಗತ್ತು ಬ್ರಹ್ಮನಿಂದ ಭಿನ್ನವೂ ಅಲ್ಲ ಅಭಿನ್ನವೂ ಅಲ್ಲ ಎಂದು ಅದ್ವೈತಿಗಳು ಹೇಳುವದು ಕೂಡುವುದಿಲ್ಲ

(g) ತಮ್ಮ ಅದ್ವೈತ ಮತವು ಮಾಯಾಕಲ್ಪಿತವಾದುದರಿಂದ ಎಷ್ಟೆಷ್ಟು ಅನುಪಪತ್ತಿಗಳು ಉಂಟಾದರೂ ಆ ಅನುಪಪತ್ತಿಗಳು ತಮಗೆ ಭೂಷಣವೂ ಸುಹೃತ್ ( ಅನುಕೂಲವೇ ) ಆದುವು ಎಂದು ಅದ್ವೈತಿಗಳು ಹೇಳುತ್ತಾರೆ. ಇಂತಹ ಅನುಪಪನ್ನ ( ದುಷ್ಟ ) ಮತವನ್ನು ಸ್ವೀಕರಿಸುವುದು ಹೇಗೆ ಯೋಗ್ಯವಾಗುವುದು ?

ಇವೇ ಮೊದಲಾದ ಕಾರಣಗಳಿಂದ ' ತದನನ್ಯತ್ವಂ ' ಈ ಪ್ರತಿಜ್ಞಾ ಭಾಗವು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿ ಕೊಡುತ್ತದೆಂದು ಹೇಳುವದು ಅಯುಕ್ತವು.

(h) ' ಆರಂಭಣಂ ' ಈ ಪದವು ' ವಾಚಾರಂಭಣಂ ' ಈ ಪದದ ಉತ್ತರ ಭಾಗಾಗಿರುವುದರಿಂದ ಉತ್ತರಭಾಗವನ್ನು ಹಿಡಿದು ಶ್ರುತಿಯನ್ನು ಉದಾಹರಣೆಯಾಗಿ ತೋರಿಸುವ ಸಂಪ್ರದಾಯವು ಎಲ್ಲಿಯೂ ಇಲ್ಲದಿರುವುದರಿಂದ " ಆರಂಭಣ ಶಬ್ದಾದಿಭ್ಯಃ " ಈ ಹೇತುಭಾಗದಲ್ಲಿರುವ ಆರಂಭಣ ಶಬ್ದದಿಂದ "ವಾಚಾರಂಭಣಂ ವಿಕಾರೋ ನಾಮಧೇಯಂ" ಎಂಬ ಶ್ರುತಿಯನ್ನು ಸೂತ್ರವು ತಿಳಿಸಿ ಕೊಡುತ್ತದೆಂದು ಹೇಳುವದು ಅಸಂಗತವಾಗುತ್ತದೆ ಈ ಕಾರಣಗಳಿಂದ ' ತದನನ್ಯತ್ವಮಾರಂಭಣ ಶಬ್ದಾದಿಭ್ಯ ' ಎಂಬ ಸೂತ್ರವು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತದೆಯೆಂದು ಶಂಕರಾಚಾರ್ಯರು ಮಾಡಿದ ವ್ಯಾಖ್ಯಾನವು ಸರಿಯಾದುದಲ್ಲ. ಈ ವಿಷಯವನ್ನು ಕೋರ್ಟಿನವರು ಮನ್ನಿಸಬೇಕೆಂದು ಪ್ರಾರ್ಥನೆ.

---

## ವಾಚಾರಂಭಣ ಶ್ರುತ್ಯರ್ಥ ವಿಚಾರ.

ಪ್ರ. ವ.—" ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ " ಈ ವಾಕ್ಯವು ಏತಕ್ಕಾಗಿ ಪ್ರವೃತ್ತವಾಗಿದೆ ?

ಪ್ರ ಸಾ —" ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ " ಈ ಪೂರ್ವವಾಕ್ಯದಿಂದ ಕಾರಣರೂಪವಾದ ಮೃತ್ಪಿಂಡದ ಜ್ಞಾನದಿಂದ ಅದರ ಕಾರ್ಯರೂಪವಾದ ಘಟಾದಿಗಳ ಜ್ಞಾನವುಂಟಾಗುತ್ತದೆಂದು ಹೇಳಿದುದರ ಮೇಲೆ ಕಾರಣವಾದ ಮೃತ್ತಿಕೆಯು ಕಾರ್ಯವಾದ ಘಟಾದಿಗಳಿಂದ ಬೇರೆಯಾಗಿರಲೂ ಅದರ ಜ್ಞಾನದಿಂದ ಘಟಾದಿಗಳ ಜ್ಞಾನವು ಹೇಗೆ ಆಗಬಹುದು ಎಂಬ ಆಕ್ಷೇಪ ಬರಲು ಘಟವು ಮೃತ್ತಿಕೆಯಿಂದ ಅಭಿನ್ನವೇ ಆದುದೆಂದು ಉತ್ತರವನ್ನಿತ್ತರು. ಇದರ ಮೇಲೆ ಘಟ ಮತ್ತು ಮೃತ್ತಿಕೆ ಇವುಗಳಿಗೆ ಅಭೇದವಿದ್ದರೆ ಮೃತ್ತಿಕೆಯು ಕಾರಣವು, ಘಟಾದಿ ಪದಾರ್ಥವು ಕಾರ್ಯವು, ಎಂದು ಕಾರ್ಯಕಾರಣಭಾವವು ಹೇಗೆ ಕೂಡೀತೆಂಬ ಆಕ್ಷೇಪವು ಪುನಃ ಬರಲು, ಇದರ ಪರಿಹಾರಕ್ಕಾಗಿ " ವಾಚಾರಂಭಣಂ " ಎಂಬೀ ವಾಕ್ಯವು ಪ್ರವೃತ್ತವಾಗಿದೆ

ಪ್ರ. ವ.—ಈ ವಾಕ್ಯದಿಂದ ಮೇಲಿನ ಆಕ್ಷೇಪವು ಹೇಗೆ ಪರಿಹಾರವಾಯಿತು ?

ಪ್ರ. ಸಾ.—ಕಾರ್ಯವೆಂದು ಹೇಳಿಸಿಕೊಳ್ಳುವ ಘಟಾದಿ ಸಮಸ್ತ ವಿಕಾರ ಪದಾರ್ಥವು ಯಾವುದುಂಟೋ, ಅದು " ವಾಚಾರಂಭಣಂ "=ಮಿಥ್ಯಾಸುಳ್ಳಾದುದು, ' ನಾಮಧೇಯಂ ' ನಾಮಧೇಯಮಾತ್ರಂ=ಸುಳ್ಳು, ಮೃತ್ತಿಕಾರೂಪವಾದ ಉಪಾದಾನ ಕಾರಣವೊಂದೇ ಸತ್ಯವು, (ಕಾರ್ಯ

ವೆಂದು ಹೇಳಿಸಿಕೊಳ್ಳುವ ಘಟಾದಿ ಪದಾರ್ಥವು ಇದ್ದರೆ ಘಟಾದಿ ಕಾರ್ಯ, ಮೃತ್ತಿಕಾ ಕಾರಣ, ಎಂದು ಹೇಳುವುದು ಹೇಗೆ ಕೂಡುವದು ಎಂಬ ಶಂಕಾಕ್ಕೆ ಅವಕಾಶವಿರುವದು ಆ ಪದಾರ್ಥವು ಇಲ್ಲದಿದ್ದಾಗ್ಗೆ ಘಟಾದಿ ಪದಾರ್ಥವು ಕಾರ್ಯವು ಹೇಗೆ, ಮತ್ತು ಮೃತ್ತಿಕೆಯು ಕಾರಣವು ಹೇಗೆ ಎಂಬ ಶಂಕೆಗೆ ಅವಕಾಶವೇ ಇಲ್ಲ ಎಂದು ಈ ವಾಕ್ಯವು ತಿಳಿಸಿ ಕೊಡುತ್ತದೆ

ಪ್ರ. ವ.—ಈ ವಾಕ್ಯವು ಬ್ರಾಹ್ಮಣವರ್ಣಾದಿ ಸಮಸ್ತ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಹೇಗೆ ತಿಳಿಸುತ್ತದೆ ?

ಪ್ರ ಸಾ.—ಮೃತ್ತಿಕಾರೂಪಕಾರಣವು ಸತ್ಯವಾದುದು, ಮತ್ತು ಘಟಾದಿರೂಪ ಕಾರ್ಯವೆಲ್ಲವು ಸುಳ್ಳಾದುದೆಂದು ಪ್ರತಿಪಾದನೆ ಮಾಡಿರುವುದರಿಂದ, ಅದೇ ನ್ಯಾಯದಿಂದ ಕಾರಣರೂಪ ಬ್ರಹ್ಮನೊಬ್ಬನೇ ಸತ್ಯ ಮತ್ತು ಕಾರ್ಯ ( ವಿಕಾರ ) ರೂಪವಾದ ಎಲ್ಲಾ ಜಗತ್ತು ಸುಳ್ಳು ಎಂದು ಸಿದ್ಧವಾಗುತ್ತದೆ

---

## ಕ್ರಾಸ್ ಎಕ್ಸಾಮಿನೇಶನ್.

ವಾ ವ —ಈ ಶ್ರುತಿಯಲ್ಲಿ ಮಿಥ್ಯಾತ್ವವನ್ನು ತಿಳಿಸುವ ಪದವಾವುದು ?

ಪ್ರ ಸಾ —'ವಾಚಾರಂಭಣಂ' ಮತ್ತು 'ನಾಮಧೇಯಂ' ಎಂಬ ಎರಡು ಪದಗಳು

ವಾ ವ —'ವಾಚಾರಂಭಣಂ' 'ನಾಮಧೇಯಂ' ಈ ಎರಡು ಪದಗಳು ಮುಖ್ಯ ವೃತ್ತಿಯಿಂದ ( Primary meaning ) ಯಾವ ಅರ್ಥವನ್ನು ಬೋಧಿಸುತ್ತವೆ ?

ಪ್ರ ಸಾ —ವಾಚಾರಂಭಣಂ ಎಂಬ ಪದವು 'ಶಬ್ದದಿಂದ ಪ್ರತಿಪಾದ್ಯವು ( ತಿಳಿದು ಬರುವ )' ಎಂಬ ಅರ್ಥವನ್ನು ಬೋಧಿಸುತ್ತದೆ. ಮತ್ತು ನಾಮಧೇಯಂ ಎಂಬ ಪದವು 'ಹೆಸರು' ಎಂಬ ಅರ್ಥವನ್ನು ಹೇಳುತ್ತದೆ.

ವಾ ವ.— ಬ್ರಹ್ಮನು ಶಬ್ದಪ್ರತಿಪಾದ್ಯನೇ ಅಲ್ಲವೆ ?

ಪ್ರ. ಸಾ.—ಬ್ರಹ್ಮನು ಶಬ್ದಪ್ರತಿಪಾದ್ಯನೇ ಹೌದು

ವಾ ವ.—ಶಬ್ದಪ್ರತಿಪಾದ್ಯವೆಂದರೂ ಮಿಥ್ಯಾ ಎಂದರೂ ಒಂದೇ ಅಲ್ಲವೆ ?

ಪ್ರ ಸಾ.—ಒಂದೇ ಅಲ್ಲ.

ವಾ ವ — ಒಂದೇ ಎಂದು ಏಕೆ ಹೇಳಕೂಡದು ?

ಪ್ರ. ಸಾ.—ಶಬ್ದಪ್ರತಿಪಾದ್ಯ ಮತ್ತು ಮಿಥ್ಯಾ, ಇವೆರಡು ಒಂದೇ ಎಂದರೆ ಬ್ರಹ್ಮನೂ ಶಬ್ದಪ್ರತಿಪಾದ್ಯನು ಆಗಿದ್ದಾನೆ; ಆದುದರಿಂದ ಮಿಥ್ಯಾ ಆಗಬೇಕಾದೀತು. ಆದುದರಿಂದ ಇವೆರಡು ಒಂದೇ ಎಂದು ಹೇಳಕೂಡದು

ವಾ. ವ —ಕಾರ್ಯ ಪದಾರ್ಥವು ' ವಾಚಾರಂಭಣಂ '' ಶಬ್ದದಿಂದ ಪ್ರತಿಪಾದ್ಯ' ಎಂದು ಇಷ್ಟನ್ನೇ ಶ್ರುತಿಯು ತಿಳಿಸಿ ಕೊಡುತ್ತಿರಲು ನೀವು ಕಾರ್ಯ ಪದಾರ್ಥವು ಮಿಥ್ಯಾ ಎಂದು ಶ್ರುತಿಯು ಹೇಳುತ್ತದೆಂದು ಹೇಗೆ ಹೇಳುತ್ತೀರಿ?

ಪ್ರ ಸಾ —' ವಾಚಾರಂಭಣಂ ' ಈ ಪದದ ಮುಂದೆ ' ಮಾತ್ರ ' ಎಂಬ ಪದ ವನ್ನು ಹಚ್ಚಿಕೊಂಡರೆ ವಾಚಾರಂಭಣ ಮಾತ್ರಂ = ಕೇವಲ ಶಬ್ದ ಪ್ರತಿಪಾದ್ಯವೇ, (ಶಬ್ದದಿಂದ ತಿಳಿದು ಬರುತ್ತದೇ) ಹೊರತು ಪದಾರ್ಥ ವಿಲ್ಲ, ಎಂದು ಅರ್ಥವಾಗುತ್ತದಾದುದರಿಂದ ವಾಚಾರಂಭಣ ಶಬ್ದವು ಕಾರ್ಯಕ್ಕೆ ಮಿಥಾತ್ವವನ್ನು ಹೇಳುತ್ತದೆಂಗು ನಾವು ಹೇಳುತ್ತೇವೆ

ವಾ. ವ.—' ನಾಮಧೇಯಂ ' ಈ ಪದದಿಂದ ಕಾರ್ಯವಾದ ಪದಾರ್ಥಕ್ಕೆ ಮಿಥ್ಯಾತ್ವವನ್ನು ಹೇಗೆ ಹೇಳುತ್ತೀರಿ ?

ಪ್ರ. ಸಾ.—' ನಾಮಧೇಯಂ ' ಎಂಬ ಈ ಪದಕ್ಕೂ ' ಮಾತ್ರ ' ಎಂಬ ಪದ ವನ್ನು ಸೇರಿಸಿಕೊಂಡರೆ ನಾಮಧೇಯ ಮಾತ್ರಂ = ಕೇವಲ ಹೆಸರೇ ವಸ್ತುವಿಲ್ಲ ಎಂಬ ಅರ್ಥವಾಗುವುದರಿಂದ ನಾಮಧೇಯಂ ಈ ಪದವು ಕಾರ್ಯಕ್ಕೆ ಮಿಥ್ಯಾತ್ವವನ್ನು ಹೇಳುತ್ತದೆಂದು ನಾವು ಹೇಳುತ್ತೇವೆ

ವಾ. ವ —" ಸತ್ಯಂ ಜ್ಞಾನಮನಂತಂ ಬ್ರಹ್ಮ " ಈ ಶ್ರುತಿಯು ಬ್ರಹ್ಮನಿಗೆ ಮಿಥ್ಯಾತ್ವವನ್ನು ತಿಳಿಸಿ ಕೊಡುತ್ತದಲ್ಲವೆ ?

ಪ್ರ ಸಾ — ಈ ಶ್ರುತಿಯಲ್ಲಿ ಬ್ರಹ್ಮನಿಗೆ ಮಿಥ್ಯಾತ್ವವನ್ನು ತಿಳಿಸುವ ಪದವೇ ಇಲ್ಲ ದುದರಿಂದ ' ಸತ್ಯಂ ಜ್ಞಾನಂ ' ಈ ಶ್ರುತಿಯು ಬ್ರಹ್ಮನಿಗೆ ಮಿಥ್ಯಾತ್ವ ವನ್ನು ತಿಳಿಸಿ ಕೊಡುವುದಿಲ್ಲ

ವಾ. ವ —ಈ ಶ್ರುತಿಯಲ್ಲಿ ' ನ ' ಎಂಬ ಪದವನ್ನು ಸೇರಿಸಿದರೆ, ' ಬ್ರಹ್ಮ ನ ಸತ್ಯಂ ' ಬ್ರಹ್ಮನು ಸತ್ಯವಲ್ಲ, ಸುಳ್ಳು ಎಂಬ ಅರ್ಥವನ್ನು ಹೇಳುತ್ತದೆಯಷ್ಟೆ ?

ಪ್ರ ಸಾ.— ಶ್ರುತಿಯಲ್ಲಿಲ್ಲದ ' ನ ' ಎಂಬ ಪದವನ್ನು ಸೇರಿಸಿಕೊಂಡು ಅರ್ಥ ವನ್ನು ಮಾಡಿದರೆ ಆ ಅರ್ಥವು ಶ್ರುತ್ಯರ್ಥವಾಗಲಾರದು. ಆದುದರಿಂದ ' ಸತ್ಯಂ ' ಈ ಶ್ರುತಿ ಬ್ರಹ್ಮನಿಗೆ ಮಿಥ್ಯಾತ್ವವನ್ನು ಪ್ರತಿಪಾದಿಸುತ್ತ ದೆಂದು ಹೇಳಕೂಡದು.

ವಾ. ವ —ಅದೇ ಪ್ರಕಾರವಾಗಿಯೇ ' ವಾಚಾರಂಭಣಂ, ' ' ನಾಮಧೇಯಂ ' ಈ ಎರಡು ಪದಗಳೇ ಶ್ರುತಿಯಲ್ಲಿವೆ. ಮಾತ್ರ ಎಂಬ ಪದದಿಂದ ಆ ಎರಡು ಪದಗಳು ಯುಕ್ತವಾಗಿಲ್ಲ ಎಂದಮೇಲೆ ವಾಚಾರಂಭಣ ಮಾತ್ರಂ, ನಾಮಧೇಯ ಮಾತ್ರಂ ಹೀಗೆ ಎರಡು ಮಾತ್ರ ಪದಗಳನ್ನು ಸೇರಿಸಿಕೊಂಡು ಜಗತ್ತು ಸುಳ್ಳು ಎಂದು ನೀವು ಮಾಡಿದ ಅರ್ಥವು ಶ್ರುತ್ಯರ್ಥವಾಗುವುದಿಲ್ಲವಲ್ಲ ?

ಪ್ರ. ಸಾ.—ಉತ್ತರವಿಲ್ಲ.

ವಾ ವ.—ನಿಮ್ಮ ಅದ್ವೈತ ಮತದಲ್ಲಿ ಮೃತ್ತಿಕೆ ಸತ್ಯವೋ ಮಿಥ್ಯೆಯೋ ?

ಪ್ರ. ಸಾ — ಮೃತ್ತಿಕೆ ಸುಳ್ಳವೆ.

ವಾ. ವ — ' ಮೃತ್ತಿಕೇತ್ಯೇವ ಸತ್ಯಂ ' ಈ ವಾಕ್ಯವು ಮೃತ್ತಿಕೆಗೆ ಸತ್ಯತ್ವವನ್ನು ಹೇಳುತ್ತದೆಯೋ ಇಲ್ಲವೋ ?

ಪ್ರ. ಸಾ — ಈ ಶ್ರುತಿಗೆ ಮೃತ್ತಿಕೆಗೆ ಸತ್ಯತ್ವವನ್ನು ತಿಳಿಸುವ ತಾತ್ಪರ್ಯವಿಲ್ಲ

ವಾ ವ — ಹಾಗಾದರೆ ಶ್ರುತಿಯು ' ಮೃತ್ತಿಕೇತ್ಯೇವ ಸತ್ಯಂ ' ಹೀಗೆಂದೇಕೆ ಹೇಳುತ್ತದೆ ?

ಪ್ರ. ಸಾ — ಕಾರ್ಯವಾದ ಜಗತ್ತು ಸುಳ್ಳಾದುದು, ಕಾರಣವಾದ ಬ್ರಹ್ಮನು ಸತ್ಯನು, ಹೀಗೆಂದು ತಿಳಿಸುವದಕ್ಕಾಗಿ ಈ ಶ್ರುತಿಯು ಕಾರ್ಯವಾಗಿರುವ ಘಟಾದಿ ಸಮಸ್ತ ಪದಾರ್ಥಗಳು ಸುಳ್ಳಾದುವುಗಳು, ಕಾರಣಭೂತ ವಾದ ಮೃತ್ತಿಕೆಯೇ ಸತ್ಯವೆಂದು ತಿಳಿಸಿಕೊಡುತ್ತದೆ. ಆದರೂ ಮೃತ್ತಿ ಕೆಯು ಸತ್ಯತ್ವವನ್ನು ತಿಳಿಸಿ ಕೊಡುವ ವಿಷಯದಲ್ಲಿ ಶ್ರುತಿಗೆ ತಾತ್ಪರ್ಯ ವಿಲ್ಲ ಮತ್ತು ಮೃತ್ತಿಕೆಗೆ ಸತ್ಯತ್ವವು ಕೂಡುವುದೂ ಇಲ್ಲ

ವಾ ವ — " ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ " ಈ ಶ್ರುತಿಯಲ್ಲಿ ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವ ಪದವೇ ಇಲ್ಲ. ಕಾರಣಭೂತವಾದ ಮೃತ್ತಿಕೆಯು ಸತ್ಯತ್ವವನ್ನು ತಿಳಿ ಸುವ ವಿಷಯದಲ್ಲಿ ತಾತ್ಪರ್ಯವೂ ಇಲ್ಲ ಸತ್ಯತ್ವವನ್ನು ಹೇಳಿದರೆ ಕೂಡುವುದೂ ಇಲ್ಲ, ಹೀಗೆಂದು ನೀವು ಅಂಗೀಕಾರ ಮಾಡಿದುದರ ಮೇಲಿಂದ ಈ ವಾಕ್ಯವು ಕಾರ್ಯಭೂತವಾದ ಘಟವು ಮಿಥ್ಯಾ, ಕಾರಣ ಭೂತವಾದ ಮೃತ್ತಿಕೆಯು ಸತ್ಯವು ಹೀಗೆಂದು ತಿಳಿಸುತ್ತ ಅದೇ ನ್ಯಾಯದಿಂದ ಕಾರಣನಾದ ಬ್ರಹ್ಮನು ಸತ್ಯ ಕಾರ್ಯವಾದ ಜಗತ್ತು ಮಿಥ್ಯಾ=ಸುಳ್ಳು ಎಂಬುದನ್ನು ತಿಳಿಸುತ್ತದೆಂದು ಹೇಳುವುದು ಹೇಗೆ ಕೂಡುವುದು ?

ಪ್ರ. ಸಾ. — ಉತ್ತರವಿಲ್ಲ.

ವಾ. ವ. — ಮೈ ಲಾರ್ಡ ಜಗತ್ತು ಮಿಥ್ಯೆ ( ಮೂರೂ ಕಾಲದಲ್ಲಿ ಇಲ್ಲದುದು ) ಬ್ರಹ್ಮನೊಬ್ಬನೇ ಸತ್ಯ ಇದ್ದಾನೆಂಬೀ ವಿಷಯದಲ್ಲಿ ಅದ್ವೈತಿಗಳು ' ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ' ಈ ಶ್ರುತಿಯು ಆಧಾರ ವೆಂದು ಹೇಳುತ್ತಾರೆ ಪರಂತು ಅದು ಯುಕ್ತವಲ್ಲ ಏಕೆಂದರೆ —

( a ) ಈ ಶ್ರುತಿಯಲ್ಲಿ ಜಗತ್ತು ಮಿಥ್ಯಾಯೆಂದು ಹೇಳುವ ಪದವೇ ಇಲ್ಲ.

( b ) " ವಾಚಾರಂಭಣಂ " ಈ ಪದದ ಮುಂದೆ " ಮಾತ್ರ " ಪದ ವನ್ನು ಸೇರಿಸಿ ಕೊಂಡರೆ " ವಾಚಾರಂಭಣ ಮಾತ್ರಂ " ಇದರ ಅರ್ಥವು ಶಬ್ದ ಪ್ರತಿಪಾದ್ಯವೇ ಎಂದು ಆಗುತ್ತದೆ ಹೊರತು ವಸ್ತುವೇ ಇಲ್ಲ ಮಿಥ್ಯಾ ಅದೆ ಎಂದು ಶ್ರುತಿಯಲ್ಲಿಯ ವಾಚಾರಂಭಣಂ ಎಂಬ ಪದದ ಅರ್ಥವಾಗುತ್ತದೆಂದು ಹೇಳು ವದು ಯುಕ್ತವಲ್ಲ ಅದರಂತೆಯೆ ' ನಾಮಧೇಯಂ ' ಎಂಬ ಶಬ್ದದ ಮುಂದೆ ' ಮಾತ್ರ ' ಪದವನ್ನು ಸೇರಿಸಿ ಕೊಂಡರೆ ಹೆಸರೇ ಅದೆ ಹೊರತು ವಸ್ತುವಿಲ್ಲ. ಹೀಗೆ

ನಾಮಧೇಯಂ’ ಪದದ ಅರ್ಥವೆಂದು ಹೇಳುವದು ಸಹ ಯುಕ್ತವಲ್ಲ. ಶ್ರುತಿಯಲ್ಲಿಯ ಪದಗಳ ಮುಂದೆ ಬೇಕಾದ ಪದವನ್ನು ಸೇರಿಸಿಕೊಂಡು ಮಾಡಿದ ಅರ್ಥವು ಶ್ರುತ್ಯರ್ಥವಾಗುವುದಾದರೆ ‘ ಸತ್ಯಂ ಜ್ಞಾನಮನಂತಂ ಬ್ರಹ್ಮ ’ ಈ ಶ್ರುತಿಯಲ್ಲಿ ಸಹ ಸತ್ಯಾದಿ ಪದಗಳ ಹಿಂದೆ ‘ ನ ನ ನ ’ ಎಂಬ ಪದಗಳನ್ನು ಸೇರಿಸಿಕೊಂಡು ಮಾಡಿದ ಅರ್ಥ ‘ ಬ್ರಹ್ಮ ನ ಸತ್ಯಂ ’ = ಬ್ರಹ್ಮ ಸತ್ಯನಲ್ಲ, ‘ ಬ್ರಹ್ಮ ನ ಜ್ಞಾನಂ’= ಬ್ರಹ್ಮನು ಜ್ಞಾನರೂಪನಲ್ಲ ‘ ಬ್ರಹ್ಮ ನ ಅನಂತಂ ’ = ಬ್ರಹ್ಮನು ಅಪರಿಚ್ಛಿನ್ನನು ಅಲ್ಲ ಇದು ಸಹ ಶ್ರುತ್ಯರ್ಥವಾಗಬೇಕಾಗುವದು ಆದುದರಿಂದ ಶ್ರುತಿಯಲ್ಲಿ ಇಲ್ಲದ ಹೊಸ ಪದಗಳನ್ನು ಸೇರಿಸಿಕೊಂಡು ಮಾಡಲ್ಪಡುವ ಅರ್ಥವು ಶ್ರುತ್ಯರ್ಥವೆಂದು ತಿಳಿಯಬಾರದೆಂಬುದು ಪ್ರತಿವಾದಿಯು ಒಪ್ಪುತ್ತಾನಾದ್ದರಿಂದ ಈ ಶ್ರುತಿಯು ಕಾರ್ಯ ರೂಪ ಘಟಾದಿ ಪದಾರ್ಥಗಳಿಗೆ ಮಿಥ್ಯಾತ್ವ ಪ್ರತಿಪಾದಕವಾಗಲಾರದು

( c ) ಉಪಾದಾನ ಕಾರಣವಾದ ಮೃತ್ತಿಕೆಗೆ ಸತ್ಯತ್ವವನ್ನು ಬೋಧಿಸುವಂಥ † ‘ ಸತ್ಯಂ ’ ಎಂಬ ಪದವು ಶ್ರುತಿಯಲ್ಲಿದ್ದಾಗ್ಯೂ ಮೃತ್ತಿಕೆಯು ಬ್ರಹ್ಮನಿಂದ ಬೇರೆ ( ಬ್ರಹ್ಮಾತಿರಿಕ್ತ ) ಇದ್ದರಿಂದ ಅದ್ವೈತ ಮತದಲ್ಲಿ ಅದು ಸುಳ್ಳೆಂದು ಹೇಳಲ್ಪಡುವದರಿಂದ ಮೃತ್ತಿಕೆಯು ಸತ್ಯವೆಂದು ಹೇಳುವ ‘ ಸತ್ಯಂ ’ ಎಂಬ ಪದವು ಶ್ರುತಿಯಲ್ಲಿದ್ದರೂ ಆ ರೀತಿ ಹೇಳುವದರಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲೆಂದು ಹೇಳುತ್ತಾರೆ ಆದುದರಿಂದ ಮೃತ್ತಿಕೆಯ ಕಾರ್ಯವಾದ ಘಟಾದಿಗಳು ಸುಳ್ಳು ಕಾರಣವಾದ ಮೃತ್ತಿಕೆಯು ಸತ್ಯ ಎಂದು ಶ್ರುತಿಯು ಹೇಳುವದಿಲ್ಲ ಅದ್ವೈತ ಮತದಲ್ಲಿ ಮೃತ್ತಿಕೆಯೂ ಕಾರ್ಯವು ಘಟಾದಿಗಳೂ ಕಾರ್ಯವು ಆದ್ದರಿಂದ ಮೃತ್ತಿಕೆಯು ಸತ್ಯವು ಘಟಾದಿಗಳು ಸುಳ್ಳು ಎಂದು ಹೇಳುವದು ಕೂಡುವದಿಲ್ಲ.

( d ) ಮೃತ್ತಿಕಾರೂಪ ಕಾರಣವು ಸತ್ಯವು ಮತ್ತು ಘಟಾದಿರೂಪ ಕಾರ್ಯವು ಸುಳ್ಳು ಹೀಗೆ ಆ ಶ್ರುತಿಯು ಹೇಳುತ್ತದೆಂದು ತಿಳಿದರೆ ಬ್ರಹ್ಮನಿಂದ ಬೇರೆಯಾದ ಮೃತ್ತಿಕೆಯು ಸತ್ಯವಾಗುವದು, ಹೀಗಾದಲ್ಲಿ ಬ್ರಹ್ಮನೊಬ್ಬನೆ ಸತ್ಯ ಉಳಿದ ಎಲ್ಲ ಜಗತ್ತು ಮಿಥ್ಯಾ ಎಂಬ ಅದ್ವೈತಿಗಳ ಹೇಳಿಕೆಯು ಸಿದ್ಧವಾಗುವದಿಲ್ಲ.

( e ) ಜಗತ್ತು ಮಿಥ್ಯೆ (ಮೂರೂ ಕಾಲದಲ್ಲಿಲ್ಲದುದು) ಎಂದು ಬೌದ್ಧರು ಹೇಳುತ್ತಿರಲು ಜಗತ್ತು ಪ್ರಮಾಣಸಿದ್ಧವಾದ್ದರಿಂದ ಅದರ ಅಭಾವ ಹೇಳುವದು ಯುಕ್ತವಲ್ಲವೆಂದು ‘ ನಾಭಾವ ಉಪಲಬ್ಧೇಃ ’ ಈ ಸೂತ್ರದ ಭಾಷ್ಯದಲ್ಲಿ ಬೌದ್ಧ ಮತದ ಮೇಲೆ ದೂಷಣವನ್ನು ಶಂಕರಾಚಾರ್ಯರು ಹೇಳಿದ್ದಾರೆ ಈಗ ಈ ಶ್ರುತಿಯು ಸಕಲ ಜಗತ್ತು ಮಿಥ್ಯೆಯೆಂದು ಹೇಳುತ್ತದೆಂದು ಒಪ್ಪುತ್ತಾರೆ ಈ ಪ್ರಕಾರ ವಿರುದ್ಧ ಹೇಳುವದು ಯುಕ್ತವಲ್ಲ ಎಂಬುದನ್ನು *ಕೋರ್ಟಿನವರು ಗಮನಿಸಬೇಕು

† ‹‹ ಮೃತ್ತಿಕೇತಿ '' ಇದರಲ್ಲಿ ‘ ಮೃತ್ತಿಕಾ ’ ಎಂಬ ಪದದ ಮುಂದೆ ‘ ಇತಿ ’ ಪದವಿದ್ದು ಅದು ಮೃತ್ತಿಕಾ ಎಂಬ ಪದಕ್ಕೆ ಸಂಬಂಧಿಸುತ್ತದೆ. ಅದರ ಅರ್ಥವು ಮೃತ್ತಿಕೆಯೇ ಎಂದು ಆಗುತ್ತದೆ. ಮೃತ್ತಿಕಾ ಸುಳ್ಳು ಎಂದು ಅರ್ಥವಾಗುವದಿಲ್ಲ.

* ಇದು ಶಂಕರಾಚಾರ್ಯರ ಸ್ವೋಕ್ತಿಗೆ ವಿರುದ್ಧವಾಗುತ್ತದೆಂಬ ವಿಷಯ ಎಲ್ಲರ ಲಕ್ಷ್ಯದಲ್ಲಿ ತರತಕ್ಕದ್ದು

## “ ಐತದಾತ್ಮ್ಯಮಿದಂ ಸರ್ವಂ ” ಈ ಶ್ರುತಿಯ ವಿಚಾರಣೆ.

ಪ್ರ ವ.—ಶಾಸ್ತ್ರಿಗಳೇ ! ನಿಮ್ಮ ಶಂಕರಾಚಾರ್ಯರು ಸೂತ್ರದ ಅರ್ಥವನ್ನು ಹೇಳುವಾಗ ಆಧಾರವೆಂದು ಒಪ್ಪಿಕೊಂಡ ಎರಡನೆಯ “ ಐತದಾತ್ಮ್ಯಂ ” ಎಂಬ ಶ್ರುತಿಯ ಅರ್ಥವೇನು ?

ಪ್ರ. ಸಾ.—ಸರ್ವಂ= ಈ ಎಲ್ಲಾ ಜಗತ್ತು ‘ ಐತದಾತ್ಮ್ಯಂ ’=ಸತ್ ನಾಮಕನಾದ ಪರಮಾತ್ಮನೇ ಆತ್ಮನಾಗಿ ಉಳ್ಳದು. ತತ್=ಆ ಪರಮಾತ್ಮನು ಸತ್ಯಂ=ಪರಮಾರ್ಥವಾಗಿ ಸತ್ಯವಾಗಿದ್ದಾನೆ. ‘ ಸಃ ’= ಆ ಪರಮಾತ್ಮನು ಆತ್ಮಾ= ಪ್ರತ್ಯಕ್ ಸ್ವರೂಪನು. ತ್ವಂ=ನೀನು ‘ ತತ್ ’ = ಆ ಬ್ರಹ್ಮರೂಪನು ಅಸಿ=ಇರುವೆ, ಹೀಗೆಂದು ಅರ್ಥವಿರುವುದರಿಂದ ಜಗತ್ತಿಗೆ ಮಿಥ್ಯಾತ್ವವು ಸಿದ್ಧವಾಗುತ್ತದೆ.

---

## ಕ್ರಾಸ್ ಎಕ್ಸಾಮಿನೇಶನ್

ವಾ ವ —ಈ ದೊಡ್ಡ ವಾಕ್ಯದಲ್ಲಿ ಅವಾಂತರ ವಾಕ್ಯಗಳೆಷ್ಟಿವೆ ?

ಪ್ರ. ಸಾ.—ನಾಲ್ಕು ಉಂಟು

ವಾ ವ —ಆ ನಾಲ್ಕು ಹೇಳಿ.

ಪ್ರ. ಸಾ —(೧) ಐತದಾತ್ಮ್ಯಮಿದಂ ಸರ್ವಂ, (೨) ತತ್ ಸತ್ಯಂ, (೩) ಸ ಆತ್ಮಾ, (೪) ತತ್ತ್ವಮಸಿ.

ವಾ ವ —ಈ ನಾಲ್ಕು ವಾಕ್ಯಗಳಲ್ಲಿ ಯಾವ ವಾಕ್ಯದಿಂದ ಜಗತ್ತಿಗೆ ಮಿಥ್ಯಾತ್ವವು ಸಿದ್ಧಿಸುತ್ತದೆ ?

ಪ್ರ. ಸಾ —ತತ್ ಸತ್ಯಂ ’ ಈ ವಾಕ್ಯದಿಂದ ಮಿಥ್ಯಾತ್ವವು ಸಿದ್ಧವಾಗುತ್ತದೆ

ವಾ ವ —ಈ ವಾಕ್ಯದ ಅರ್ಥವೇನು ?

ಪ್ರ ಸಾ.—ತತ್ ಏವ=ಸನ್ನಾಮಕ ಪರಮಾತ್ಮನೇಯೆ ಸತ್ಯಂ=ಪಾರಮಾರ್ಥಿಕ ಸತ್ಯ, ಬೇರೆ ಪದಾರ್ಥಗಳು ಪಾರಮಾರ್ಥಿಕ ಸತ್ಯವಾದುವುಗಳಲ್ಲ ಎಂದರೆ ಮಿಥ್ಯಾ ಎಂದು ಅರ್ಥವು,

ವಾ. ವ —ಈ ಶ್ರುತಿಯಲ್ಲಿ ‘ ಏವ ’ ಎಂಬ ಪದವಿದೆಯೊ ?

ಪ್ರ. ಸಾ.—ಶ್ರುತಿಯಲ್ಲಿ ‘ ಏವ ’ ಎಂಬ ಪದವಿಲ್ಲ

ವಾ. ವ.—‘ಏವ ’ ಎಂಬ ಪದವಿಲ್ಲದಾಗ್ಗೆ ಈ ವಾಕ್ಯದ ಅರ್ಥವೇನೆಂದಾಗುತ್ತದೆ ?

ಪ್ರ. ಸಾ—ತತ್ = ಬ್ರಹ್ಮನು, ಸತ್ಯಂ= ಸತ್ಯವೆಂದು ಅರ್ಥವಾಗುತ್ತದೆ.

ವಾ. ವ.—ಶ್ರುತಿಯಲ್ಲಿರುವ ಪದಗಳಿಂದ ಜಗತ್ತು ಮಿಥ್ಯೆಯಾದುದು ಎಂದು ಅರ್ಥವಾಗುವುದಿಲ್ಲವಷ್ಟೆ ?

ಪ್ರ. ಸಾ —' ತತ್ ಸತ್ಯಂ ' ಈ ಎರಡು ಪದಗಳಿಂದಲೇ ಜಗತ್ತು ಸುಳ್ಳಾದುದು ಎಂದು ಅರ್ಥವಾಗುವದಿಲ್ಲ. ಆದರೂ ಇದರ ಮುಂದೆ ' ಏವ ಎಂಬ ಪದವನ್ನು ಹಾಕಿಕೊಂಡು 'ತತ್ ಏವ'=ಆ ಬ್ರಹ್ಮನೇ ಸತ್ಯ, ಬ್ರಹ್ಮನಿಂದ ಬೇರೆಯಾದ ಜಗತ್ತು ಮಿಥ್ಯಾ (ಸುಳ್ಳು) ಎಂದು ಅರ್ಥ ಮಾಡುತ್ತೇವೆ

ವಾ ವ.—ನಿಮ್ಮ ಕೈಯಿಂದ ' ಏವ ' ಎಂಬ ಪದವನ್ನು ಹೊಸದಾಗಿ ಸೇರಿಸಿಕೊಂಡು ಹೀಗೆ ಅರ್ಥವನ್ನೇಕೆ ಮಾಡುತ್ತೀರಿ ?

ಪ್ರ ಸಾ —ನಮ್ಮ ಶಂಕರಾಚಾರ್ಯರು ಹೀಗೆ ಅರ್ಥಮಾಡಿದ್ದಾರೆಯಾದುದರಿಂದ ನಾವೂ ಹಾಗೆ ಮಾಡುತ್ತೇವೆ.

ವಾ ವ —ಶ್ರುತಿಯಲ್ಲಿಲ್ಲದ ' ಏವ ' ಎಂಬ ಪದವನ್ನು ಸೇರಿಸಿಕೊಂಡು ' ಜಗತ್ತು ಮಿಥ್ಯಯಾದುದು ' ಎಂದು ಅರ್ಥ ಮಾಡಿಕೊಂಡರೆ, ಮುಂಚೆಯೇ ಹೇಳಿದಂತೆ " ಸತ್ಯಂ ಜ್ಞಾನಮನಂತಂ ಬ್ರಹ್ಮ " ಈ ವಾಕ್ಯದಲ್ಲಿಯೂ ಕೂಡ ' ನ ' ಎಂಬ ಪದವನ್ನು ಸೇರಿಸಿಕೊಂಡು ' ಬ್ರಹ್ಮ ನ ಸತ್ಯಂ ' ಬ್ರಹ್ಮನು ಸತ್ಯನಲ್ಲ, ' ನ ಜ್ಞಾನಂ ' ಜ್ಞಾನರೂಪನಲ್ಲ ಎಂದು ಅರ್ಥ ಮಾಡಬಹುದಷ್ಟೆ ?

ಪ್ರ ಸಾ —ಉತ್ತರವಿಲ್ಲ

ವಾ ವ – (To the Court) ಶ್ರುತಿಯಲ್ಲಿಲ್ಲದ ' ಏವ ' ಎಂಬ ಪದವನ್ನು ಸೇರಿಸಿಕೊಂಡು ಜಗತ್ತು ಸುಳ್ಳಾದುದು ಎಂದು ಅರ್ಥವನ್ನು ಮಾಡುತ್ತಾರೆ ಅದು ಶ್ರುತ್ಯರ್ಥವಲ್ಲ ಇದನ್ನು ಕೋರ್ಟಿನವರು ಗಮನಿಸಬೇಕು.

ವಾ ವ —ಶಾಸ್ತ್ರಿಗಳೇ' ತತ್ವಮಸಿ ಈ ನಾಲ್ಕನೇಯ ವಾಕ್ಯದ ಅರ್ಥವೇನು ?

## ಕೋರ್ಟಿನ ಆರ್ಡರ.

ಈಗ ಈ ವಿಚಾರಣೆಯ ಅವಶ್ಯಕತೆ ಇಲ್ಲ ಜೀವನು ಪರಮಾತ್ಮನಿಂದ ಭಿನ್ನನೋ, ಅಭಿನ್ನನೋ ಎಂಬ ಇಸ್ಯುವಿನ ವಿಚಾರಣೆಯ ಸಂದರ್ಭದಲ್ಲಿ ಅದನ್ನು ವಿಚಾರಿಸಬಹುದು

---

## ' ಇದಂ ಸರ್ವಂ ಯದಯಮಾತ್ಮಾ ' ಈ ಶ್ರುತಿಯ ವಿಚಾರಣೆ.

ಪ್ರ. ವ —" ಇದಂ ಸರ್ವಂ ಯದಯಮಾತ್ಮಾ ' ಈ ಶ್ರುತಿಯ ಅರ್ಥವೇನು ?

ಪ್ರ ಸಾ.—ಇದಂ ಸರ್ವಂ=ಈ ಎಲ್ಲಾ ಪದಾರ್ಥಗಳು, ಅಯಂ ಆತ್ಮಾ= ಪರಮಾತ್ಮನಲ್ಲಿ ಕಲ್ಪಿತವಾದುವುಗಳು

---

# ಕ್ರಾಸ್ ಎಕ್ಸಾಮಿನೇಶನ್.

ವಾ. ವ —ಶ್ರುತಿಯಲ್ಲಿರುವ ಆತ್ಮಾ ಎಂಬ ಪದಕ್ಕೆ ಆತ್ಮನಲ್ಲಿ ಕಲ್ಪಿತವಾದುದು, ಎಂದು ಮಾಡಿದ ಅರ್ಥವು ಮುಖ್ಯಾರ್ಥವೆ? ಇಲ್ಲವೆ ಅಮುಖ್ಯಾರ್ಥವೆ?

ಪ್ರ ಸಾ —ಅಮುಖ್ಯಾರ್ಥವೇ

ವಾ ವ —" ಇದಂ ಸರ್ವಂ ಯದಯಮಾತ್ಮಾ " ಈ ವಾಕ್ಯದ ಮುಖ್ಯಾರ್ಥವೇನು ?

ಪ್ರ ಸಾ.—ಈ ಎಲ್ಲಾ ಜಗತ್ತು, ಅಯಮಾತ್ಮಾ=ಈ ಪರಮಾತ್ಮನೇ

ವಾ. ವ.—ಈ ಮುಖ್ಯಾರ್ಥವನ್ನೇಕೆ ಬಿಟ್ಟಿರಿ?

ಪ್ರ ಸಾ —ಈ ಜಡವಾದ ಪ್ರಪಂಚವು ಚೇತನನಾದ ಬ್ರಹ್ಮನಿಂದ ಅಭಿನ್ನವಾಗುವುದಿಲ್ಲವೆಂದು

ವಾ ವ.—ಆತ್ಮ ಶಬ್ದದ ಮುಖ್ಯಾರ್ಥವನ್ನು ಬಿಟ್ಟಮೇಲೆ ಆತ್ಮನಲ್ಲಿ ಕಲ್ಪಿತವಾದುದು ಎಂದೇ ಅಮುಖ್ಯಾರ್ಥವನ್ನೇಕೆ ಮಾಡಿಕೊಳ್ಳಬೇಕು? ಆತ್ಮಾಧೀನವೆಂದೇಕೆ ಅಮುಖ್ಯಾರ್ಥವನ್ನು ಮಾಡಿಕೊಳ್ಳಬಾರದು ?

ಪ್ರ ಸಾ—ಉತ್ತರವಿಲ್ಲ

ವಾ. ವ.—ಈ ವಾಕ್ಯದ ಪೂರ್ವದಲ್ಲಿರುವ † ವಾಕ್ಯದ ಅರ್ಥವನ್ನು ಹೇಳಿ.

ಪ್ರ ಸಾ —ಬ್ರಹ್ಮ = ಬ್ರಾಹ್ಮಣವರ್ಣವನ್ನು ಯಃ = ಯಾವನಾದರೂ ಆತ್ಮನಃ ಅನ್ಯತ್ರ = ಪರಮಾತ್ಮನನ್ನು ಬಿಟ್ಟು, ಸ್ವತಂತ್ರವಾಗಿ § ತಮ್ಮ ಸತ್ತಾದಿಂದಲೇ ಇರುವದೆಂದು ಯಾರು ತಿಳಿಯುತ್ತಾರೋ ತಂ = ಅವನನ್ನು, ಬ್ರಹ್ಮ ಬ್ರಾಹ್ಮಣ ವರ್ಣವು, ಪರಾದಾತ್ = ಶ್ರೇಯೋಮಾರ್ಗದಿಂದ ಭ್ರಷ್ಟನನ್ನಾಗಿ ಮಾಡುತ್ತದೆ, ಇದೇ ಪ್ರಕಾರವಾಗಿ, ಕ್ಷತ್ರಿಯ ವರ್ಣ ಲೋಕ, ವೇದ, ಭೂತಗಳು, ಸಕಲ ಪದಾರ್ಥಗಳು ಪರಮಾತ್ಮನನ್ನು ಬಿಟ್ಟು ಸ್ವಾತಂತ್ರ್ಯದಿಂದಲೇ ಇರುತ್ತವೆ ಎಂದು ಯಾರು ತಿಳಿಯುತ್ತಾರೆಯೋ ಆಯಾ ಕ್ಷತ್ರಿಯಾದಿ ಪದಾರ್ಥಗಳು ಸ್ವಾತಂತ್ರ್ಯ ತಿಳಿಯುವವನನ್ನು ತಿರಸ್ಕರಿಸುತ್ತವೆ ಎಂದು ಅರ್ಥವು.

---

† " ಬ್ರಹ್ಮ ತಂ ಪರಾದಾತ್ ಯೋಽನ್ಯತ್ರಾತ್ಮನೋ ಬ್ರಹ್ಮ ವೇದ। ಕ್ಷತ್ರಂ ತಂ ಪರಾದಾತ್ ಯೋಽನ್ಯತ್ರಾತ್ಮನಃ ಕ್ಷತ್ರಂ ವೇದ। ಲೋಕಾಸ್ತಂ ಪರಾದುರ್ಯೋಽನ್ಯತ್ರ ಆತ್ಮನೋ ಲೋಕಾನ್ ವೇದ। ದೇವಾಸ್ತಂ ಪರಾದುರ್ಯೋಽನ್ಯತ್ರಾತ್ಮನೋ ದೇವಾನ್ ವೇದ। ಭೂತಾನಿ ತಂ ಪರಾದುರ್ಯೋಽನ್ಯತ್ರಾತ್ಮನೋ ಭೂತಾನಿ ವೇದ। ಸರ್ವಂ ತಂ ಪರಾದಾತ್ ಯೋಽನ್ಯತ್ರಾತ್ಮನಃ ಸರ್ವಂ ವೇದ। ಇದಂ ಬ್ರಹ್ಮ ಇದಂ ಕ್ಷತ್ರಂ ಇಮೇ ಲೋಕಾ ಇಮೇ ದೇವಾ ಇಮಾನಿ ಭೂತಾನಿ ಇದಂ ಸರ್ವಂ ಯದಯಮಾತ್ಮಾ" ( ಬೃ ೨-೪-೬ ).

§ ಯೋ ಹಿ ಬ್ರಹ್ಮಕ್ಷತ್ರಾದಿಕಂ ಜಗತ್ ಆತ್ಮನೋಽನ್ಯತ್ರ ಸ್ವಾತಂತ್ರ್ಯೇಣ ಲಬ್ಧಸದ್ಭಾವಂ ಪಶ್ಯತಿ ತಂ ಮಿಥ್ಯಾದರ್ಶಿನಂ ತದೇವ ಮಿಥ್ಯಾದೃಷ್ಟಂ ಬ್ರಹ್ಮಕ್ಷತ್ರಾದಿಕಂ ಜಗತ್ ಪರಾಕರೋತಿ ( ಶಂ. ಭಾ. ೧ ೪-೧೯ ಬ್ರ. ಸೂತ್ರ ).

ವಾ. ವ.—ಈ ವಾಕ್ಯಗಳಿಂದ ಬ್ರಾಹ್ಮಣಾದಿ ಎಲ್ಲಾ ಪದಾರ್ಥಗಳು ಪರಮಾತ್ಮನ ಆಶ್ರಯದಿಂದಲೇ ಇರುವುವು, ಸ್ವತಂತ್ರವಾಗಿಲ್ಲ ಎಂಬ ಅರ್ಥವು ಸಿದ್ಧವಾಗುವದಿಲ್ಲವೆ ?

ಪ್ರ. ಸಾ —ಪರಮಾತ್ಮನಲ್ಲಿ ಆಶ್ರಿತ ಎಂದು ಸಿದ್ಧವಾಗುತ್ತದೆ.

ವಾ ವ —" ಸರ್ವಾ ಪ್ರಜಾ ಸದಾಯತನಾಃ " ಈ ವಾಕ್ಯದ ಅರ್ಥವೇನು ?

ಪ್ರ. ಸಾ —ಎಲ್ಲಾ ಪ್ರಜೆಗಳು ಪರಮಾತ್ಮನ ಆಶ್ರಯದಲ್ಲಿರುತ್ತಾರೆ ಎಂದು ಅರ್ಥವು

ವಾ ವ —ಪರಮಾತ್ಮನ ಆಶ್ರಯದಲ್ಲಿರುತ್ತಾರೆಂದು ಹೇಳಿದರೆ ಆಶ್ರಿತಪದಾರ್ಥಗಳಿಗೆ ಮಿಥ್ಯಾತ್ವವು ಸಿದ್ಧವಾಗುತ್ತದೆಯೇನು ?

ಪ್ರ. ಸಾ.— ಆಶ್ರಿತ ಪದಾರ್ಥಗಳಿಗೆ ಮಿಥ್ಯಾತ್ವವು ಸಿದ್ಧಿಸುವದಿಲ್ಲ.

ವಾ ವ.— ' ಬ್ರಾಹ್ಮಣಾದಿ ವರ್ಣ ಪರಮಾತ್ಮನ ಆಶ್ರಯದಲ್ಲಿವೆ ' ಹೀಗೆಂದು ಹೇಳಿದರೆ ಬ್ರಾಹ್ಮಣಾದಿ ವರ್ಣಗಳು ಮಿಥ್ಯಾ ಎಂದು ಸಿದ್ಧವಾಗುವುದಿಲ್ಲವಷ್ಟೆ ?

ಪ್ರ. ಸಾ — ವಿಚಾರ ಮಾಡಿ ಹೇಳುತ್ತೇನೆ

ವಾ. ವ —ಬ್ರಾಹ್ಮಣ ಕ್ಷತ್ರಿಯ ವರ್ಣಾದಿ ಸರ್ವ ಪದಾರ್ಥಗಳು, ' ಅಯಮಾತ್ಮಾ '=ಬ್ರಹ್ಮನಲ್ಲಿ ಕಲ್ಪಿತವಾದುವುಗಳು, ಎಂಬ ಅರ್ಥವು ವೇದಾಭಿಪ್ರೇತವಾಗಿದ್ದರೆ ' ಇದಂ ಸರ್ವಂ ಅಯಮಾತ್ಮಾ ' ಇಷ್ಟೇವಾಕ್ಯವು ಸಾಕಾಗಿತ್ತು; ' ಯತ್ ' ಎಂಬ ಪದವು ಅಧಿಕವಾಗುವುದಲ್ಲವೇನು ?

ಪ್ರ. ಸಾ.— ಉತ್ತರವಿಲ್ಲ

---

## ವಾದಿಯ ಕ್ರಾಸ್ ( ಪ್ರತಿವಾದಿ ತರ್ಫೆಯಿಂದ )

ಪ್ರ ವ —ಆಚಾರ್ಯರೇ ! ನೀವು ಹೇಳುವ ಅರ್ಥವನ್ನಿಟ್ಟುಕೊಂಡರೆ ' ಯತ್ ' ಎಂಬೀ ಪದದ ಪ್ರಯೋಜನವು ಹೇಗೆ ಸಿದ್ಧಿಸುವುದು ·

ವಾ —ಬ್ರಾಹ್ಮಣ ಕ್ಷತ್ರಿಯಾದಿ ಸಮಸ್ತ ಜಗತ್ತು, ' ಯತ್ '=ಯಸ್ಮಿನ್-ಯಾವನಲ್ಲಿ ಆಶ್ರಿತವಾಗಿದೆಯೋ ' ಅಯಂ '—ಆ ಆಶ್ರಯನಾದ ವಸ್ತು ' ಆತ್ಮಾ ' = ಪರಮಾತ್ಮನು ಹೀಗೆ ' ಯತ್ ' ಎಂಬ ಪದದ ಪ್ರಯೋಜನವು ಹೊಂದುತ್ತದೆ

ಪ್ರ. ವ —' ಯತ್ ' ಎನ್ನುವ ಪದಕ್ಕೆ ' ಯಸ್ಮಿನ್ ' ಎಂದು ಅರ್ಥ ಮಾಡಬೇಕೆಂಬ ವಿಷಯವಾಗಿ ಆಧಾರವೇನು ?

ವಾ.—" ಯೋಽನ್ಯತ್ರಾತ್ಮನೋ ಬ್ರಹ್ಮವೇದ" ಈ ಪೂರ್ವ ವಾಕ್ಯದಲ್ಲಿ ಪರಮಾತ್ಮನಿಂದ ಬೇರೆಯಾದ ವಸ್ತುವಿನಲ್ಲಿ ಬ್ರಹ್ಮಕ್ಷತ್ರಾದಿಗಳು ಆಶ್ರಿತವಾಗಿವೆ, ಎಂದು ತಿಳಿಯುವವನ ನಿಂದೆಯನ್ನು 'ಪರಾದಾತ್' ಎಂಬ ಪದದಿಂದ ಮಾಡಿದೆ ಆದುದರಿಂದ ಬ್ರಾಹ್ಮಣ ಕ್ಷತ್ರಿಯಾದಿ ಸಮಸ್ತ ಪದಾರ್ಥಗಳು ಪರಮಾತ್ಮನಲ್ಲಿಯೇ ಆಶ್ರಿತವಾಗಿವೆ ಎಂಬ ಅರ್ಥವು ಪೂರ್ವವಾಕ್ಯಗಳಿಗೆ ಅಭಿಪ್ರೇತವಾಗಿರುವುದರಿಂದ 'ಯದಯಮಾತ್ಮಾ' ಈ ಉತ್ತರ ವಾಕ್ಯದಲ್ಲಿ ಇರುವ 'ಯತ್' ಎಂಬ ಪದವನ್ನು ಸಪ್ತಮ್ಯಂತವಾಗಿ ಅಂಗೀಕರಿಸಿ ಬ್ರಾಹ್ಮಣಾದಿ ಸಮಸ್ತ ಜಗತ್ತು 'ಯತ್' ಯಾವ ಪುರುಷನಲ್ಲಿ ಆಶ್ರಿತವಾಗಿವೆಯೋ ಆ ಪರಮಾತ್ಮನು ಎಂದು ಅರ್ಥವನ್ನು ಮಾಡಬೇಕು

ಪ್ರ ವ—'ಯತ್' ಈ ಪದವು ಸಪ್ತಮ್ಯಂತವೆಂದು ಹೇಳುವುದು ಅಥವಾ ಲಕ್ಷಣಾದಿಂದ ಸಪ್ತಮೀ ವಿಭಕ್ತ್ಯರ್ಥವನ್ನು ತಿಳಿಸಿ ಕೊಡುವುದು ಎಂದು ಹೇಳುವುದು, ಈ ಎರಡು ಪಕ್ಷದಲ್ಲಿಯೂ ಯತ್ ಎನ್ನುವ ಪದವು ಗೌಣಾರ್ಥಕವಾಯಿತಷ್ಟೆ !

ವಾ.—ಯತ್' ಎಂಬ ಪದವು ಸಪ್ತಮ್ಯಂತವೇ ಆಗುತ್ತದೆ. ಕಾರಣ ಗೌಣವಾಗುವದಿಲ್ಲ.

ಪ್ರ. ವ—ಅದು ಹೇಗೆ ?

ವಾ—'ಯತ್ ಎಂಬ ಪದವು ಅವ್ಯಯವು ಅವ್ಯಯದಮುಂದೆ ಬರುವ ವಿಭಕ್ತಿ ಪ್ರತ್ಯಯಗಳಿಗೆ ಲೋಪವು ಆಗುವುದರಿಂದ 'ಯತ್' ಎಂಬುದು ಸಪ್ತಮ್ಯಂತ ಪದವೆಂದು ಹೇಳಿಸಿಕೊಳ್ಳುವುದು ಕಾವ್ಯಾದಿ ಗ್ರಂಥಗಳಲ್ಲಿ 'ತತ್' = ತಸ್ಮಾತ್ = ಅದರದೆಸೆಯಿಂದ ಎಂದು ತತ್ ಎಂಬ ಅವ್ಯಯಕ್ಕೆ ಪಂಚಮೀ ವಿಭಕ್ತ್ಯರ್ಥವನ್ನು ಹೇಳುತ್ತಾರೆ ಅಥವಾ ಸುಪಾಂ ಸು ಲುಕ್ ಈ ಸೂತ್ರಾನುಸಾರವಾಗಿ ಯತ್ ಎಂಬ ಶಬ್ದದ ಮುಂದುಗಡೆ ಬರುವ ಸಪ್ತಮೀ ವಿಭಕ್ತಿಗೆ ಲೋಪ ಉಂಟಾಗುತ್ತದೆ ಎಂದು ಹೇಳಿರುವದರಿಂದ 'ಯತ್' ಎಂಬ ಪದವು ಸಪ್ತಮ್ಯಂತವೆಂದು ಒಪ್ಪಬಹುದು. ಹಾಗೆಯೇ ಯತ್ ಈ ಶಬ್ದದ ಮುಂದುಗಡೆ ಇರುವ ಸಪ್ತಮಿಯ ಸ್ಥಳದಲ್ಲಿ 'ಸು' ಆದೇಶ ಮಾಡಿಕೊಂಡಿರುವುದರಿಂದ 'ಯತ್ ಎಂಬುದನ್ನು ಸಪ್ತಮ್ಯಂತ ಪದವೆಂದು ಹೇಳುವುದು ಕೂಡುತ್ತದೆಯಾದುದರಿಂದ ಯತ್=ಯಾವನಲ್ಲಿ ಎಂಬ ಅರ್ಥವು ಮುಖ್ಯವೇ ಆಗುತ್ತದೆ, ಗೌಣವಾಗುವದಿಲ್ಲ

---

## ಪ್ರತಿವಾದಿಯ ಸಾಕ್ಷಿಯ ವಿಚಾರಣೆ.

ವಾ ವ — ಬಾಹ್ಯವಾದ ಜಗತ್ತು ಜ್ಞಾನದಲ್ಲಿ ಕಲ್ಪಿತವಾದುದು, ಜ್ಞಾನದಿಂದ ಭಿನ್ನವಲ್ಲ, ಎಂಬ ಬೌದ್ಧರ ಸಿದ್ಧಾಂತವನ್ನು ಶಂಕರಾಚಾರ್ಯರು 'ನಾಭಾವ ಉಪಲಬ್ಧೇಃ' ಇತ್ಯಾದಿ ಸೂತ್ರಗಳಿಂದ ನಿರಾಕರಿಸಲಿಲ್ಲವೆ?

ಪ್ರ. ಸಾ. — ಬಾಹ್ಯಪದಾರ್ಥವಿಲ್ಲ ಎಂಬೀ ಸಿದ್ಧಾಂತವನ್ನು ನಿರಾಕರಿಸಿದ್ದಾರೆ

ವಾ ವ. — ಬೌದ್ಧರ ಹಾಗೆ ನೀವು ಬಾಹ್ಯ ಪದಾರ್ಥದ ನಿರಾಕರಣವನ್ನು ಈ ಶ್ರುತಿಗಳು ಮಾಡುತ್ತವೆಂದು ಹೇಳಿದರೆ ಆ ಬೌದ್ಧರ ಮೇಲೆ ಹೇಳಿದ ದೋಷವು ನಿಮ್ಮ ಮೇಲೆ ಬರಲಾರದೋ ?

ಪ್ರ ಸಾ — ಉತ್ತರವಿಲ್ಲ

ವಾ ವ. — To the Court ( ಕೋರ್ಟಿನವರಿಗೆ ) 'ಇದಂ ಸರ್ವಂ ಯದಯಮಾತ್ಮಾ' ಈ ವಾಕ್ಯದಲ್ಲಿ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವ ಪದ ವಿಲ್ಲ ಆತ್ಮಾ ಎಂಬ ಪದವು ಜಗತ್ತಿಗೆ ಮುಖ್ಯವೃತ್ತಿಯಿಂದ ಮಿಥ್ಯಾತ್ವವನ್ನು ತಿಳಿಸುವದಿಲ್ಲ. ಲಕ್ಷಣಾವೃತ್ತಿ (ಅಮುಖ್ಯವೃತ್ತಿ) ಯನ್ನು ಸ್ವೀಕರಿಸಿದರೆ 'ಆತ್ಮಾ'= ಆತ್ಮಾಧೀನ ಇಲ್ಲವೆ ಆತ್ಮಾಶ್ರಿತ ಎಂದು ಅರ್ಥವನ್ನೇಕೆ ಮಾಡಕೂಡದು ? ಹಾಗೂ ಈ ಅರ್ಥವು 'ಯೋಽನ್ಯತ್ರ ಆತ್ಮನೋ ವೇದ' ಈ ಪೂರ್ವ ವಾಕ್ಯದಲ್ಲಿ ಹೇಳಿದೆ ಯಾದುದರಿಂದ ಇದಕ್ಕೆ ಅನುಕೂಲ ವಾಗುತ್ತದೆ

ಮತ್ತು ಅದ್ವೈತಿಗಳು ಹೇಳಿದ ಅರ್ಥವು ಪೂರ್ವ ವಾಕ್ಯಗಳಿಗೆ ವಿರುದ್ಧ ವಾಗುತ್ತದೆ, ಅಲ್ಲದೆ 'ಯದಯಂ' ಎಂಬಲ್ಲಿರುವ 'ಯತ್' ಎಂಬ ಪದವು ವ್ಯರ್ಥವಾಗುತ್ತದೆ ದ್ವೈತ ಸಿದ್ಧಾಂತದ ಪ್ರಕಾರ ಬ್ರಹ್ಮಕ್ಷತ್ರಾದಿ ಜಗತ್ತು 'ಯತ್' ಯಾವನಲ್ಲಿದೆಯೋ ಅವನೇ ಆ ಪರಮಾತ್ಮನು ಎಂಬರ್ಥವನ್ನು ಒಪ್ಪಿ ದರೆ ಪೂರ್ವವಾಕ್ಯಗಳಿಗೆ ಅನುಕೂಲತೆಯೂ, ಯತ್ ಪದಕ್ಕೆ ಸಾರ್ಥಕ್ಯವೂ, ವೈದಿಕವಾದ ಸರ್ವ ಪದಗಳಿಗೆ ಮುಖ್ಯಾರ್ಥದ ಸ್ವೀಕರಣವೂ ಆಗುತ್ತದೆ ಆದು ದರಿಂದ 'ಇದಂ ಸರ್ವಂ ಯದಯಮಾತ್ಮಾ' ಈ ವಾಕ್ಯವು ಜಗತ್ತಿಗೆ ಮಿಥ್ಯಾತ್ವ ಬೋಧಕವಾಗುವದಿಲ್ಲ.

---

## 'ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ' ಎಂಬ ಶ್ರುತಿಯ ವಿಚಾರಣೆ.

ಪ್ರ ವ — 'ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ' ( ಮುಂ ೨೨೧೧ ) ಈ ಶ್ರುತಿಯ ಅರ್ಥವೇನು ?

ಪ್ರ ಸಾ. — ಈ ಎಲ್ಲಾ ಜಗತ್ತು ಬ್ರಹ ವು ಎಂದರೆ ಬ್ರಹ್ಮನಲ್ಲಿ ಕಲ್ಪಿತವಾದುದು ಬ್ರಹ್ಮನಿಂದ ಬೇರೆ ಇಲ್ಲ ( ಮಿಥ್ಯಯಾದುದು ) ಇದಂ— ಈ ಜಗತ್ತು, ವರಿಷ್ಠಂ=ಅತ್ಯುತ್ತಮವಾದುದು ಹೀಗೆಂದು ಈ ಶ್ರುತಿಯ ಅರ್ಥವು.

---

## ಕ್ಲಾಸ ಎಕ್ಸಾಮಿನೇಶನ್.

ವಾ ವ—ಈ ಶ್ರುತಿಯಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವ ಪದ ವಾವುದು ?

ಪ್ರ ಸಾ.—ಈ ಶ್ರುತಿಯಲ್ಲಿ ಏಕವಿಭಕ್ತ್ಯಂತವಾದ 'ವಿಶ್ವಂ' ಮತ್ತು 'ಬ್ರಹ್ಮ' ಈ ಎರಡು ಪದಗಳು ಇರುವುವು.

ವಾ ವ—ಈ ಎರಡು ಪದಗಳಿಂದ ಏನು ಸಿದ್ಧವಾಗುತ್ತದೆ ?

ಪ್ರ ಸಾ—ವಿಶ್ವಂ=ಜಗತ್ತು, ಬ್ರಹ್ಮ = ಬ್ರಹ್ಮನಲ್ಲಿ ಕಲ್ಪಿತವಾದುದು (ಮಿಥ್ಯಾ) ಎಂದು ಸಿದ್ಧವಾಗುತ್ತದೆ

ವಾ. ವ—ಬ್ರಹ್ಮ ಎಂಬ ಪದವು, ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬರ್ಥವನ್ನು ಮುಖ್ಯವೃತ್ತಿಯಿಂದ (Primary meaning) ತಿಳಿಸಿ ಕೊಡುತ್ತದೆ ಏನು ?

ಪ್ರ. ಸಾ.—ಬ್ರಹ್ಮ ಎಂಬ ಪದವು ಮುಖ್ಯ ವೃತ್ತಿಯಿಂದ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬರ್ಥವನ್ನು ತಿಳಿಸಿ ಕೊಡುವುದಿಲ್ಲ. ಅಮುಖ್ಯ ವೃತ್ತಿಯಿಂದ (Secondary meaning) ತಿಳಿಸಿ ಕೊಡುತ್ತದೆ

ವಾ ವ—ಈ ಶ್ರುತಿಯು ಮುಖ್ಯವೃತ್ತಿಯಿಂದ ಯಾವ ಅರ್ಥವನ್ನು ತಿಳಿಸುತ್ತದೆ.

ಪ್ರ ಸಾ—'ವಿಶ್ವಂ = ಜಗತ್ತು, 'ಬ್ರಹ್ಮ'—ಬ್ರಹ್ಮನಿಂದ ಅಭಿನ್ನವಾದುದು ಎಂದು ಬ್ರಹ್ಮಾಭೇದವನ್ನು ತಿಳಿಸಿ ಕೊಡುತ್ತದೆ

ವಾ ವ—ಮುಖ್ಯವೃತ್ತಿಯಿಂದ ತಿಳಿಸುವ ಅರ್ಥವನ್ನು ನೀವು ಯಾಕೆ ಬಿಟ್ಟಿರಿ ?

ಪ್ರ. ಸಾ.—ಸುಳ್ಳಾದ ಜಗತ್ತು, ಸತ್ಯವಾದ ಬ್ರಹ್ಮ ಇವುಗಳ ಅಭೇದವು ಹೊಂದುವುದಿಲ್ಲವಾದುದರಿಂದ ಮುಖ್ಯಾರ್ಥವನ್ನು ಬಿಟ್ಟೆವು

ವಾ ವ—ಜಗತ್ತು ಮಿಥ್ಯಾ ಎಂಬ ವಿಷಯದಲ್ಲಿ ಈ ಶ್ರುತಿಯೇ ಪ್ರಮಾಣವಷ್ಟೆ ?

ಪ್ರ ಸಾ—ಈ ಶ್ರುತಿಯೇ ಪ್ರಮಾಣವಾಗಿದೆ.

ವಾ ವ.—ಈ ಶ್ರುತಿಯಿಂದಲೇ ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಯಬೇಕಷ್ಟೆ ?

ಪ್ರ ಸಾ.—ಈ ಶ್ರುತಿಯಿಂದಲೇ ತಿಳಿಯಬೇಕು

ವಾ. ವ.—'ವಿಶ್ವಂ ಬ್ರಹ್ಮ' ಈ ಪದಗಳು ಜಗತ್ತಿಗೆ ಮಿಥ್ಯಾತ್ವವನ್ನು ಯಾವಾಗ ತಿಳಿಸುತ್ತವೆ ?

ಪ್ರ. ಸಾ.—ಬ್ರಹ್ಮ ಎಂಬ ಶಬ್ದಕ್ಕೆ ಬ್ರಹ್ಮನಲ್ಲಿ ಕಲ್ಪಿತವಾದುದು ಹೀಗೆ ಅಮುಖ್ಯ ವೃತ್ತಿಯಿಂದ ಅರ್ಥವನ್ನು ಸ್ವೀಕರಿಸಿದರೆ ತಿಳಿಸಿಕೊಡುತ್ತದೆ.

ವಾ. ವ—ಪೂರ್ವದಲ್ಲಿ ಯಾವ ಅರ್ಥವು ಸಿದ್ಧಿಸಿ ಇದ್ದರೆ ಬ್ರಹ್ಮ ಎಂಬ ಶಬ್ದಕ್ಕೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬ ಅಮುಖ್ಯಾರ್ಥವು ಹೇಳುವುದಕ್ಕೆ ಬರುವುದು ?

ಪ್ರ ಸಾ — ಜಗತ್ತು ಮಿಥ್ಯಾ ಎಂದು ಪೂರ್ವದಲ್ಲಿ ಸಿದ್ಧಿಸಿ ಇದ್ದರೆ ಮಿಥ್ಯೆಯಾದ ಜಗತ್ತು ಸತ್ಯವಾದ ಬ್ರಹ್ಮಸ್ವರೂಪವಾಗುವುದು ಕೂಡುವದಿಲ್ಲ, ಆದುದರಿಂದ ' ವಿಶ್ವಂ ' ಜಗತ್ತು, ' ಬ್ರಹ್ಮ ' ಬ್ರಹ್ಮಸ್ವರೂಪವು, ಎಂದು ಹೇಳುವುದಕ್ಕೆ ಬರುವುದಿಲ್ಲವಾದುದರಿಂದ ಜಗತ್ತು ಬ್ರಹ್ಮ, ಎಂದರೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬ ಅರ್ಥವನ್ನು ಹೇಳಬಹುದು.

ವಾ ವ — ಪೂರ್ವದಲ್ಲಿ ಜಗತ್ತು ಮಿಥ್ಯಾ ಎಂದು ಸಿದ್ಧಿಸದಿದ್ದರೆ ಬ್ರಹ್ಮ ಪದಕ್ಕೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬ ಅರ್ಥವು ಕೂಡಬಹುದೋ ?

ಪ್ರ. ಸಾ — ಕೂಡಲಾರದು

ವಾ ವ — ' ಬ್ರಹ್ಮ ' ಎಂಬ ಪದಕ್ಕೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬ ಅರ್ಥವನ್ನು ಮಾಡದಿದ್ದರೆ ಜಗತ್ತು ಮಿಥ್ಯೆ ಎಂದು ಸಿದ್ಧಿಸುವುದೇ ?

ಪ್ರ ಸಾ — ಬ್ರಹ್ಮ ಎಂಬ ಪದಕ್ಕೆ, ಬ್ರಹ್ಮನಲ್ಲಿ ಕಲ್ಪಿತ ಎಂಬರ್ಥವನ್ನು ಮಾಡದ ಹೊರತು ಜಗತ್ತು ಮಿಥ್ಯಾ ಎಂದು ಸಿದ್ಧವಾಗಲಾರದು

ವಾ ವ — ಜಗತ್ತು ಮಿಥ್ಯಾ ಎಂದು ಸಿದ್ಧವಾಗದವಿನಾ, ಬ್ರಹ್ಮ ಪದಕ್ಕೆ ಬ್ರಹ್ಮನಲ್ಲಿ ಕಲ್ಪಿತ ಎಂದು ಅರ್ಥವನ್ನು ಮಾಡಲು ಬರಲಾರದು ಬ್ರಹ್ಮನಲ್ಲಿ ಕಲ್ಪಿತ ಎಂದು ಅರ್ಥವನ್ನು ಮಾಡದವಿನಾ, ಜಗತ್ತು ಮಿಥ್ಯಾ ಎಂದು ಸಿದ್ಧವಾಗಲಾರದು ಆದುದರಿಂದ ಅನ್ಯೋನ್ಯಾಶ್ರಯ ದೋಷ ಬರುತ್ತದೆಯಲ್ಲ

ಪ್ರ ಸಾ — † ಅನವಸ್ಥಾ, ಅನ್ಯೋನ್ಯಾಶ್ರಯಾದಿ ದೋಷಗಳೆಲ್ಲವೂ ನಮ್ಮ ಸ್ನೇಹಿತರೇ, ಎಂದರೆ ನಮ್ಮ ಮತದಲ್ಲಿ ಬ್ರಹ್ಮಾತಿರಿಕ್ತವಾದ ಯಾವ ಪದಾರ್ಥವೂ ಇಲ್ಲದುದರಿಂದ ಜಗತ್ತಿನ ಮಿಥ್ಯಾತ್ವವು ಮುಂತಾದ ಪದಾರ್ಥಗಳು ಯಾವೂ ಸಿದ್ಧವಾಗದೆ ಇರುವದು ನಮಗೆ ಬೇಕು (ಇಷ್ಟವೇ).

ಅನ್ಯೋನ್ಯಾಶ್ರಯ ಮುಂತಾದ ದೋಷಗಳು ನಮಗೆ ಬೇಕಾದವುಗಳನ್ನು ಮಾಡಿ ಕೊಡುವವು. ' ಸರ್ವವು ಮಾಯಾ ಕಲ್ಪಿತವಾದವುಗಳು ' ಎಂಬ ನಮ್ಮ ಮತಕ್ಕೆ ಸರ್ವಾನುಪಪತ್ತಿಯು * ಭೂಷಣವೇ, ಮತ್ತು ಮತವನ್ನು ಚನ್ನಾಗಿ ನಿಲ್ಲಿಸುವವು, ಹೀಗೆಂದು ನಮ್ಮ ಪ್ರಾಚೀನ ಅದ್ವೈತಿಗಳು ಹೇಳಿರುವದರಿಂದ ಜಗತ್ತು ಮಿಥ್ಯಾ ಎಂದು ಪ್ರಮಾಣಗಳಿಂದ ಸಿದ್ಧವಾಗಲೇ ಬೇಕೆಂದೇನು ಇಲ್ಲ ಜಗತ್ತಿಗ ಮಿಥ್ಯಾತ್ವವು ಪ್ರಮಾಣಸಿದ್ಧವಾದರೆ ಅದೂ ಒಂದು ಸತ್ಯವಾಗಿ, ಬ್ರಹ್ಮ ಒಂದೇ ಸತ್ಯವೆಂದು ಹೇಳುವ ನಮ್ಮ ಮತವು ನಷ್ಟವಾಗಿ ಹೋಗುವುದು

† ಅನವಸ್ಥಾದಯೋ ದೋಷಾಃ ಸತ್ತ್ವಂ ನಿಘ್ನಂತಿ ವಸ್ತುನಃ । ಅದ್ವೈತಿನಾಂ ತು ಸುತರಾಂ ಪ್ರಸಜ್ಜಂತೇ ತತಃ ಪ್ರಸಂಜಕಾಃ ॥ ( ಬ್ರಹ್ಮಸಂದೇಹಂ )

* ಮಾಯಾಯಾಮನುಪಪತ್ತಿರ್ಭೂಷಣಮೇವ ( ಶ್ರುತಿಃ )

ವಾ ವ —'ಬ್ರಹ್ಮೈವೇದಂ ವಿಶ್ವಂ ' ಈ ಶ್ರುತಿಯ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವನ್ನು ತೆಗೆದುಕೊಂಡಮೇಲೆ ' ವಿಶ್ವಂ ಬ್ರಹ್ಮ " ಈ ವಾಕ್ಯಕ್ಕೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂಬ ಸರ್ವ ಪ್ರಮಾಣಗಳಿಗೆ ವಿರುದ್ಧವಾದ ಅರ್ಥವನ್ನೇಕೆ ಮಾಡಬೇಕು ? ' ಯತೋ ವಾ ಇಮಾನಿ ಭೂತಾನಿ ಜಾಯಂತೇ ' ಇತ್ಯಾದಿ ಶ್ರುತ್ಯನುಸಾರವಾಗಿ ಬ್ರಹ್ಮ ಎಂಬ ಪದಕ್ಕೆ ಬ್ರಹ್ಮನಿಂದ ಉತ್ಪನ್ನವಾಗುವದು ಎಂಬರ್ಥವನ್ನು, ಅಥವಾ ' ಸರ್ವಸ್ಯವಶೀ ' ಈ ಶ್ರುತ್ಯನುಸಾರವಾಗಿ ಬ್ರಹ್ಮನ ಅಧೀನ ಎಂಬರ್ಥವನ್ನು ಏಕೆ ಮಾಡಬಾರದು ?

ಪ್ರ. ಸಾ — ಉತ್ತರವಿಲ್ಲ

---

## ವಾದಿಯ ಕ್ರಾಸ್ ಎಕ್ಸಾಮಿನೇಶನ್

ಪ್ರ ವ — ಈ ವಾಕ್ಯವು, ಏನನ್ನು ತಿಳಿಸುವುದಕ್ಕಾಗಿ ಪ್ರವೃತ್ತವಾಗಿದೆ ಅದನ್ನು ಹೇಳಿ ?

ವಾದಿ — ಈ ವಾಕ್ಯದ ಪೂರ್ವದಲ್ಲಿರುವ " ಬ್ರಹ್ಮೈವೇದಮಮೃತಂ ಪುರಸ್ತಾತ್ ಬ್ರಹ್ಮಪಶ್ಚಾತ್ ಬ್ರಹ್ಮದಕ್ಷಿಣತಶ್ಚೋತ್ತರೇಣ ಅಧಶ್ಚೋರ್ಧ್ವಂ ಚ ಪ್ರಸೃತಂ " ಈ ವಾಕ್ಯವು ಬ್ರಹ್ಮನು ಮುಂದುಗಡೆ ಇದ್ದಾನೆ, ಹಿಂದುಗಡೆ ಇದ್ದಾನೆ, ಮೇಲ್ಗಡೆ ಇದ್ದಾನೆ, ಕೆಳಗಡೆ ಇದ್ದಾನೆ, ಹೀಗೆಂದು ಹೇಳುತ್ತಿರುವುದರಿಂದ " ಬ್ರಹ್ಮೈವೇದಂ ವಿಶ್ವಂ " ಇದಂ ಬ್ರಹ್ಮ=ಈ ಬ್ರಹ್ಮನು, ವಿಶ್ವಂ=ಎಲ್ಲಾ ಕಡೆಗೂ ಇದ್ದಾನೆ,' ಹೀಗೆ ಬ್ರಹ್ಮನ ವ್ಯಾಪ್ತಿಯನ್ನು ತಿಳಿಸುವದಕ್ಕಾಗಿ ಪ್ರವೃತ್ತವಾಗಿದೆ ಎಂದು ಹೇಳುತ್ತೇವೆ

---

## ಪ್ರತಿವಾದಿಯ ಸಾಕ್ಷೀದಾರನ ವಿಚಾರಣೆ.

ವಾ ವ.—' ತದೇತತ್ ಸತ್ಯಂ " ಈ ವಾಕ್ಯವು ಯಾವ ಉಪನಿಷತ್ತಿನಲ್ಲಿದೆ ?

ಪ್ರ. ಸಾ.— ಮುಂಡಕೋಪನಿಷತ್ತಿನ ಎರಡನೆಯ ಮುಂಡಕದ ಎರಡನೆಯ ಖಂಡದಲ್ಲಿದೆ

ವಾ. ವ.— ಈ ಮಂತ್ರದ ಅರ್ಥವೇನು ?

ಪ್ರ. ಸಾ.— ತತ್ ಏತತ್-ಸರ್ವಾಶ್ರಯನಾಗಿರುವ ಯಾವ ಬ್ರಹ್ಮನು ಉಂಟೋ ಅವನು, ಸತ್ಯಂ=ಮಿಥ್ಯಾ ಅಲ್ಲ ಹೀಗೆಂದು ಇದರ ಅರ್ಥವು

ವಾ, ವ.— ' ತದೇತತ್ ಸತ್ಯಂ ' ಇದೇ ವಾಕ್ಯವು ಈ ಉಪನಿಷತ್ತಿನಲ್ಲಿ ಮತ್ತೊಂದುಕಡೆ ಎಲ್ಲಿ ಉಂಟು ?

ಪ್ರ ಸಾ — ಮೊದಲನೆಯ ಮುಂಡಕದ ಎರಡನೆಯ ಖಂಡದಲ್ಲಿದೆ.

ವಾ ವ — ಅದರ ಅರ್ಥವೇನು ?

ಪ್ರ ಸಾ — ಋಷಿಗಳಿಂದ ದೃಷ್ಟವಾದ ವೇದಗಳಲ್ಲಿ ಮಾಡಬೇಕೆಂದು ಹೇಳಿದ ಅಗ್ನಿಹೋತ್ರಾದಿ ಕರ್ಮಗಳು, ಸತ್ಯಂ = ಸತ್ಯವಾದುವುಗಳು ಎಂದು ಅರ್ಥವು

ವಾ ವ — ಕರ್ಮಗಳು ಸತ್ಯವೆಂದರೆ ಮಿಥ್ಯಾ ಅಲ್ಲವೆಂದಷ್ಟೆ ?

ಪ್ರ. ಸಾ. — ಕರ್ಮಗಳು ಮಿಥ್ಯಾ ಅಲ್ಲ ಹೀಗಲ್ಲ ಮಿಥ್ಯಾ ಆದುವುಗಳೇ !

ವಾ. ವ — ಕರ್ಮಗಳು ಮಿಥ್ಯೆ ಆದವುಗಳು ಎಂದು ತಿಳಿದರೆ, ಶ್ರುತಿಯಲ್ಲಿ ಸತ್ಯವೆಂದು ಹೇಳಿದುದು ಹೇಗೆ ಹೊಂದುತ್ತದೆ ?

ಪ್ರ ಸಾ — ನಮ್ಮ ಮತದಲ್ಲಿ ಸತ್ಯವಾದ ಪದಾರ್ಥವು, ಪಾರಮಾರ್ಥಿಕ ಸತ್ಯ (ನಿಜವಾದ ನಿಜವು) ವೆಂದೂ, ವ್ಯಾವಹಾರಿಕ ಸತ್ಯ (ತೋರಿಕೆಯ ನಿಜ) ವೆಂದೂ ಎರಡು ವಿಧವಾಗಿ ಇದೆ ಇವುಗಳಲ್ಲಿ ಪಾರಮಾರ್ಥಿಕ ಸತ್ಯವೆಂದರೆ ಯಾವ ಕಾಲದಲ್ಲಿಯೂ ಬಾಧವುಂಟಾಗದೆ ಇರುವ ಪದಾರ್ಥವು ಅದು ಮಿಥ್ಯಾ ಅಲ್ಲವು. ವ್ಯಾವಹಾರಿಕ ಸತ್ಯವೆಂದರೆ ಶುಕ್ತಿ ರಜತದ ಹಾಗೆ (ಮುತ್ತಿನ ಸಿಂಪಿನಲ್ಲಿ ತೋರುವ ಬೆಳ್ಳಿಯ ಹಾಗೆ) ಬಾಧಿತ ವಾಗುವುದು (ಯಾವಾಗಲೂ ಇಲ್ಲದುದು ಎಂದು ತಿಳಿದು ಬರುವುದು), ಆದುದರಿಂದ ಅದೇ ವ್ಯಾವಹಾರಿಕ ಸತ್ಯವು, ಮಿಥ್ಯಾ ಆದುದು ಪ್ರಕೃತದಲ್ಲಿ ಅಗ್ನಿಹೋತ್ರಾದಿ ಕರ್ಮಗಳು ಸತ್ಯವೆಂದರೆ ವ್ಯಾವಹಾರಿಕ ಸತ್ಯ=ತೋರಿಕೆಯ ಸತ್ಯವೆಂದು ತಿಳಿದುಕೊಳ್ಳುವದರಿಂದ ಕರ್ಮಗಳು ಸುಳ್ಳಾದವುಗಳು ಎಂದು ಹೇಳುವುದೂ, ಶ್ರುತಿಯಲ್ಲಿ ಕರ್ಮಗಳು ಸತ್ಯವಾದವುಗಳೆಂದು ಹೇಳಿರುವುದೂ ಎರಡೂ ಹೊಂದಿಕೆಯಾಗುತ್ತವೆ

ವಾ ವ — " ತದೇತತ್ ಸತ್ಯಂ " (ಮುಂ. ೨ ೨ ೨) ಈ ಮಂತ್ರ ಮತ್ತು ' ತದೇತತಸತ್ಯಂ " (ಮುಂ ೧-೨-೧) ಈ ಮಂತ್ರ ಇವೆರಡೂ ಒಂದೇ ರೀತಿಯಾದುವುಗಳಲ್ಲವೆ ?

ಪ್ರ ಸಾ — ಇವೆರಡೂ ಒಂದೇ ವಿಧವಾದವುಗಳು.

ವಾ ವ. — ಎರಡು ಮಂತ್ರಗಳಲ್ಲಿರುವ ಎರಡೂ ' ಸತ್ಯ ' ಪದಗಳ ಅರ್ಥವು ಒಂದೇ ಪ್ರಕಾರವಾದುದು ಅಲ್ಲವೆ ?

ಪ್ರ. ಸಾ. — ಒಂದೇ ಪ್ರಕಾರವಾದುದು !

ವಾ. ವ — ಮುಂ ೨-೨-೨ ಮಂತ್ರದಲ್ಲಿರುವ ' ಸತ್ಯಂ ' ಎಂಬ ಪದಕ್ಕೆ ಶಂಕರಾಚಾರ್ಯರು ಯಾವ ಅರ್ಥವನ್ನು ಹೇಳಿದ್ದಾರೆ ?

ಪ್ರ. ಸಾ. — ಸತ್ಯಂ=ಅವಿತಥಂ=ಮಿಥ್ಯಾ ಅಲ್ಲ, ಹೀಗೆಂದು ಅರ್ಥವನ್ನು ಹೇಳಿದ್ದಾರೆ.

ವಾ. ವ. — ಈ ವಾಕ್ಯದಿಂದ ಏನು ಸಿದ್ಧವಾಯಿತು ?

ಪ್ರ ಸಾ.—ಬ್ರಹ್ಮನು ಮಿಥ್ಯಾ ಅಲ್ಲ, ಪಾರಮಾರ್ಥಿಕ ಸತ್ಯವೇ ಎಂದು ಸಿದ್ಧವಾಯಿತು ?

ವಾ ವ.—ಮುಂ. ೧-೨-೧ ಮಂತ್ರದಲ್ಲಿರುವ ಸತ್ಯಂ ಎಂಬ ಪದಕ್ಕೆ ಶಂಕರಾಚಾರ್ಯರು ಯಾವ ಅರ್ಥವನ್ನು ಹೇಳಿದ್ದಾರೆ ।

ಪ್ರ. ಸಾ —'ಸತ್ಯಂ'=ಅವಿತಥಂ=ಮಿಥ್ಯಾ ಅಲ್ಲ ವೆಂಬ ಅರ್ಥವನ್ನು ಮಾಡಿದ್ದಾರೆ.

ವಾ. ವ.—ಈ ವಾಕ್ಯದಿಂದಲೇ ಕರ್ಮಾದಿ ಜಗತ್ತು ಪರಮಾತ್ಮನಂತೆ ಪಾರಮಾರ್ಥಿಕ ಸತ್ಯವೆ, ಮಿಥ್ಯಾ ಅಲ್ಲ ಎಂದು ಸಿದ್ದವಾಗುತ್ತಿರಲು ಜಗತ್ತು ಮಿಥ್ಯಾ ಎಂದು ಹೇಗೆ ಹೇಳುವಿರಿ ?

ಪ್ರ. ಸಾ.—ಉತ್ತರವಿಲ್ಲ

ವಾ. ವ —ಪ್ರಮಾಣಗಳು ತಮ್ಮ ತಮ್ಮ ವಿಷಯಗಳಿಗೆ ತಾತ್ವಿಕ=ಪಾರಮಾರ್ಥಿಕ ಸತ್ಯವಾದುವುಗಳೆಂದೇ ತಿಳಿಸಿ ಕೊಡುತ್ತವೆ, ವ್ಯಾವಹಾರಿಕವೆಂದು ತಿಳಿಸಿ ಕೊಡುವುದಿಲ್ಲ ಹೀಗೆಂದು ನಿಮ್ಮ ಭಾಮತೀಕಾರರು "ಕ್ಷಣಿಕತ್ವಾಚ್ಚ" ಈ ಸೂತ್ರದಭಾಷ್ಯ ವ್ಯಾಖ್ಯಾನದಲ್ಲಿ ಬೌದ್ಧರಿಗೆ ಹೇಳಿದುದನ್ನು ನೀವು ಬಲ್ಲಿರಷ್ಟೆ ?

ಪ್ರ, ಸಾ.—ಹೌದು ! ನಾವು ಬಲ್ಲೆವು.

ವಾ ವ.—ಪ್ರಮಾಣಗಳು, ತಮ್ಮ ತಮ್ಮ ವಿಷಯಗಳಿಗೆ ವ್ಯಾವಹಾರಿಕ ಸತ್ಯವಾದುವುಗಳೆಂದು ತಿಳಿಸಿ ಕೊಡುವುದಿಲ್ಲ ಹೀಗೆಂದು ನಿಮ್ಮ ಆಚಾರ್ಯರು ಹೇಳಿರಲು 'ತದೇತತ್ ಸತ್ಯಂ' ಈ ವಾಕ್ಯ (ಪ್ರಮಾಣ) ವು ಕರ್ಮಾದಿ ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ತಿಳಿಸಿ ಕೊಡುತ್ತದೆಂದು ನೀವು ಹೇಗೆ ಹೇಳುವಿರಿ ?

ಪ್ರ. ಸಾ.—ಉತ್ತರವಿಲ್ಲ

My Lord—(a) 'ಬ್ರಹ್ಮೈವೇದಂ ವಿಶ್ವಂ' ಈ ಶ್ರುತಿಯಲ್ಲಿ ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಸುವ ಪದವಿಲ್ಲ.

(b) 'ಬ್ರಹ್ಮೈವೇದಂ ಪುರಸ್ತಾತ್ ಬ್ರಹ್ಮಪಶ್ಚಾತ್ ಬ್ರಹ್ಮದಕ್ಷಿಣತ' ಇತ್ಯಾದಿ ಪೂರ್ವವಾಕ್ಯಗಳಿಂದ ಬ್ರಹ್ಮನು ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ, ಬಲಭಾಗದಲ್ಲಿಯೂ ಇರುತ್ತಾನೆಂದು ಬ್ರಹ್ಮನ ಅಸ್ತಿತ್ವವನ್ನು ಆಯಾ ಸ್ಥಳದಲ್ಲಿ ಹೇಳಿ ಮುಂದಿನ 'ಬ್ರಹ್ಮೈವೇದಂ ವಿಶ್ವಂ' ಎಂಬ ವಾಕ್ಯವು ಆ ಬ್ರಹ್ಮನು ವಿಶ್ವಂ ಜಗದ್ವ್ಯಾಪ್ತನಾಗಿ ಇದ್ದಾನೆಂದು 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ಎಂಬ ಗೀತಾವಾಕ್ಯಾನುಸಾರವಾಗಿ ಜಗತ್ತಿನಲ್ಲಿ ಬ್ರಹ್ಮನ ವ್ಯಾಪ್ತಿಯನ್ನು ಹೇಳುತ್ತದೆ.

(c) 'ವಿಶ್ವವು ಬ್ರಹ್ಮವೇ' ಎಂದು ಹೇಳಿದರೂ ಜಗತ್ತು ಬ್ರಹ್ಮನಿಂದ ಅಭಿನ್ನವಾದುದೆಂದೇ ಸಿದ್ಧವಾಗುತ್ತದೆ. ಹೊರತು ಜಗತ್ತು ಮಿಥ್ಯೆಯಾದುದೆಂದು ಸಿದ್ಧವಾಗುವುದಿಲ್ಲ.

(d) ಸುಳ್ಳಾದ ಜಗತ್ತು ಸತ್ಯವಾದ ಬ್ರಹ್ಮಸ್ವರೂಪವಾಗಲಾರದು ಅದರಿಂದ ಜಗತ್ತು ಬ್ರಹ್ಮಸ್ವರೂಪವೆಂದರೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂದು ಹೀಗೆಯೇ ಅರ್ಥಮಾಡಬೇಕೆಂದು ಹೇಳುವುದು ಕೂಡುವದಿಲ್ಲ ಏಕೆಂದರೆ ಜಗತ್ತು ಮಿಥ್ಯೆಯೆಂದು ಸಿದ್ಧವಾಗದೆ ಆ ಜಗತ್ತು ಸತ್ಯಭೂತವಾದ ಬ್ರಹ್ಮವಾಗುವುದಿಲ್ಲವೆಂದು ಹೇಳುವುದು ಕೂಡುವುದಿಲ್ಲ. ಜಗತ್ತು ಸತ್ಯಭೂತವಾದ ಬ್ರಹ್ಮಸ್ವರೂಪವಲ್ಲವೆಂದು ಸಿದ್ಧವಾದ ಹೊರತು ಅದು ( ಜಗತ್ತು ) ಮಿಥ್ಯೆಯೆಂದು ಸಿದ್ಧವಾಗಲಾರದು ಹೀಗೆ ಅನ್ಯೋನ್ಯಾಶ್ರಯ ದೋಷ ಬರುವದು ಆದುದರಿಂದ ಈ ವಾಕ್ಯದಿಂದ ಜಗತ್ತು ಮಿಥ್ಯೆಯಾಗುವುದಿಲ್ಲ

(e) ೨ ನೇ ಮುಂಡಕದ ೨ ನೇ ಖಂಡದಲ್ಲಿರುವ ೨ ನೇ ಮಂತ್ರದಲ್ಲಿಯ 'ತದೇತತ್ ಸತ್ಯಂ' ಇ ವಾಕ್ಯದಲ್ಲಿಯ ಸತ್ಯ ಶಬ್ದವು ಬ್ರಹ್ಮನ ವಿಷಯದಲ್ಲಿ ಪಾರಮಾರ್ಥಿಕ ಸತ್ಯವೆಂದು ಹೇಳುವಂತೆಯೇ ೧ ನೇ ಮುಂಡಕದಲ್ಲಿ ಸಹ ಬಂದಿರುವ ಇದೇ ವಾಕ್ಯದಲ್ಲಿಯ ಸತ್ಯ ಶಬ್ದವಾದರೂ ಕರ್ಮಾದಿ ಜಗತ್ತಿಗೆ ಬ್ರಹ್ಮನ ವಿಷಯದಲ್ಲಿ ಹೇಳಿದಂತೆಯೇ ಸತ್ಯವನ್ನು ಹೇಳುತ್ತದೆ ಹೊರತು ಬೇರೆ ರೀತಿಯಾಗಿ ಹೇಳುವದಿಲ್ಲ ಶಂಕರಾಚಾರ್ಯರು ಜಗತ್ತಿನ ಸತ್ಯತ್ವವು ಆಪೇಕ್ಷಿಕ ಎಂದು ತಿಳಿದರೂ, ವೇದಮಾತೆಯು ಹಾಗೆ ಹೇಳುವದಿಲ್ಲಾದ್ದರಿಂದ ಜಗತ್ತು ಸತ್ಯವೇ ಹೊರತು ಮಿಥ್ಯೆಯಲ್ಲ

---

## ಆತ್ಮೈವೇದಂ ಸರ್ವಂ ಈ ಶ್ರುತಿಯ ವಿಚಾರಣೆ.

ಪ್ರ ವ — ಶಾಸ್ತ್ರಿಗಳೇ ! " ಆತ್ಮೈವೇದಂ ಸರ್ವಂ " ( ಛಾಂ. ೭ ೨೫-೨ ) ಈ ಮಂತ್ರದ ಅರ್ಥವೇನು ?

ಪ್ರ ಸಾ. — ಇದಂ ಸರ್ವಂ=ಈ ಎಲ್ಲಾ ಜಗತ್ತು, ಆತ್ಮೈವ=ಆತ್ಮನಲ್ಲಿ ಕಲ್ಪಿತವು. ಮಿಥ್ಯಾ ಎಂದು ಅರ್ಥವು

---

## ಕ್ರಾಸ ಎಕ್ಸಾಮಿನೇಶನ್.

ವಾ ವ — ಈ ಶ್ರುತಿಯಲ್ಲಿ ಮಿಥ್ಯಾ ಎಂಬ ಅರ್ಥವನ್ನು ತಿಳಿಸಿ ಕೊಡುವ ಪದವಿದೆಯೋ ?

ಪ್ರ ಸಾ. — ಇಲ್ಲ.

ವಾ. ವ. — ಈ ವಾಕ್ಯವು ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಸಿಕೊಡುತ್ತದೆಂದು ನೀವು ಹೇಗೆ ಹೇಳಿದಿರಿ ?

ಪ್ರ. ಸಾ — ಈ ಶ್ರುತಿಯಲ್ಲಿ ' ಸರ್ವಂ ಆತ್ಮಾ ' ಈ ಎರಡು ಪದಗಳು ಏಕವಿಭಕ್ತ್ಯಂತ ( ಸಮಾನಾಧಿಕರಣ ) ವಾಗಿರುವುದರಿಂದ ಜಗತ್ತಿಗೂ,

ಆತ್ಮನಿಗೂ ಅಭೇದವನ್ನು ತಿಳಿಸಿ ಕೊಡುತ್ತವೆ ಆದರೆ ಮಿಥ್ಯೆಯಾದ ಜಗತ್ತಿಗೂ ಮತ್ತು ಸತ್ಯವಾದ ಆತ್ಮನಿಗೂ ಅಭೇದವು ಹೊಂದುವುದಿಲ್ಲವಾದುದರಿಂದ ಎಲ್ಲಾ ಜಗತ್ತು ಆತ್ಮನಲ್ಲಿ ಕಲ್ಪಿತವಾದುದು ಎಂಬ ಅರ್ಥವನ್ನು ಹೇಳುತ್ತೇವೆ

ವಾ ವ —' ಸರ್ವಂ ಸಮಾಪ್ನೋಷಿ ' ಈ ಗೀತಾ ಶ್ಲೋಕಾನುಸಾರವಾಗಿ ಬ್ರಹ್ಮ ಸರ್ವಂ=ಸರ್ವವ್ಯಾಪ್ತನು ಎಂಬ ಪೂರ್ವೋತ್ತರ ವಾಕ್ಯಗಳಿಗೆ ಅನುಕೂಲವಾದ ಅರ್ಥವು ಹೊಂದಿಕೆಯಾಗಿರಲು ಅಮುಖ್ಯವೃತ್ತಿಯಿಂದ ( Secondary Meaning ) ಜಗತ್ತು ಬ್ರಹ್ಮನಲ್ಲಿ ಕಲ್ಪಿತವಾದುದು ಎಂದು ಅರ್ಥ ಮಾಡಲು ಏನಾದರೂ ಆಧಾರ ಉಂಟೇ ?

ಪ್ರ ಸಾ.— ಉತ್ತರವಿಲ್ಲ

ವಾ ವ.—" ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನ ಏವಂ ವಿಜಾನನ್ .. ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ ಅಥ ಯೇಽನ್ಯಥಾತೋ ವಿದುಃ ಅನ್ಯರಾಜಾನಃ ತೇ ಕ್ಷಯ್ಯಲೋಕಾ ಭವಂತಿ ತೇಷಾಂ ಸರ್ವೇಷು ಲೋಕೇಷು ಅಕಾಮಚಾರೋ ಭವತಿ " ಈ ಮಂತ್ರ ದಲ್ಲಿರುವ ಉತ್ತರವಾಕ್ಯದ ಅರ್ಥವೇನು ?

ಪ್ರ. ಸಾ —ಯಾವನು ಈ ಪ್ರಕಾರವಾಗಿ ತಿಳಿಯುತ್ತಾನೆಯೋ ಅವನಿಗೆ ಸರ್ವಲೋಕದಲ್ಲಿ ಯಥೇಷ್ಟವಾಗಿ ಸಂಚರಿಸುವ ಸಾಮರ್ಥ್ಯವು ಪ್ರಾಪ್ತವಾಗುತ್ತದೆ, ಯಾವನು ಇದರ ವ್ಯತಿರಿಕ್ತ ತಿಳಿಯುತ್ತಾನೆಯೋ ಅವನಿಗೆ ಸರ್ವಲೋಕ ಸಂಚಾರ ಸಾಮರ್ಥ್ಯವು ಪ್ರಾಪ್ತ ವಾಗುವದಿಲ್ಲವೆಂದು ಅರ್ಥವು.

ವಾ. ವ.—' ಆತ್ಮೈವೇದಂ ಸರ್ವಂ ' ಎಂಬ ಪೂರ್ವಭಾಗದಿಂದ ಜಗತ್ತು ಇಲ್ಲವೆಂದು ತಿಳಿಸಿ | ಉತ್ತರಭಾಗದಿಂದ ಮನುಷ್ಯನು ತಿಳಿಯುತ್ತಾನೆ, ಲೋಕದಲ್ಲ ಸಂಚರಿಸುತ್ತಾನೆ ಎಂದು ಜ್ಞಾನವನ್ನು, ಲೋಕ, ಲೋಕದಲ್ಲಿ ಸಂಚಾರ ಮುಂತಾದ ಜಗತ್ತನ್ನು ತಿಳಿಸಿ ಕೊಡಬಹುದೊ ?

ಪ್ರ. ಸಾ.—ಉತ್ತರವಿಲ್ಲ.

ವಾ. ವ.—ಈ ವಾಕ್ಯದ ಪೂರ್ವದಲ್ಲಿರುವ ವಾಕ್ಯವು ಯಾವದು ?

ಪ್ರ. ಸಾ—' ಆತ್ಮೈವಾಧಸ್ತಾತ್ ಆತ್ಮಾ ಉಪರಿಷ್ಟಾತ್ ಆತ್ಮಾ ಪಶ್ಚಾತ್ ಆತ್ಮಾ ದಕ್ಷಿಣತಃ ಆತ್ಮಾ ಉತ್ತರತಃ ' ಎಂದು ಉಂಟು.

ವಾ. ವ.—ಈ ವಾಕ್ಯದ ಅರ್ಥವೇನು ?

ಪ್ರ. ಸಾ.—ಆತ್ಮನೇ ಕೆಳಗಡೆ ಇದ್ದಾನೆ, ಮೇಲ್ಗಡೆ ಇದ್ದಾನೆ, ಪಶ್ಚಿಮಕ್ಕೆ ಇದ್ದಾನೆ, ದಕ್ಷಿಣಕ್ಕೆ ಇದ್ದಾನೆ ಹೀಗೆಂದು ಪರಮಾತ್ಮನು ಆಯಾ ಸ್ಥಳದಲ್ಲಿದ್ದಾನೆಂದು ಅರ್ಥವು.

‡ ಸ ವಾ ಏಷ ಏವಂ ಪಶ್ಯನ್ ಏವಂ ಮನ್ವಾನ ಏವಂ ವಿಜಾನನ್ ... ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ ಇತ್ಯಾದಿ.

ವಾ. ವ.—ಪೂರ್ವವಾಕ್ಯದಲ್ಲಿ ಯಾರನ್ನು ಉದ್ದೇಶಿಸಿ ಯಾವ ಧರ್ಮವನ್ನು ವಿಧಾನ ಮಾಡಿದೆ ?

ಪ್ರ. ಸಾ.—ಆತ್ಮನನ್ನು ಉದ್ದೇಶಿಸಿ, ಉತ್ತರ, ದಕ್ಷಿಣಭಾಗದಲ್ಲಿರುವುದು ಈ ಧರ್ಮವನ್ನು ವಿಧಾನ ಮಾಡಿದೆ

ವಾ ವ —'ಸರ್ವಮ್ ಸಮಾಪ್ನೋಷಿ ತತೋಸಿ ಸರ್ವಃ' ಎಂಬ ಗೀತಾ ವಾಕ್ಯದಲ್ಲಿ ಪರಮಾತ್ಮನು ಸರ್ವವನ್ನು ವ್ಯಾಪಿಸಿಕೊಂಡಿರುವುದರಿಂದ ಸರ್ವನು ಎಂದು ಹೇಳಿಸಿ ಕೊಳ್ಳುವನು ಎಂದು ಹೇಳಿರುವುದರಿಂದಲೂ ಮತ್ತು ಆತ್ಮೈವಾಧಸ್ತಾತ್ ಇತ್ಯಾದಿ ಪೂರ್ವ ವಾಕ್ಯದಲ್ಲಿ ಅಧೋಭಾಗಾದಿಗಳಲ್ಲಿ ಪರಮಾತ್ಮನ ವ್ಯಾಪ್ತಿ ಹೇಳಿರುವುದರಿಂದಲೂ "ಆತ್ಮೈವೇದಂ ಸರ್ವಂ" ಈ ವಾಕ್ಯದಲ್ಲಿ ಆತ್ಮನನ್ನು ಉದ್ದೇಶಿಸಿ, ಸರ್ವಂ=ಸರ್ವವ್ಯಾಪ್ತನು ಎಂದು ವಿಧಾನ ಮಾಡಬೇಕಷ್ಟೇ ?

ಪ್ರ ಸಾ.—ಆತ್ಮನನ್ನು ಉದ್ದೇಶಿಸಿ, ಸರ್ವಂ=ಸರ್ವ ವ್ಯಾಪ್ತನು ಎಂದು ಮಾಡಬೇಕು.

ವಾ. ವ —"ಇದಂ ಸರ್ವಂ" ಈ ಎಲ್ಲಾ ಜಗತ್ತು ಆತ್ಮನಲ್ಲಿ ಕಲ್ಪಿತವಾದುದು ಎಂಬ ಅರ್ಥವು ಆಗುವದಿಲ್ಲವಷ್ಟೆ ?

ಪ್ರ ಸಾ ಉತ್ತರವಿಲ್ಲ

---

## ವಾದಿಯ ವಿಚಾರಣೆ.

ಪ್ರ. ವ —ಹಾಗಾದರೆ ಈ ವಾಕ್ಯವು ಯಾವ ಅರ್ಥವನ್ನು ತಿಳಿಸಿ ಕೊಡುತ್ತದೆ ಹೇಳಿ ?

ವಾ,—" ಅಥಾತ ಆತ್ಮಾದೇಶ ಏವ ಆತ್ಮೈವಾಧಸ್ತಾತ್ ಆತ್ಮಾ ಉಪರಿಷ್ಟಾತ್ ಆತ್ಮಾ ಪಶ್ಚಾತ್ ಆತ್ಮಾ ಪುರಸ್ತಾತ್ ಆತ್ಮಾ ದಕ್ಷಿಣತಃ ಆತ್ಮಾ ಉತ್ತರತ ಆತ್ಮೈವೇದಂ ಸರ್ವಂ" ಈ ವಾಕ್ಯದ ಪೂರ್ವಭಾಗವನ್ನು ನೋಡಿದರೆ ಪರಮಾತ್ಮನು ಪೂರ್ವ ಪಶ್ಚಿಮ ದಕ್ಷಿಣೋತ್ತರದಲ್ಲಿದ್ದಾನೆ, ಹೆಚ್ಚಿಗೆ ಹೇಳುವುದೇನು ಸರ್ವಂ=ಎಲ್ಲಾ ಪದಾರ್ಥಗಳಲ್ಲಿಯೂ ವ್ಯಾಪಿಸಿಕೊಂಡಿದ್ದಾನೆ ಈ ಪ್ರಕಾರವಾಗಿ ಪರಮಾತ್ಮನ ವ್ಯಾಪ್ತಿಯು ಈ ವಾಕ್ಯದಿಂದ ತಿಳಿಯುತ್ತದೆ, ಇಂತಹ ಪರಮಾತ್ಮನ ವ್ಯಾಪ್ತಿಯನ್ನು ಯಾವನು ತಿಳಿಯುತ್ತಾನೆಯೋ ಅವನು ಸರ್ವಲೋಕಗಳಲ್ಲಿ ಸಂಚಾರ ಮಾಡಲು ಸಮರ್ಥನಾಗುತ್ತಾನೆ ಎಂಬ ಅರ್ಥವನ್ನು ಈ ವಾಕ್ಯವು ತಿಳಿಸಿ ಕೊಡುತ್ತದೆಂದು ನಾವು ಹೇಳುತ್ತೇವೆ

ವಾ. ವ.– ಮೈ ಲಾರ್ಡ (೩) 'ಆತ್ಮೈವೇದಂ ಸರ್ವಂ' ಈ ವಾಕ್ಯದಲ್ಲಿ ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವ ಪದವಿಲ್ಲ

(b) ಆತ್ಮ ಶಬ್ದಕ್ಕೆ ಮುಖ್ಯವೃತ್ತಿಯಿಂದಾಗುವ ಅರ್ಥವನ್ನು ಬಿಟ್ಟು ಅಮುಖ್ಯವೃತ್ತಿಯಿಂದಾಗುವ ಅರ್ಥವನ್ನು ಹೇಳಬೇಕಾದರೆ 'ಆತ್ಮಾ' ಈ ಶಬ್ದಕ್ಕೆ ಅಮುಖ್ಯವೃತ್ತಿಯಿಂದ 'ಆತ್ಮನಲ್ಲಿ ಕಲ್ಪಿತ' ಎಂಬರ್ಥವನ್ನೇಕೆ ತೆಗೆದು ಕೊಳ್ಳಬೇಕು ? 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವ' ಇತ್ಯಾದಿ ವಾಕ್ಯಾನುಸಾರವಾಗಿ ಆತ್ಮಾ ಸರ್ವಂ=ಸರ್ವವ್ಯಾಪ್ತನೆಂಬ ಅರ್ಥವನ್ನು ಏಕೆ ಅಂಗೀಕರಿಸಕೂಡದು. ಈ ಅರ್ಥವು 'ಆತ್ಮೈವ ಅಧಸ್ತಾತ್ ಆತ್ಮಾ ಉಪರಿಷ್ಟಾತ್' ಇತ್ಯಾದಿ ಪೂರ್ವವಾಕ್ಯಗಳಿಗೂ ಮತ್ತು ಇತರ ವಾಕ್ಯಗಳಿಗೂ ಅನುಕೂಲವಾಗಿಯೂ ಅವಿರುದ್ಧವಾಗಿರುತ್ತದೆ

ಆತ್ಮ ಶಬ್ದದ ಅರ್ಥವನ್ನು ಆತ್ಮನಲ್ಲಿ ಕಲ್ಪಿತವಾದುದು, ಎಂದು ಮಾಡುವದು, ಪೂರ್ವವಾಕ್ಯಗಳಿಗೂ ಸತ್ಯತ್ವಬೋಧಕವಾದ ಅನೇಕವಾದ ಇತರ ವಾಕ್ಯಗಳಿಗೂ ವಿರುದ್ಧವಾಗಿದೆ ಮತ್ತು ಜಗತ್ತು ಕಲ್ಪಿತವಾಗಿದೆ ಎಂಬರ್ಥಕ್ಕೆ ಅನುಕೂಲವಾದ ಪ್ರಮಾಣಗಳು ಇಲ್ಲದಿರುವುದರಿಂದ ಆ ಅರ್ಥವು ಸರಿಯಾದುದು ಅಲ್ಲ.

(c) ಮತ್ತು ಈ ಮಂತ್ರದ ತರುವಾಯದಲ್ಲಿರುವ 'ಸರ್ವೇಷು ಲೋಕೇಷು ಕಾಮಚಾರೋ ಭವತಿ' 'ಏವಂ ಪಶ್ಯನ್ ಏವಂ ಮನ್ವಾನ' ಇತ್ಯಾದಿ ಉತ್ತರ ವಾಕ್ಯಗಳಲ್ಲಿ ಪರಲೋಕವುಂಟು ಅಲ್ಲಿ ಜ್ಞಾನಿಗಳು ಸಂಚರಿಸುತ್ತಾರೆ ಹೀಗೆ ಪರಲೋಕ, ಜ್ಞಾನಿ ಸಂಚಾರ, ಇತ್ಯಾದಿ ಅನೇಕ ಜಗತ್ತು ಉಂಟೆಂದು ಹೇಳಿರುವುದರಿಂದ, ಇವುಗಳಿಗೆ ಪೂರ್ವದಲ್ಲಿರುವ 'ಆತ್ಮೈವೇದಂ ಸರ್ವಂ' ಈ ವಾಕ್ಯಕ್ಕೆ 'ಜಗತ್ತು ಮಿಥ್ಯೆಯಾದುದು' ಎಂದು ಅರ್ಥ ಹೇಳಿದರೆ 'ನಮ್ಮ ತಾಯಿಯು ಬಂಜೆ' ಎಂಬ ವಾಕ್ಯದಂತೆ ಸ್ವವ್ಯಾಹತ ( ವಿರುದ್ಧ ) ವಾಗುವದು ಆದುದರಿಂದ ಈ ವಾಕ್ಯದ ಅರ್ಥವು ಜಗತ್ತು ಮಿಥ್ಯಯಾದುದು ಎಂದು ಆಗುವುದಿಲ್ಲ.

(d) ಪೂರ್ವವಾಕ್ಯದಲ್ಲಿ ಆತ್ಮನನ್ನು ಉದ್ದೇಶಿಸಿ ಉತ್ತರ ದಕ್ಷಿಣ ಭಾಗಗಳಲ್ಲಿರುವವನೆಂದು ವಿಧಾನ ಮಾಡಿರುವುದರಿಂದ ಈ ವಾಕ್ಯವಾದರೂ ಆತ್ಮನನ್ನುದ್ದೇಶಿಸಿ ಆತನು ಸರ್ವವ್ಯಾಪ್ತನೆಂದೇ ವಿಧಿಸುತ್ತದೆ ಹೀಗೆಂದು ಹೇಳುವುದು ಆವಶ್ಯಕವಾದುದರಿಂದ 'ಸರ್ವಂ ಆತ್ಮಾ' ಹೀಗೆ ಸರ್ವವನ್ನು ಉದ್ದೇಶಿಸಿ ಆತ್ಮಾ ಎಂದರೆ ಆತ್ಮನಲ್ಲಿ ಕಲ್ಪಿತವೆಂದು ವಿಧಾನ ಮಾಡುವುದು ಕೂಡುವುದಿಲ್ಲ. ಆದುದರಿಂದ 'ಆತ್ಮೈ ವೇದಂ' ಈ ವಾಕ್ಯವು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ ಪ್ರತ್ಯುತ 'ಇದಂ–ಜಗತ್ ವರಿಷ್ಠಂ=ವರತಮಂ' ಹೀಗೆ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಜಗತ್ತಿಗೆ ಉತ್ತಮೋತ್ತಮತ್ವವನ್ನು ಹೇಳಿರುವುದರಿಂದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ. ಜಗತ್ತು ಸುಳ್ಳಾದರೆ ಅದಕ್ಕೆ ಉತ್ತಮತ್ವವು ಕೂಡುವುದು ಹೇಗೆ ? ಈ ಅನೇಕ ಕಾರಣಗಳಿಂದ ಈ ವಾಕ್ಯವು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ.

---

# ' ನೇಹ ನಾನಾಸ್ತಿಕಿಂಚನ ' ಎಂಬ ಶ್ರುತಿಯ ವಿಚಾರಣೆ.

೨೫-೩-೧೯೨೭

ಪ್ರ ವ.—ಶಾಸ್ತ್ರಿಗಳೇ ! " ತದನನ್ಯತ್ವಮಾರಂಭಣಶಬ್ದಾದಿಭ್ಯ " ಈ ಸೂತ್ರದಲ್ಲಿರುವ ಆದಿ ಪದದಿಂದ ತೆಗೆದುಕೊಂಡ ಕಾಠಕ ಮತ್ತು ಬೃಹದಾರಣ್ಯದಲ್ಲಿರುವ " ನೇಹನಾನಾಸ್ತಿ ಕಿಂಚನ " ಈ ವಾಕ್ಯಗಳಿಂದ ಜಗತ್ತಿಗೆ ಮಿಥ್ಯಾತ್ವವು ಹೇಗೆ ಸಿದ್ಧವಾಗುತ್ತದೆ ?

ಪ್ರ ಸಾ —ಇಹ=ಈ ಬ್ರಹ್ಮನಲ್ಲಿ, ನಾನಾ=ನಾನಾ ಪ್ರಕಾರದ, ಕಿಂಚನ=ಯಾವ ಜಗತ್ತೂ, ನಾಸ್ತಿ=ಇಲ್ಲ ಈ ಎರಡು ವಾಕ್ಯಗಳು ಹೀಗೆ ತಿಳಿಸುತ್ತಿರುವುದರಿಂದ ಜಗತ್ತಿನ ಮಿಥ್ಯಾತ್ವವು=ಮೂರೂ ಕಾಲಗಳಲ್ಲಿ ಇಲ್ಲದಿರುವುದು ಸಿದ್ಧಿಸುತ್ತದೆ

—— 0 ——

## ಕ್ರಾಸ್ ಎಕ್ಸಾಮಿನೇಶನ್.

ವಾ ವ.—' ನೇಹ ನಾನಾಸ್ತಿ ಕಿಂಚನ " ಈ ವಾಕ್ಯವು ಕಾಠಕೋಪನಿಷತ್ತಿನಲ್ಲಿ ಯಾವ ಅಧ್ಯಾಯದ ಎಷ್ಟನೆಯ ವಲ್ಲಿಯಲ್ಲ ಹೇಳಿದೆ ?

ಪ್ರ ಸಾ. –ಎರಡನೆಯ ಅಧ್ಯಾಯದ ನಾಲ್ಕನೆಯ ವಲ್ಲಿಯಲ್ಲಿಯ ೧೧ ನೆಯ ಮಂತ್ರದಲ್ಲ

ವಾ. ವ. —ನೀವು " ನೇಹ ನಾನಾಸ್ತಿ ಕಿಂಚನ " ಈ ವಾಕ್ಯದ ಪೂರ್ವೋತ್ತರ ವಾಕ್ಯಗಳನ್ನು ನೋಡಿರುವಿರೇನು ?

ಪ್ರ ಸಾ —ನೋಡಿದ್ದೇವೆ.

ವಾ. ವ —ಐದನೆಯ ಮಂತ್ರವನ್ನು ಹೇಳಿ ?

ಪ್ರ ಸಾ —" ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ "

ವಾ. ವ.—ಶಾಸ್ತ್ರಿಗಳೇ ಈ ವಾಕ್ಯದ ಅರ್ಥವೇನು ?

ಪ್ರ. ಸಾ.—ಪೂರ್ವದಲ್ಲಿ ಉಂಟಾದ ಜಗತ್ತಿಗೂ ಮುಂದೆ ಉಂಟಾಗುವ ಜಗತ್ತಿಗೂ ಸ್ವಾಮಿಯಾದ ಯಾವ ಪರಮಾತ್ಮನೋ ಅವನನ್ನು ಯಾರು ತಿಳಿಯುತ್ತಾರೆಯೋ ಅವರು ತಮ್ಮನ್ನು ರಕ್ಷಿಸಿಕೊಳ್ಳಲು ಇಚ್ಛಿಸುವುದಿಲ್ಲ

ವಾ, ವ.—ಒಂಬತ್ತನೆಯ ಮಂತ್ರವನ್ನು ಹೇಳಿ ?

ಪ್ರ ಸಾ —" ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರಚ ಗಚ್ಛತಿ ತಂ ದೇವಾಃ ಸರ್ವೇ ಅರ್ಪಿತಾಸ್ತದುನಾತ್ಯೇತಿ ಕಶ್ಚನ ಏತದ್ವೈತತ್ "

ವಾ. ವ.—ಇದರ ಅರ್ಥವೇನು ?

ಪ್ರ. ಸಾ.— ಯಾವ ಪರಮಾತ್ಮನ ಪ್ರೇರಣೆಯಿಂದ ಸೂರ್ಯನು ಉದಯಿಸುತ್ತಾನೋ, ಯಾವನ ಪ್ರೇರಣೆಯಿಂದ ಅಸ್ತವನ್ನು ಹೊಂದುತ್ತಾನೋ, ಆ ಪರಮಾತ್ಮನ ಆಶ್ರಯದಲ್ಲಿ ಎಲ್ಲಾ ದೇವತೆಗಳು ಇರುತ್ತಾರೆ ಯಾರೂ ಅವನನ್ನು ಅತಿಕ್ರಮಿಸುವವರಿಲ್ಲ ಎಂದು ಅರ್ಥವು.

ವಾ ವ — ೫-೯ ಈ ಎರಡು ಮಂತ್ರಗಳಿಂದ ಏನು ಸಿದ್ಧವಾಗುತ್ತದೆ ?

ಪ್ರ. ಸಾ — ಪರಮಾತ್ಮನು ಹಿಂದಕ್ಕೆ ಆದ, ಮುಂದಕ್ಕೆ ಆಗುವ ಜಗತ್ತಿನ ಸ್ವಾಮಿಯು, ಸೂರ್ಯೋದಯಾದಿಗಳಿಗೆ ಕಾರಣನು, ಸಮಸ್ತ ದೇವತಾ ಲೋಕಗಳ ಆಶ್ರಯನು, ಅವನನ್ನು ಅತಿಕ್ರಮಿಸಿ ಇರುವವನು ಯಾರೂ ಇಲ್ಲ ಎಂದು ಸಿದ್ಧ ವಾಗುತ್ತದೆ

ವಾ ವ — ಈ ಲೋಕವುಂಟು, ಪರಲೋಕವುಂಟು, ಸೂರ್ಯನುಂಟು, ದೇವತೆಗಳುಂಟು, ಸೂರ್ಯನ ಉದಯಾಸ್ತಗಳಿಗೆ ಈಶ್ವರನು ಕಾರಣನು, ದೇವತೆಗಳಿಗೆ ಆಶ್ರಯನು, ಹೀಗೆಂದು ಹೇಳಿದರೆ ಸೂರ್ಯಾದಿ ದೇವತೆಗಳು, ಜಗತ್ತು ಸತ್ಯವೆಂದು ಹೇಳಿದಂತಾಯಿತಷ್ಟೆ ಅಲ್ಲವೇನು ?

ಪ್ರ ಸಾ — ಹಿಂದಿನ ಮಂತ್ರಗಳಿಂದ ಜಗತ್ತು ಉಂಟು, ಸೂರ್ಯಾದಿ ದೇವತೆಗಳು ಉಂಟು ಹೀಗೆಂದು ಹೇಳಿದ್ದರೂ ಆ ಎಲ್ಲವೂ ಸತ್ಯವಾದುವುಗಳು ಎಂದು ಹೇಳುವ ವಿಷಯದಲ್ಲಿ ವೇದಗಳಿಗೆ ತಾತ್ಪರ್ಯವಿಲ್ಲ, ಅವು ಅವುಗಳನ್ನು ಅನುವಾದ ಮಾಡುತ್ತವೆ

ವಾ. ವ — " ಈ ಮಂತ್ರವು ಜಗತ್ತಿನ ಸತ್ಯತ್ವವನ್ನು ತಿಳಿಸುತ್ತಿದ್ದರೂ ಅವು ಉಂಟು ಎಂದು ತಿಳಿಸುವುದರಲ್ಲಿ ಮಂತ್ರಗಳಿಗೆ ತಾತ್ಪರ್ಯವಿಲ್ಲ ಅವುಗಳನ್ನು ಅನುವಾದ ಮಾಡುತ್ತವೆ " ಎಂದು ನಿಮಗೆ ಹೇಗೆ ಗೊತ್ತಾಯಿತು

ಪ್ರ. ಸಾ — " ನೇಹ ನಾನಾಸ್ತಿ ಕಿಂಚನ ' ಈ ೧೧ ನೆಯ ಮಂತ್ರದಲ್ಲಿ ಜಗತ್ತಿನ ನಿಷೇಧವನ್ನು ಮಾಡಿದೆಯಾದುದರಿಂದ ಈ ನಿಷೇಧ ಮಾಡುವುದಕ್ಕಾಗಿ ಪೂರ್ವ ಮಂತ್ರವು ಅನುವಾದ ಮಾಡುತ್ತದೆ " ಹೀಗೆಂದು ನಾವು ತಿಳಿದುಕೊಂಡಿದ್ದೇವೆ

ವಾ. ವ — ಅನುವಾದವು ಯಾವುದಕ್ಕೆ ಹೊಂದುತ್ತದೆ ?

ಪ್ರ. ಸಾ. — ಪೂರ್ವದಲ್ಲಿ ಸಿದ್ಧವಾದ ಪದಾರ್ಥಗಳಿಗೆ ಅನುವಾದವು ಕೂಡುತ್ತದೆ.

ವಾ. ವ. — ದೇವತೆಗಳು, ಹಿಂದಿನ ಜಗತ್ತು, ಮುಂದಾಗುವ ಜಗತ್ತು, ಈ ಲೋಕವು, ಪರಲೋಕವು, ಈ ಎಲ್ಲವೂ ಪ್ರತ್ಯಕ್ಷದಿಂದಲೂ ಅನುಮಾನದಿಂದಲೂ ಸಿದ್ಧವಾಗುತ್ತವೆ ಅಲ್ಲವೇನು ?

ಪ್ರ ಸಾ. — ಪರಲೋಕಾದಿ ದೇವತೆಗಳು, ಪ್ರತ್ಯಕ್ಷಾನುಮಾನದಿಂದ ಸಿದ್ಧವಾಗುವುದಿಲ್ಲ, ವೇದಗಳಿಂದಲೇ ಸಿದ್ಧವಾಗುತ್ತವೆ

ವಾ. ವ — ಶಾಸ್ತ್ರಿಗಳೇ ನೀವು ೩-೨-೨ ಬ್ರಹ್ಮಸೂತ್ರದ ಶಾಂಕರಭಾಷ್ಯವನ್ನು ನೋಡಿರುವಿರೇನು ?

ಪ್ರ. ಸಾ — ನೋಡಿದ್ದೇವೆ.

ವಾ ವ. — ' ನೇತಿ ನೇತಿ ' ( ಬೃ. ೨-೩-೬ ) ಈ ವಾಕ್ಯವು ಬ್ರಹ್ಮನ ನಿಷೇಧವನ್ನು ಮಾಡುತ್ತದೆಂದು ಏಕೆ ಹೇಳ ಕೂಡದು ಎಂಬ ಆಕ್ಷೇಪ ಬರಲು ಶಂಕರಾಚಾರ್ಯರು ಏನು ಉತ್ತರವನ್ನು ಹೇಳಿದ್ದಾರೆ ?

ಪ್ರ. ಸಾ —† “ ಬ್ರಹ್ಮವಿದಾಪ್ನೋತಿ ಪರಂ ” ಇತ್ಯಾದಿ ಅನೇಕ ವಾಕ್ಯಗಳಲ್ಲಿ ಬ್ರಹ್ಮನಿದ್ದಾನೆ ಎಂದು ಹೇಳಿ ಪುನಃ ಆ ಬ್ರಹ್ಮನಿಲ್ಲವೆಂದು ಹೇಳುವುದು ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ = ಕೆಸರನ್ನು ತುಳಿದು ಆ ಮೇಲೆ ತೊಳೆದುಕೊಳ್ಳುವುದಕ್ಕಿಂತ ಮೊದಲೇ ತುಳಿಯದಿರುವುದೇ ಮೇಲು ಎಂಬ ಪ್ರಸಿದ್ಧವಾದ ನ್ಯಾಯಕ್ಕೆ ವಿರುದ್ಧ ವಾಗುತ್ತದೆ ಬ್ರಹ್ಮನಿಲ್ಲ ಎಂದು ತಿಳಿಸುವುದು ಶ್ರುತಿಯ ಅಭಿಪ್ರಾಯವಿದ್ದರೆ ಪೂರ್ವದಲ್ಲಿಯೇ ಬ್ರಹ್ಮನುಂಟೆಂದು ಹೇಳುವ ಅವಶ್ಯಕತೆ ಇರಲಿಲ್ಲವೆಂದು ಉತ್ತರವನ್ನು ಹೇಳಿದರು

ವಾ. ವ —‘ ವಿಶ್ವಂ ಸತ್ಯಂ ’ ಇತ್ಯಾದಿ ಅನೇಕ ವೇದವಾಕ್ಯಗಳಿಂದ ಜಗತ್ತುಂಟೆಂದು ಹೇಳಿ ಪುನ ಇಲ್ಲವೆಂದು ಹೇಳಿದರೆ ಪ್ರಕ್ಷಾಲನಾದ್ಧಿ ಪಂಕಸ್ಯ ಎಂಬ ನ್ಯಾಯಕ್ಕೆ ವಿರೋಧವಾಗುವುದಿಲ್ಲವ ?

ಪ್ರ ಸಾ.—‡ “ ಶಾಸ್ತ್ರಗಳು ಮೂರ್ತಾಮೂರ್ತರೂಪವಾದ ಜಗತ್ತು ಉಂಟು ಎಂದು ಪ್ರತಿಪಾದನೆ ಮಾಡಿ ಆ ಮೇಲೆ ಆ ಜಗತ್ತು ಇಲ್ಲ ಎಂದು ಹೇಳಿದರೆ ‘ ಪ್ರಕ್ಷಾಲನಾದ್ಧಿ ’ ಎಂಬ ನ್ಯಾಯದಿಂದ ವಿರೋಧ ಬರುವುದಲ್ಲವೆ ? ” ಎಂದು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ಆಕ್ಷೇಪ ಮಾಡಿರುವುದರಿಂದ ನೀವು ಮಾಡಿದ ಆಕ್ಷೇಪವು ಹೊಸದೇನು ಅಲ್ಲ !

ವಾ ವ.—ಆಕ್ಷೇಪವು ಹೊಸದಾಗಿರಲಿ ಅಥವಾ ಶಂಕರಾಚಾರ್ಯರು ಮಾಡಿರುವುದರಿಂದ ಹಳಯದಾಗಲಿ ನಾವು ಕೇಳಿದ ಪ್ರಶ್ನೆಗೆ ಉತ್ತರವನ್ನು ಹೇಳಿ ?

ಪ್ರ ಸಾ.—§ ಮೂರ್ತಾಮೂರ್ತಾತ್ಮಕ *ಜಗತ್ತುಂಟು ಎಂದು ಹೇಳುವ ವಿಷಯದಲ್ಲಿ ಶ್ರುತಿಯ (ಶಾಸ್ತ್ರದ) ತಾತ್ಪರ್ಯವಿಲ್ಲ; ಲೋಕಸಿದ್ಧವಾದ, ಬ್ರಹ್ಮನಲ್ಲಿ ಕಲ್ಪಿತ ವಾಗಿರುವ, ಜಗತ್ತಿನ ನಿಷೇಧ ಮಾಡುವದಕ್ಕಾಗಿ ಶ್ರುತಿಯು ಆ ಜಗತ್ತನ್ನು ಅನುವಾದ ಮಾಡುತ್ತದೆ ಹೊರತು ಉಂಟೆಂದು ಹೇಳುವುದಿಲ್ಲ ವಾದುದರಿಂದ, ಜಗತ್ತುಂಟು, ಜಗತ್ತು ಇಲ್ಲ ಎಂದು

---

† ಸರ್ವವೇದಾಂತವಾಕ್ಯೇಷೂಪಪ್ರಸಂಗಾಚ್ಚ ನ ಹಿ ಮುಮುಕ್ಷುಣಾ ಪರಿಗತಬ... ‘ ಬ್ರಹ್ಮ ವಿದಾಪ್ನೋತಿ ಪರಂ ’ ( ತೈ ೨-೧-೧ ) ‘ ಸತ್ಯಂಜ್ಞಾನಮನಂತಂ ಬ್ರಹ್ಮ ’ ( ತೈ ೨-೧-೨ ) ಇತ್ಯೇವಮಾದಿಷು ವೇದಾಂತೇಷು ಬ್ರಹ್ಮ ಪ್ರತಿಪಾದ್ಯ ತಸ್ಯೈವ ಪುನರಭಾವೋಽಭಿಲಪ್ಯೇತ ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ಇತಿ ಹಿ ನ್ಯಾಯಃ ( ಬ್ರಹ್ಮ ಸೂ ಶಂ. ಭಾ. ೩-೨-೨೨ ).

‡ ನ ಚಾತ್ರೇಯಮಾಶಂಕಾ ಕರ್ತವ್ಯಾ ಕಥಂ ಹಿ ಶಾಸ್ತ್ರಂ ಸ್ವಯಮೇವ ಬ್ರಹ್ಮಣೋ ರೂಪದ್ವಯಂ ದರ್ಶಯಿತ್ವಾ ಸ್ವಯಮೇವ ಪುನಃ ಪ್ರತಿಷೇಧತಿ ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದಸ್ಪರ್ಶನಂ ವರಂ ಇತಿ ( ೩-೨-೨೨ )

§ ಯತೋ ನೇದಂ ಶಾಸ್ತ್ರಂ ಪ್ರತಿಪಾದ್ಯತ್ವೇನ ಬ್ರಹ್ಮಣೋ ರೂಪದ್ವಯಂ ನಿರ್ದಿಶತಿ ಲೋಕಪ್ರಸಿದ್ಧಂತ್ವಿದಂ ರೂಪದ್ವಯಂ ಬ್ರಹ್ಮಣಿ ಕಲ್ಪಿತಂ ಪರಾಮೃಶತಿ ಪ್ರತಿಷೇಧ್ಯತ್ವಾಯ ( ೩-೨-೨೨ ).

* ಮೂರ್ತವೆಂದರೆ ಪೃಥ್ವಿ, ಜಲ, ತೇಜ, ಅಮೂರ್ತವೆಂದರೆ ಗಾಳಿ ಮತ್ತು ಆಕಾಶವು,

ತಾನೇ ಎರಡು ಪರಸ್ಪರ ವಿರುದ್ಧವಾದುದನ್ನು ಹೇಳುವುದಿಲ್ಲ, ಆದುದರಿಂದ ಪ್ರಕ್ಷಾಲನಾದ್ಧಿ ಪಂಕಸ್ಯ ಈ ನ್ಯಾಯದಿಂದ ವಿರೋಧವುಂಟಾಗುವುದಿಲ್ಲ

ವಾ ವ —ಪರಲೋಕ, ದೇವತಾ, ಮುಂತಾದ ಜಗತ್ತು ಪ್ರತ್ಯಕ್ಷಾದಿಗಳಿಂದ ಸಿದ್ಧವಾಗುವುದಿಲ್ಲ, ಆಗಮಗಳಿಂದಲೇ ಸಿದ್ಧವಾಗಬೇಕಷ್ಟೆ ?

ಪ್ರ ಸಾ —ಪರಲೋಕಾದಿ ಜಗತ್ತು ಆಗಮಗಳಿಂದಲೇ ತಿಳಿಯಬೇಕಾದುದು.

ವಾ ವ —ಆಗಮಗಳು ಪರಲೋಕಾದಿ ಜಗತ್ತುಂಟೆಂದು ತಿಳಿಸಿ ಪುನ ಇಲ್ಲವೆಂದು ತಿಳಿಸಿದರೆ ಆಗಮಗಳಿಗೆ " ಪ್ರಕ್ಷಾಲನಾದ್ಧಿ " ಎಂಬ ನ್ಯಾಯದಿಂದ ವಿರೋಧವುಂಟಾಗಲಾರದೋ ?

ಪ್ರ. ಸಾ—ಉತ್ತರವಿಲ್ಲ.

ವಾ ವ —ಅನುವಾದವನ್ನು ಮಾಡಿ ಅನಂತರ ನಿಷೇಧಿಸುವ ಸಂಪ್ರದಾಯವು ಹೇಗೆ ಉಂಟೋ ಹಾಗೆ ನಿಷೇಧಿಸಿ ಆ ಮೇಲೆ ಅನುವಾದ ಮಾಡುವ ಸಂಪ್ರದಾಯವು ಎಲ್ಲಿಯಾದರೂ ಉಂಟೋ ?

ಪ್ರ ಸಾ — ಮುಂಚೆ ಉಂಟೆಂದು ಅನುವಾದ ಮಾಡಿ ಆ ಮೇಲೆ ನಿಷೇಧ ಮಾಡುವ ಸಂಪ್ರದಾಯವಿದೆ, ನಿಷೇಧಾನಂತರ ಅನುವಾದ ಮಾಡುವ ಸಂಪ್ರದಾಯವಿಲ್ಲ

ವಾ ವ —' ನೇಹ ನಾನಾಸ್ತಿ ಕಿಂಚನ ' ಈ ಕಾಠಕ ವಾಕ್ಯದ ಮುಂದೆ ಇರುವ ಈ ಉಪನಿಷತ್ತಿನ ೧೨ ನೆಯ ಮಂತ್ರವನ್ನು ಮತ್ತು ೧೩ ನೆಯ ಮಂತ್ರದ ಮೂರನೇಯ ಪಾದವನ್ನು ಹೇಳಿ ?

ಪ್ರ ಸಾ.— ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ | ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೆ || ಏತದ್ವೈತತ್ || ೧೨ || ಈಶಾನೋ ಭೂತಭವ್ಯಸ್ಯ || ೧೩ ||

ವಾ. ವ —ಈ ವಾಕ್ಯದ ಅರ್ಥವೇನು ?

ಪ್ರ. ಸಾ —ಅಂಗುಷ್ಠ ಪರಿಮಿತ ಪರಮಾತ್ಮನು, ಆತ್ಮನಿ ಮಧ್ಯೇ=ಜೀವನಲ್ಲಿ ಇರುತ್ತಾನೆ, ಹಿಂದಕ್ಕೆ ಆಗಿ ಹೋದ ಮುಂದಕ್ಕೆ ಆಗುವ ಜಗತ್ತಿನ ಸ್ವಾಮಿಯು. (೧೨) ಭೂತ=ಆಗಿ ಹೋದ, ಭವ್ಯ-ಆಗುವ ( ಹುಟ್ಟುವ ) ಜಗತ್ತಿನ ಸ್ವಾಮಿಯು ಎಂದು ಅರ್ಥವು ( ೧೩ )

ವಾ. ವ.—ಈ ವಾಕ್ಯದಿಂದ ಏನು ಸಿದ್ಧವಾಗುತ್ತದೆ

ಪ್ರ ಸಾ.—ಪರಮಾತ್ಮನು ಜೀವನಲ್ಲಿದ್ದಾನೆ, ಮತ್ತು ಭೂತ ಭವಿಷ್ಯತ್ ಜಗತ್ತಿಗೆ ಸ್ವಾಮಿಯಾಗಿದ್ದಾನೆ ಎಂದು ಸಿದ್ಧವಾಗುತ್ತದೆ

ವಾ. ವ.—ಎರಡೂ ಮಂತ್ರಗಳಲ್ಲಿ ಹೀಗೆ ಪ್ರತಿಪಾದನೆ ಮಾಡಿರುವುದರಿಂದ ಹಿಂದಕ್ಕಾಗಿರುವ, ಮುಂದಕ್ಕಾಗುವ ಜಗತ್ತು ಸತ್ಯವೆಂದು ಸಿದ್ಧವಾಗುತ್ತದೆಯೋ ? ಸುಳ್ಳೆಂದು ಸಿದ್ಧವಾಗುತ್ತದೆಯೋ ?

ಪ್ರ. ಸಾ.— ಸತ್ಯವೆಂದು ಸಿದ್ಧವಾಗುತ್ತದೆ.

ವಾ. ವ.—ಜಗತ್ತನ್ನು ನಿಷೇಧಿಸುವ ವಾಕ್ಯವಾವುದು ?
ಪ್ರ ಸಾ —' ನೇಹ ನಾನಾಸ್ತಿ ಕಿಂಚನ ' ಎಂಬ ವಾಕ್ಯವು
ವಾ ವ —ನೇಹ ನಾನಾಸ್ತಿ ಕಿಂಚನ ' ಈ ವಾಕ್ಯವು ' ಅಂಗುಷ್ಠಮಾತ್ರಃ ' ಎಂಬ ವಾಕ್ಯಕ್ಕೆ ಹಿಂದೆ ಇದೆಯೋ ಮುಂದೆ ಇದೆಯೋ ?
ಪ್ರ. ಸಾ —ಹಿಂದೆ ಇದೆ.
ವಾ ವ —ಪೂರ್ವದಲ್ಲಿರುವ ' ನೇಹ ನಾನಾಸ್ತಿ ' ಈ ವಾಕ್ಯವು ಮುಂದಿನ ವಾಕ್ಯದ ಅರ್ಥವನ್ನು ನಿಷೇಧಿಸುತ್ತದೆಯೋ ?
ಪ್ರ ಸಾ —ಪೂರ್ವದಲ್ಲಿರುವ " ನೇಹ ನಾನಾಸ್ತಿ, ಎಂಬ ( ಕಾ ೨ ೪-೧೧ ) ಈ ವಾಕ್ಯವು ಮುಂದೆ ಇರುವ ' ಈಶಾನೋ ಭೂತಭವ್ಯಸ್ಯ ( ೨-೪-೧೨) ' ಈಶಾನೋ ಭೂತ ಭವ್ಯಸ್ಯ ' (೨-೪-೧೩) ಈ ವಾಕ್ಯಗಳಲ್ಲಿ ಹೇಳಿದ ಜಗತ್ತನ್ನು ನಿಷೇಧಿಸುವುದಿಲ್ಲ.
ವಾ ವ —ಹಾಗಾದರೆ ' ಈಶಾನೋ ಭೂತಭವ್ಯಸ್ಯ ' ' ಈಶಾನೋ ಭೂತ ಭವ್ಯಸ್ಯ ' ಈ ವಾಕ್ಯಗಳಲ್ಲಿ ಪ್ರತಿಪಾದಿಸಿದ ಜಗತ್ತಿನ ನಿಷೇಧವಾಗ ಲಿಲ್ಲ ವಾದುದರಿಂದ ಜಗತ್ತು ನಿಜವಾದುದಷ್ಟೆ ?
ಪ್ರ. ಸಾ.— ಉತ್ತರವಿಲ್ಲ
ವಾ. ವ.—೩-೨-೨೭ ಬ್ರಹ್ಮಸೂತ್ರದ ಶಾಂಕರಭಾಷ್ಯವನ್ನು ನೋಡಿರುವಿರಷ್ಟೆ ?
ಪ್ರ ಸಾ.— ನೋಡಿದ್ದೇವೆ
ವಾ ವ.—ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ " ಈ ವಾಕ್ಯವು, ಶಂಕರಾಚಾರ್ಯರು ತಮ್ಮ ಭಾಷ್ಯದಲಿ ಜೀವನು ಪರಮಾತ್ಮನಿಂದ ಭಿನ್ನನು ( ಬೇರೆ ) ಎಂಬುದನ್ನು ತಿಳಿಸಿ ಕೊಡುವುದೆಂದು ಹೇಳಿದ್ದಾರೆಯೋ ಇಲ್ಲವೆ ಅಭಿನ್ನ ಎಂಬುದನ್ನು ತಿಳಿಸಿ ಕೊಡುವುದೆಂದು ಹೇಳಿದ್ದಾರೆಯೋ ?
ಪ್ರ. ಸಾ —ಈ ವಾಕ್ಯವು ಜೀವನು ಪರಮಾತ್ಮನಿಂದ ಭಿನ್ನನು ( ಬೇರೆ ) ಎಂಬುದನ್ನು ತಿಳಿಸಿ ಕೊಡುತ್ತದೆಂದು ಹೇಳಿದ್ದಾರೆ
ವಾ. ವ —ಈ ವಾಕ್ಯದಿಂದ ಭೇದವು ಹೇಗೆ ಸಿದ್ಧಿಸುವುದು ?
ಪ್ರ. ಸಾ.— ಈ ವಾಕ್ಯದಲ್ಲಿ ಜೀವನು ಧ್ಯಾತಾ=ಧ್ಯಾನಮಾಡುವವನು, ದ್ರಷ್ಟಾ= ನೋಡುವವನು, ಮತ್ತು ಪರಮಾತ್ಮನು, ಧ್ಯೇಯ=ಧ್ಯಾನ ಮಾಡಿಸಿ ಕೊಳ್ಳುವವನು, ದ್ರಷ್ಟವ್ಯ = ನೋಡಿಸಿಕೊಳ್ಳುವವನು, ಹೀಗೆಂದು ಜೀವ ಪರಮಾತ್ಮರಿಗೆ ಧ್ಯಾತೃ ಧ್ಯೇಯಭಾವ, ಮತ್ತು ದ್ರಷ್ಟೃ ದ್ರಷ್ಟವ್ಯ ಭಾವರೂಪ ಸಂಬಂಧವು ಹೇಳಿರುವುದರಿಂದ ಜೀವ ಪರಮಾತ್ಮರಿಗೆ ಭೇದವು ಸಿದ್ಧಿಸುತ್ತದೆ ಎಂದು ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿದ್ದಾರೆ
ವಾ ವ —" ಮನಸೈವೇದಮಾಪ್ತವ್ಯಂ " ಎಂಬ ವಾಕ್ಯವು ಮತ್ತು " ಮನಸೈವಾನುದ್ರಷ್ಟವ್ಯಂ " ಎಂಬ ವಾಕ್ಯವು ಯಾವ ಉಪನಿಷತ್ತಿನಲ್ಲಿವೆ ?

ಪ್ರ ಸಾ — " ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ " ಎಂಬ ವಾಕ್ಯವು (೨-೪-೧೧) ಕಾಠಕೋಪನಿಷತ್ತಿನಲ್ಲಿದೆ ಮತ್ತು " ಮನಸೈವಾನು ದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ " ಎಂಬ ಈ ವಾಕ್ಯವು ( ಬೃ ೪-೪-೧೯ ) ಬೃಹದಾರಣ್ಯಕೋಪನಿಷತ್ತಿನಲ್ಲಿದೆ

ವಾ. ವ.— ಈ ಎರಡು ವಾಕ್ಯಗಳ ಅರ್ಥವೇನು ?

ಪ್ರ ಸಾ.— ಈ ಬ್ರಹ್ಮನು ಮನಸಿನಿಂದಲೇ ತಿಳಿಯಬೇಕಾದವನು ಎಂದು ಅರ್ಥವು.

ವಾ. ವ — ಈ ಎರಡು ವಾಕ್ಯಗಳಿಂದ ಏನು ಹೇಳಿದಂತಾಯಿತು ?

ಪ್ರ. ಸಾ.— ಜೀವನು ದ್ರಷ್ಟಾ ( ನೋಡುವವನು ) ಪರಮಾತ್ಮನು ದ್ರಷ್ಟವ್ಯ ( ನೋಡಿಸಿ ಕೊಳ್ಳುವವನು ) ಎಂದು ಹೇಳಿದಂತಾಯಿತು

ವಾ ವ — ಈ ವಾಕ್ಯವು ದ್ರಷ್ಟೃ, ದ್ರಷ್ಟವ್ಯ ಭಾವದಿಂದ ಸಿದ್ಧಿಸುವ ಜೀವನಲ್ಲಿ ಪರಮಾತ್ಮನ ಭೇದವು, ಜ್ಞಾನವು, ಜ್ಞಾನಕ್ಕೆ ಸಾಧನವಾದ ಮನಸ್ಸು, ಈ ಪದಾರ್ಥಗಳಿಗೆ ಸತ್ಯತ್ವವನ್ನು ತಿಳಿಸಿ ಕೊಡುತ್ತದೆಯೋ ಇಲ್ಲವೋ ?

ಪ್ರ ಸಾ.— ಈ ವಾಕ್ಯವು ಜೀವ ಪರಮಾತ್ಮರ ಭೇದ, ಜ್ಞಾನ, ಜ್ಞಾನಕ್ಕೆ ಕಾರಣವಾದ ಮನಸ್ಸು, ಈ ಪದಾರ್ಥಗಳಿಗೆ ಸತ್ಯತ್ವವನ್ನು ತಿಳಿಸಿ ಕೊಡುತ್ತಿದ್ದರೂ ಆ ಭೇದಾದಿಗಳಿಗೆ ಸತ್ಯತ್ವವನ್ನು ತಿಳಿಸುವದರಲ್ಲಿ ವೇದ ವಾಕ್ಯಕ್ಕೆ ತಾತ್ಪರ್ಯವಿಲ್ಲ

ವಾ ವ.— ಬೃಹದಾರಣ್ಯಕ ಮತ್ತು ಕಾಠಕ ಇವುಗಳಲ್ಲಿರುವ ಅನೇಕ ವಾಕ್ಯಗಳು ಜೀವ ಬ್ರಹ್ಮರ ಭೇದವನ್ನೂ ಜಗತ್ತಿಗೆ ಸತ್ಯತ್ವವನ್ನೂ ತಿಳಿಸಿ ಕೊಡುತ್ತಿದ್ದಾಗ್ಯೂ ಭೇದಾದಿಗಳ ಸತ್ಯತ್ವ ವಿಷಯವಾಗಿ ಶ್ರುತಿಗಳಿಗೆ ತಾತ್ಪರ್ಯವಿಲ್ಲವೆಂದು ಹೇಳುವುದಕ್ಕೆ ಆಧಾರವೇನು ?

ಪ್ರ. ಸಾ — ಉತ್ತರವಿಲ್ಲ

---

## ವಾದಿಯ ವಿಚಾರಣೆ.

ಪ್ರ ವ — ಜಗತ್ತು ಸತ್ಯವಾದುದು ಎಂದು ಹೇಳುವುದಕ್ಕೆ ನಿಮಗೆ ಯಾವ ಆಧಾರಗಳಿವೆ.

ವಾ — ಸಮಸ್ತ ವೇದಗಳು, ಎಲ್ಲ ಬ್ರಹ್ಮಸೂತ್ರಗಳೂ, ಎಲ್ಲ ಗೀತೆಯೂ, ಪ್ರತ್ಯಕ್ಷ ಅನುಮಾನವೆಲ್ಲವೂ ಆಧಾರವಾಗಿವೆ

ಪ್ರ. ವ.— ಅವುಗಳಲ್ಲಿ ಕೆಲವನ್ನು ಹೇಳಿ ?

ವಾ.— " ನೇಹ ನಾನಾಸ್ತಿ ಕಿಂಚನ " ಬೃ. ೪-೪-೧೯ ಈ ವಾಕ್ಯದ ಪೂರ್ವೋತ್ತರಗಳಲ್ಲಿರುವ ಅನೇಕ ವಾಕ್ಯಗಳು ಆಧಾರಗಳಾಗಿವೆ.

ಪ್ರ. ವ.— ' ನೇಹ ನಾನಾಸ್ತಿ ಕಿಂಚನ ' ಈ ಬೃಹದಾರಣ್ಯಕ ವಾಕ್ಯದ ಪೂರ್ವದಲ್ಲಿರುವ ಜಗತ್ಸತ್ಯತ್ವವನ್ನು ಪ್ರತಿಪಾದಿಸುವ ವಾಕ್ಯಗಳಾವುವು ?

ವಾ —' ಈಶಾನಂ ಭೂತಭವ್ಯಸ್ಯ ' ||೧೫|| ' ತಂ ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಂ ' || ೧೬ || " ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ " ||೧೭|| " ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷುಶ್ರೋತ್ರಸ್ಯ ಶ್ರೋತ್ರಂ ಮನಸೋ ಯೇಮನೋ ವಿದು ತೇ ನಿಚಿಕ್ಯುರ್ಬ್ರಹ್ಮಪುರಾಣಮಗ್ರ್ಯಂ " ||೧೮|| ಈ ವಾಕ್ಯಗಳು

ಪ್ರ. ವ — ಈ ವಾಕ್ಯಗಳ ಅರ್ಥವೇನು ?

ವಾ. — ಈ ಪೂರ್ವದಲ್ಲಿರುವ ವಾಕ್ಯಗಳು, ಪರಮಾತ್ಮನು ಭೂತಭವ್ಯ ಜಗತ್ತಿನ ಸ್ವಾಮಿ, ( ೧೫ ) ಪ್ರಕಾಶವನ್ನು ಕೊಡುವ ಸೂರ್ಯಾದಿ ಪದಾರ್ಥಗಳಿಗೆ ಪ್ರಕಾಶವನ್ನು ಕೊಡುವವನು ಎಂದು ಪರಮಾತ್ಮನ ಉಪಾಸನೆಯನ್ನು ದೇವತೆಗಳು ಮಾಡುತ್ತಾರೆ ( ೧೬ ), ಆಕಾಶಾದಿ ಸಮಸ್ತ ಪದಾರ್ಥಗಳು ಯಾವ ಪರಮಾತ್ಮನ ಆಶ್ರಯದಲ್ಲಿವೆಯೋ ( ೧೭ ) ಪರಮಾತ್ಮನು ಪ್ರಾಣ, ಚಕ್ಷು ( ಕಣ್ಣು ), ಶ್ರೋತ್ರ ( ಕಿವಿ ), ಮನಸು ಇತ್ಯಾದಿ ಪದಾರ್ಥಗಳಿಗೆ, ಚೇಷ್ಟಾ, ದರ್ಶನ, ಶ್ರವಣ, ಮನನಾದಿ ಶಕ್ತಿಗಳನ್ನು ಕೊಡುವವನು ಹೀಗೆಂದು ಯಾವನು ತಿಳಿಯುತ್ತಾನೆಯೋ ಅವನೇ ಬ್ರಹ್ಮನನ್ನು ತಿಳಿಯುವವನು ( ೧೮ ) ಎಂದು ತಿಳಿಸಿ ಕೊಡುತ್ತವೆ.

ಪ್ರ ವ — ಈ ವಾಕ್ಯಗಳಿಂದ ಏನು ಸಿದ್ಧವಾಗುತ್ತದೆ ?

ವಾ. — ಜಗತ್ತುಂಟು, ದೇವತೆಗಳುಂಟು, ದೇವತೆಗಳಿಗೂ ಪರಮಾತ್ಮನಿಗೂ ಭೇದವಿದೆ, ಪರಮಾತ್ಮನು ಜಗನ್ನಿಯಾಮಕನು, ಚೇಷ್ಟಕತ್ವಾದಿ ನಾನಾ ಶಕ್ತಿಯುಳ್ಳವನು ಎಂದು ಸಿದ್ಧವಾಗುತ್ತದೆ

ಪ್ರ ವ — " ನೇಹ ನಾನಾಸ್ತಿ ಕಿಂಚನ " ಎಂಬ ವಾಕ್ಯಕ್ಕೆ ಮುಂದೆ ಇರುವ ಜಗತ್ತಿಗೂ, ಜೀವೇಶ್ವರರ ಭೇದಕ್ಕೂ ಸತ್ಯತ್ವವನ್ನು ತಿಳಿಸಿಕೊಡುವ ವಾಕ್ಯಗಳಾವುವು ?

ವಾ — " ಸರ್ವಸ್ಯ ವಶೀ, ಸರ್ವಸ್ಯೇಶಾನ , ಸರ್ವಸ್ಯಾಧಿಪತಿಃ, ..ಏಷ ಸರ್ವೇಶ್ವರ , ಏಷ ಭೂತಾಧಿಪತಿಃ, ಏಷ ಭೂತಪಾಲಃ ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ " ( ಬೃ ४-೫-೨೨ ) ಎಂಬವು.

ಪ್ರ. ವ — ಇವುಗಳ ಅರ್ಥವೇನು ?

ವಾ — ಪರಮಾತ್ಮನು ಸರ್ವ ಜಗತ್ತಿನ ಸ್ವಾಮಿ, ಎಲ್ಲಾ ಜಗತ್ತು ಪರಮಾತ್ಮನ ಅಧೀನವಾಗಿದೆ, ಪರಮಾತ್ಮನು ರಕ್ಷಕನು, ಬ್ರಾಹ್ಮಣರು ಇಂಥ ಮಹಾಮಹಿಮೆಯುಳ್ಳ ಪರಮಾತ್ಮನ ಜ್ಞಾನವು ನಮಗುಂಟಾಗಲಿ ಎಂದು ಇಚ್ಛಿಸುತ್ತಾರೆ ಎಂದು ಅರ್ಥವು.

ಪ್ರ. ವಾ, — ಇದರಿಂದ ಏನು ಸಿದ್ಧವಾಗುತ್ತದೆ ?

ವಾ. — ಪರಮಾತ್ಮನಿಗೆ ಸರ್ವಸ್ವಾಮಿತ್ವ, ಪಾಲಕತ್ವಾದಿ ಅನೇಕ ಗುಣಗಳು ಹೇಳಿರುವುದರಿಂದಲು, ಮತ್ತು ಸರ್ವ ಚೇತನಾಚೇತನ ಪ್ರಪಂಚಕ್ಕೂ ಅವನ ಅಧೀನತ್ವವನ್ನು ಹೇಳಿರುವುದರಿಂದಲೂ, ಜೀವಪರಮಾತ್ಮರ ಭೇದವು

ಸತ್ಯ ವಾದುದು, ಜಗತ್ತೆಲ್ಲ ಸತ್ಯವಾದುದು, ಪರಮಾತ್ಮನು ಜ್ಞೇಯನು ( ತಿಳಿದು ಬರತಕ್ಕವನು ), ಜೀವನು ಜ್ಞಾತೃವು (ಅರಿಯುವವನು) ಎಂದು ಹೇಳಿರುವುದರಿಂದ ಈ ಭೇದವು ಸತ್ಯವೆಂದು ಸಿದ್ಧವಾಗುತ್ತದೆ.

ಪ್ರ ವ—' ನೇಹ ನಾನಾಸ್ತಿ ಕಿಂಚನ ' ( ೨-೪-೧೧ ) ಈ ಕಾರಕ ವಾಕ್ಯಕ್ಕೆ ಪೂರ್ವದಲ್ಲಿರುವ ಜಗತ್ತಿನ ಸತ್ಯತ್ವವನ್ನು ಹೇಳುವ ವಾಕ್ಯಗಳು ಆವುವು?

ವಾ—' ಈಶಾನೋ ಭೂತಭವ್ಯಸ್ಯ ' (ಕಾ. ೨-೪-೫) ಯತಶ್ಚೋದೇತಿ ಸೂರ್ಯೋಸ್ತಂ ಯತ್ರ ಚ ಗಚ್ಛತಿ ತಂ ದೇವಾಃ ಸರ್ವೇಽರ್ಪಿತಾಃ ತದುನಾತ್ಯೇತಿ ಕಶ್ಚನ ಇತ್ಯಾದಿ ವಾಕ್ಯಗಳುಂಟು.

ಪ್ರ ವ—ಅವುಗಳ ಅರ್ಥವೇನು?

ವಾ—ಪರಮಾತ್ಮನು ಭೂತಭವ್ಯ ಜಗತ್ತಿನ ಸ್ವಾಮಿ ( ೫ ), ಯಾವ ಪರಮಾತ್ಮನಿಂದ ಸೂರ್ಯನ ಉದಯಾಸ್ತಗಳಾಗುವುವೋ ಆ ಪರಮಾತ್ಮನ ಆಶ್ರಯದಲ್ಲಿ ಸರ್ವ ದೇವತೆಗಳೂ ಇರುತ್ತಾರೆ ಅವನ ಅತಿಕ್ರಮಣ ಮಾಡುವವರಾರೂ ಇಲ್ಲ ( ೬ , ಹೀಗೆಂದು ಅರ್ಥವು

ಪ್ರ ವ—ಈ ಮಂತ್ರಗಳಿಂದ ಏನು ಸಿದ್ಧವಾಯಿತು ?

ವಾ—ಜಗತ್ತುಂಟು ಸೂರ್ಯಾದಿ ಜಗತ್ತುಂಟು ಎಲ್ಲಾ ದೇವತೆಗಳು ಪರಮಾತ್ಮನನ್ನು ಆಶ್ರಯಿಸಿಕೊಂಡು ಇದ್ದಾರೆ. ಹೀಗೆ ಹೇಳುವುದರಿಂದ ಜಗತ್ತಿಗೆ ಸತ್ಯತ್ವ ಮತ್ತು ಜೀವಬ್ರಹ್ಮಭೇದ ಇದಿಷ್ಟು ಸಿದ್ಧವಾಗುತ್ತದೆ

ಪ್ರ ವ.—" ನೇಹ ನಾನಾಸ್ತಿ ಕಿಂಚನ " ಈ ವಾಕ್ಯದಲ್ಲಿ ಜಗತ್ತಿನ ಸತ್ಯತ್ವವನ್ನು ಬೋಧಿಸುವ ಮುಂದಿನ ವಾಕ್ಯಗಳಾವುವು ?

ವಾ—ಅಂಗುಷ್ಠಮಾತ್ರ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ಈಶಾನೋ ಭೂತಭವ್ಯಸ್ಯ, ||೧೨|| ಈಶಾನೋ ಭೂತಭವ್ಯಸ್ಯ ||೧೩|| ಇತ್ಯಾದಿ ವಾಕ್ಯಗಳು

ಪ್ರ. ವ—ಇವುಗಳ ಅರ್ಥವೇನು ?

ವಾ—ಜೀವನಲ್ಲಿ ( ನಿಯಾಮಕನಾಗಿ) ಯಾವ ಪರಮಾತ್ಮನು ಇರುವನೋ ಅವನು ಭೂತಭವ್ಯ ಜಗತ್ತಿನ ಸ್ವಾಮಿ ( ೧೨ ), ಪರಮಾತ್ಮನು ಭೂತಭವ್ಯ ಜಗತ್ತಿನ ಸ್ವಾಮಿ ( ೧೩ ) ಎಂದು ಅರ್ಥವು, ಈ ವಾಕ್ಯಗಳಿಂದ ಈ ಜಗತ್ತು ಸತ್ಯವಾದುದೆಂದು ಸಿದ್ಧವಾಗುತ್ತದೆ.

ಪ್ರ ವ.—' ನೇಹ ನಾನಾಸ್ತಿ ಕಿಂಚನ ' ಈ ಕಾರಕ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವುದಿಲ್ಲವಾದರೆ ಯಾವ ಅರ್ಥವನ್ನು ಬೋಧಿಸುತ್ತದೆ?

ವಾ.—" ಯದೇವೇಹ ತದಮುತ್ರ ಯದಮುತ್ರ ತದನ್ವಿಹ | ಮೃತ್ಯೋಸ್ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ " ಈ ಪೂರ್ವದಲ್ಲಿರುವ ಮಂತ್ರದಲ್ಲಿ ಪ್ರತಿಪಾದಿತವಾದ ಅರ್ಥವನ್ನೇ ದೃಢೀಕರಿಸುತ್ತದೆ,

ಪ್ರ. ವ.—ಯದೇವೇಹ ' ಈ ಮಂತ್ರದ ಅರ್ಥವೇನು ?

ವಾ.—ಯತ್ ಏವ=ಯಾವ ಪರಮಾತ್ಮನು, ಇಹ=ಈ ಲೋಕದಲ್ಲಿರುವವನೋ, ತತ್=ಆ ಪರಮಾತ್ಮನು, ಅಮುತ್ರ=ಪರಲೋಕದಲ್ಲಿರುವವನು, ಯತ್=

ಯಾವ ಪರಮಾತ್ಮನು, ಅಮುತ್ರ=ಪರಲೋಕದಲ್ಲಿರುವವನೊ, ತತ್=ಆ ಪರಮಾತ್ಮನು, ಇಹ=ಈ ಲೋಕದಲ್ಲಿರುವವನು, ಯಃ=ಯಾವ ಅಧಿಕಾರಿಯು, ಇಹ=ಈ ಎರಡು ಲೋಕಗಳಲ್ಲಿರುವ ಭಗವದ್ರೂಪಗಳಲ್ಲಿ ನಾನಾ=ಪರಸ್ಪರ ಭೇದವನ್ನು, ಪಶ್ಯತಿ=ತಿಳಿಯುತ್ತಾನೋ, ಸಃ=ಆ ಅಧಿಕಾರಿಯು, ಮೃತ್ಯೋಃ = ಯಮದೇವನಿಂದ, ಮೃತ್ಯುಂ = ನರಕಾದ್ಯನರ್ಥಗಳನ್ನು, ಆಪ್ನೋತಿ=ಹೊಂದುತ್ತಾನೆ ಎಂದು ಅರ್ಥವು

ಪ್ರ. ವ — ಈ ಮಂತ್ರದಿಂದ ಏನು ಸಿದ್ಧವಾಗುತ್ತದೆ ?

ವಾ — ಇಹ, ಅಮುತ್ರ ಎಂಬೀ ಎರಡು ಪದಗಳು ಈ ಲೋಕವೂ, ಪರಲೋಕವೂ ಉಂಟೆಂದು ಹೇಳಿ ಈ ಲೋಕದಲ್ಲಿರುವ ಪರಮಾತ್ಮನ ರೂಪಕ್ಕೂ, ಪರಲೋಕದಲ್ಲಿರುವ ಪರಮಾತ್ಮನ ರೂಪಕ್ಕೂ ಪರಸ್ಪರ ಭೇದವಿಲ್ಲನೆಂದು ತಿಳಿಸಿ ಈ ಭಗವದ್ರೂಪಗಳಲ್ಲಿ ಪರಸ್ಪರ ಭೇದವುಂಟೆಂದು ಯಾರು ತಿಳಿಯುತ್ತಾರೋ ಅವರಿಗೆ ನಾನಾ ವಿಧವಾದ ದುಃಖವು ಯಮದೇವರಿಂದ ಉಂಟಾಗುತ್ತದೆ ಎಂದು ಸಿದ್ಧಿಸುತ್ತದೆ

ಪ್ರ ವ 'ಯದೇವೇಹ' ಈ ಮಂತ್ರದಿಂದ ತಿಳಿದು ಬರುವ ಅರ್ಥವನ್ನೇ 'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯವು ಹೇಗೆ ತಿಳಿಸಿ ಕೊಡುತ್ತದೆ ?

ವಾ — ಇದಂ=ಈ ಪರಮಾತ್ಮನು, ಮನಸಾ ಏವ=ಮನಸ್ಸಿನಿಂದಲೆ, ಆಪ್ತವ್ಯಂ=ತಿಳಿದು ಬರುವವನು, ಇಹ=ಈ ಪರಮಾತ್ಮನಲ್ಲಿ, ಕಿಂಚನ ನಾನಾ=ಈ ಲೋಕದಲ್ಲಿ ಪರಲೋಕದಲ್ಲಿ ನಿಯಾಮಕತ್ವದಿಂದಿರುವ ಪರಮಾತ್ಮನ ರೂಪಗಳಲ್ಲಿ ಭೇದವು, ನಾಸ್ತಿ=ಇಲ್ಲ. ಯಾವ ಪುರುಷನು ಹೀಗೆ ನಿಯಾಮಕನಾಗಿರುವ ಪರಮಾತ್ಮನ ರೂಪಗಳಲ್ಲಿ ಸ್ವಲ್ಪವಾದರೂ ಭೇದವನ್ನು ತಿಳಿಯುತ್ತಾನೆಯೋ ಅವನಿಗೆ ನರಕಾದಿ ಅನರ್ಥವು ಪ್ರಾಪ್ತವಾಗುತ್ತದೆ, ಹೀಗೆಂದು 'ನೇಹ ನಾನಾ' ಈ ವಾಕ್ಯವು, 'ಯದೇವೇಹ' ಎಂಬ ವಾಕ್ಯದಲ್ಲಿ ಹೇಳಿದಂತೆಯೇ ಪರಮಾತ್ಮನ ರೂಪಗಳಲ್ಲಿ ಪರಸ್ಪರ ಭೇದವನ್ನು ತಿಳಿಯುವವನ ನಿಂದೆಯನ್ನೇ ಮಾಡುವುದು

ಪ್ರ. ವ.— 'ನೇಹ ನಾನಾಸ್ತಿ ಕಿಂಚನ' ಈ ಬೃಹದಾರಣ್ಯಕ ವಾಕ್ಯದ ಅರ್ಥವೇನು?

ವಾ.— ಕಾಠಕ ವಾಕ್ಯದ ಅರ್ಥದಂತೆಯೇ ಇದರ ಅರ್ಥವು

ಪ್ರ ವ — ಬೃಹದಾರಣ್ಯಕದಲ್ಲಿರುವ, ಮತ್ತು ಕಾಠಕದಲ್ಲಿರುವ 'ನೇಹನಾನಾಸ್ತಿ' ಈ ವಾಕ್ಯವು ಜಗತ್ತಿನ ನಿಷೇಧವನ್ನು ತಿಳಿಸಿಕೊಡುತ್ತದೆಂದು ಏಕೆ ಹೇಳಕೂಡದು ?

ವಾ.— ೧ ಈಶಾನೋ ಭೂತಭವ್ಯಸ್ಯ ಇತ್ಯಾದಿ ಪೂರ್ವವಾಕ್ಯಗಳೂ ಈಶಾನೋ ಭೂತಭವ್ಯಸ್ಯ ವಶೀ ಸರ್ವಸ್ಯ ಈಶಾನಃ ಇತ್ಯಾದಿ ಉತ್ತರ ವಾಕ್ಯಗಳೂ ಜಗತ್ತಿಗೆ ಸತ್ಯತ್ವವನ್ನು ಬೋಧಿಸುತ್ತಿರುವಾಗ ಇವುಗಳಿಗೆ ಮಧ್ಯದಲ್ಲಿರುವ "ನೇಹ ನಾನಾಸ್ತಿ" ಎಂಬ ವಾಕ್ಯವು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತದೆ ಎಂಬುದು ಯುಕ್ತವಾದುದಲ್ಲ.

೨ ಈ ವಾಕ್ಯದಲ್ಲಿ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವ ಪದವಾವುದೂ ಇಲ್ಲ.

೩ ಹಾಗೂ ಜಗತ್ತು ಇಲ್ಲವೆಂದು ಹೇಳುವ ಬೌದ್ಧರನ್ನು ಖಂಡಿಸುವಾಗ್ಯೆ ಶಂಕರಾಚಾರ್ಯರು ಜಗತ್ತು ಪ್ರಮಾಣಸಿದ್ಧವಾಗಿರುವುದರಿಂದ, ಅದು ಇಲ್ಲವೆಂದು ಅಂಗೀಕಾರ ಮಾಡುವುದು ಯೋಗ್ಯವಾದುದಲ್ಲವೆಂದು ಹೇಳಿದ್ದಾರೆ.

೪ ಬ್ರಹ್ಮನಲ್ಲಿ ಜಗತ್ತಿನ ಆರೋಪವು ( ಭ್ರಮೆ ) ಕೂಡುವುದೂ ಇಲ್ಲ ಆದುದರಿಂದ ಈ ಎರಡು ವಾಕ್ಯಗಳು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುವುವೆಂದು ಹೇಳುವುದು ಅನೇಕ ಪ್ರಮಾಣಗಳಿಗೆ ವಿರುದ್ಧ ವಾಗುತ್ತದೆ ಆದುದರಿಂದ ಜಗತ್ತು ಮಿಥ್ಯೆಯಾದುದೆಂಬ ವಿಷಯದಲ್ಲಿ ಶ್ರುತಿಯು ಆಧಾರ ಹೇಳಲು ಬರುವುದಿಲ್ಲ

---

## “ ಯತ್ರ ಹಿ ದ್ವೈತಮಿವ ಭವತಿ ” ಈ ಶ್ರುತಿಯ ವಿಚಾರಣೆ.

ಪ್ರ ವ —ಶಾಸ್ತ್ರಿಗಳೆ ! ಜಗತ್ತು ಮಿಥ್ಯಾ ಎಂಬ ವಿಷಯದಲ್ಲಿ ಮತ್ತೇನಾದರೂ ಆಧಾರವುಂಟೆ ?

ಪ್ರ. ವಾ —ಉಂಟು

ಪ್ರ ವ —ಅದಾವುದು ಹೇಳಿ ?

ಪ್ರ ವಾ.— “ಯತ್ರ ಹಿ ದ್ವೈತಮಿವ ” ( ಬೃ. ೨-೪-೧೪ ) ಈ ವೇದ ವಾಕ್ಯವು.

ಪ್ರ ವ —ಇದರ ಅರ್ಥವೇನು ?

ಪ್ರ ವಾ.— ‘ ಯತ್ರ ’ ಯಾವ ಅವಿದ್ಯಾವಸ್ಥೆಯಲ್ಲ “ ದ್ವೈತಮಿವ ” ಪರಮಾರ್ಥತಃ ಅದ್ವೈತರೂಪನಾದ ಬ್ರಹ್ಮನಲ್ಲಿ ದ್ವೈತದ ಹಾಗೆ ಎರಡನೆಯ ವಸ್ತು ತೋರುತ್ತದೆಯೋ, ‘ ತತ್ ’ ಆ ಅವಿದ್ಯಾವಸ್ಥೆಯಲ್ಲಿ ಎರಡನೆಯವನಾಗಿರುವ ಯಾವ ಮನುಷ್ಯನು, ಎರಡನೆಯದಾದ ಘ್ರಾಣೇಂದ್ರಿಯದಿಂದ ಎರಡನೆಯದಾದ ( ಬೇರೊಂದಾದ ) ಗಂಧವನ್ನು ಗ್ರಹಿಸುವನು, ಚಕ್ಷುರಿಂದ್ರಿಯದಿಂದ ರೂಪವನ್ನು ನೋಡುವನು, ಶ್ರೋತ್ರೇಂದ್ರಿಯದಿಂದ ಶಬ್ದವನ್ನು ಕೇಳುವನು, ವಾಗಿಂದ್ರಿಯದಿಂದ ಮಾತಾಡುವನು ಮತ್ತೊಬ್ಬನನ್ನು ತಿಳಿಯುವನು

ಬ್ರಹ್ಮಜ್ಞಾನಿಗೆ ‘ ಯತ್ ’ ಯಾವಕಾಲದಲ್ಲಿ ( ಜ್ಞಾನಾವಸ್ಥೆಯಲ್ಲಿ ) ಎಲ್ಲವೂ ಬ್ರಹ್ಮರೂಪವೇ ಆಗಿ ಬ್ರಹ್ಮಾತಿರಿಕ್ತವಾದ ಮತ್ತೊಂದಿಲ್ಲವೆಂದು ಆಗು

* ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ತದಿತರ ಇತರಂ ಜಿಘ್ರತಿ ತದಿತರ ಇತರಂ ಶೃಣೋತಿ ತದಿತರ ಇತರಮಭಿವದತಿ ತದಿತರ ಇತರಂ ಮನುತೇ ತದಿತರ ಇತರಂ ವಿಜಾನಾತಿ ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಜಿಘ್ರೇತ್ತತ್ಕೇನ ಕಂ ಪಶ್ಯೇತ್ತತ್ಕೇನ ಕಂ ಶೃಣುಯಾತ್ತತ್ಕೇನ ಕಮಭಿವದೇತ್ತತ್ಕೇನ ಕಂ ಮನ್ವೀತ ತತ್ಕೇನ ಕಂ ವಿಜಾನೀಯಾದ್ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾದ್ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ||
(ಬೃ. ೨-೪-೧೪ )

ತ್ತದೆಯೋ ( ಮುತ್ತಿನ ಸಿಂಪಿನಲ್ಲಿ ಅಜ್ಞಾನದಿಂದ ತೋರುವ ಬೆಳ್ಳಿಯು ಸಿಂಪಿನ ಜ್ಞಾನವಾದ ಮೇಲೆ ಹೇಗೆ ಯಾವಾಗಲೂ ಇಲ್ಲವೆಂದು ಸಿದ್ಧವಾಗುತ್ತದೆಯೋ ಹಾಗೆಯೇ ಬ್ರಹ್ಮಾಜ್ಞಾನದಿಂದ ಭಾಸವಾಗುವ ಜಗತ್ತು ಬ್ರಹ್ಮಜ್ಞಾನದಿಂದ ಯಾವಾಗಲೂ ಇಲ್ಲದುದೆಂದು ಸಿದ್ಧವಾಗುತ್ತದೆ ) ಆ ಕಾಲದಲ್ಲಿ ಯಾವಾತನು ಯಾವ ಇಂದ್ರಿಯದಿಂದ ಗಂಧವನ್ನು ಗ್ರಹಿಸುವನು, ಯಾವ ಚಕ್ಷುರಿಂದ್ರಿಯದಿಂದ ರೂಪವನ್ನು ನೋಡಿಯಾನು, ( ನೋಡುವನು ) ಯಾವ ಕಿವಿಯಿಂದ ಶಬ್ದವನ್ನು ಕೇಳಿಯಾನು (ಕೇಳುವನು) ಯಾವ ವಾಗಿಂದ್ರಿಯದಿಂದ ಮಾತನ್ನಾಡುವನು (ಆಡಿಯಾನು) ಯಾವ ಮನಸ್ಸಿನಿಂದ ಏನನ್ನು ವಿಚಾರಿಸುವನು (ವಿಚಾರಮಾಡಿಯಾನು) ಯಾವ ಪರಮಾತ್ಮನಿಂದ ಜೀವನು ಎಲ್ಲವನ್ನೂ ತಿಳಿಯುತಲ್ಲಾನೆಯೋ ಆ ಪರಮಾತ್ಮನನ್ನು ಹೇಗೆ ತಿಳಿಯುವನು ( ತಿಳಿದಾನು ) ತಿಳಿಯುವವನಾದ ತನ್ನನ್ನು= ವಿಜ್ಞಾತೃ ಹೇಗೆ ತಿಳಿಯುವನು ( ತಿಳಿದಾನು ) ಹೀಗೆಂದು ಅರ್ಥವು ( ಜ್ಞಾನಾವಸ್ಥೆಯಲ್ಲಿ ಆತ್ಮನಿಂದ ಅತಿರಿಕ್ತವಾದ ವಸ್ತುವೇ ಇಲ್ಲದುದರಿಂದ ಯಾವ ಜ್ಞಾನವೂ ಇಲ್ಲದಂಥ ಮೋಕ್ಷಾವಸ್ಥೆಯಲ್ಲಿ ಅಜ್ಞಾನ ಕಲ್ಪಿತವಾದ ಜಗತ್ತಿನ ಅಭಾವವು ( ಮಿಥ್ಯಾತ್ವವು ) ಹೇಳಿದೆಯಾದುದರಿಂದ ಜಗತ್ತು ಮಿಥ್ಯೆಯಾದುದು )

---

## ಕ್ಲಾಸ ಎಕ್ಸಾಮಿನೇಶನ್.

ವಾ. ವ—ಈ ದೊಡ್ಡ ವಾಕ್ಯದಲ್ಲಿ ಯಾವ ಭಾಗದಿಂದ ಜಗತ್ತಿನ ಮಿಥ್ಯಾತ್ವವು ತಿಳಿದು ಬರುತ್ತದೆ ?

ಪ್ರ. ಸಾ.—' ಯತ್ರ ಹಿ ದ್ವೈತಮಿವ ಭವತಿ ' ಈ ಭಾಗದಿಂದ " ಯತ್ರ ವಾಅಸ್ಯ ಸರ್ವಮಾತ್ಮೈವಾಭೂತ್ " ಈ ಭಾಗದಿಂದಲೂ ಜಗತ್ತಿನ ಮಿಥ್ಯಾತ್ವವು ತಿಳಿದು ಬರುತ್ತದೆ

ವಾ ವ.—ಯತ್ರ ಹಿ ದ್ವೈತಮಿವ ಭವತಿ ಈ ಭಾಗದಿಂದ ಜಗತ್ತಿನ ಮಿಥಾತ್ವವು ಹೇಗೆ ಸಿದ್ಧಿಸುತ್ತದೆ ?

ಪ್ರ. ಸಾ—ಯತ್ರ=ಯಾವ ಅವಿದ್ಯಾವಸ್ಥೆಯಲ್ಲಿ ದ್ವೈತಮಿವ=ದ್ವೈತದಹಾಗೆ ಭಾಸವಾಗುತ್ತದೆಂದು ಹೇಳಿರುವುದರಿಂದ ದ್ವೈತ=ಪ್ರಪಂಚವು ಇಲ್ಲ=ಮಿಥ್ಯಾ ಎಂದು ಸಿದ್ಧಿಸುತ್ತದೆ.

ವಾ. ವ — ಶಾಸ್ತ್ರಿಗಳೇ ತಾವು ಈ ಉಪನಿಷತ್ತಿನ ಶಾಂಕರಭಾಷ್ಯವನ್ನು ನೋಡಿದ್ದೀರೇನು ?

ಪ್ರ ಸಾ.—ನೋಡಿದ್ದೇವೆ. ಅದನ್ನೇ ಈಗ ವಿದ್ಯಾರ್ಥಿಗಳಿಗೆ ಪಾಠ ಹೇಳುತ್ತಿದ್ದೇವೆ.

ವಾ. ವ.—ಈ ವಾಕ್ಯದ ಮೇಲಿನ ಭಾಷ್ಯದ ಅರ್ಥವನ್ನು ಹೇಳಿ?

ಪ್ರ ಸಾ —§ ದ್ವೈತಮಿವ ಈ ವಾಕ್ಯದಲ್ಲಿ ದ್ವೈತಕ್ಕೆ ದ್ವೈತದ ಉಪಮೆ ಹೇಳಿರುವುದರಿಂದ ಈ ವಾಕ್ಯದಿಂದ ದ್ವೈತಕ್ಕೆ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾಗುತ್ತದೆ ಯಾದರೂ 'ವಾಚಾರಂಭಣಂ ವಿಕಾರೋ ನಾಮಧೇಯಂ' 'ಏಕಮೇವಾದ್ವಿತೀಯಂ' 'ಆತ್ಮೈವೇದಂ ಸರ್ವಂ' ಈ ಶ್ರುತಿಗಳು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿ ಕೊಡುತ್ತಿರುವುದರಿಂದ ದ್ವೈತ (ಜಗತ್ತು) ಪಾರಮಾರ್ಥಿಕ ಸತ್ಯವಾದುದೆಂದು ತಿಳಿಯಕೂಡದೆಂಬುದು ಶಂಕರಾಚಾರ್ಯರ ಭಾಷ್ಯದ ಅರ್ಥವು

ವಾ. ವ.—ಈ ಭಾಷ್ಯದ ಆನಂದಗಿರಿ ಟೀಕೆಯ ಅರ್ಥವನ್ನು ಹೇಳಿ ?

ಪ್ರ. ಸಾ.—‡ "ಲೋಕದಲ್ಲಿ ದೃಷ್ಟಾಂತಭೂತವಾದ ಚಂದ್ರನಿಗೂ ಮತ್ತು ದಾರ್ಷ್ಟಾಂತಿಕವಾದ ಮುಖಕ್ಕೂ ಸತ್ಯತ್ವವನ್ನು ಕಂಡಿರುವುದರಿಂದ ಶ್ರುತಿಯಲ್ಲಿ ದ್ವೈತದ ಉಪಮೆಯನ್ನು ದ್ವೈತಕ್ಕೆ ಹೇಳಿರುವುದರಿಂದ ದೃಷ್ಟಾಂತಭೂತವಾದ ದ್ವೈತಕ್ಕೂ ಮತ್ತು ದಾರ್ಷ್ಟಾಂತಿಕವಾದ ದ್ವೈತಕ್ಕೂ ವಸ್ತುತ್ವ=ಪಾರಮಾರ್ಥಿಕತ್ವವು ಸಿದ್ಧವಾಗುತ್ತದೆಂದು ಆಕ್ಷೇಪಿಸಿಕೊಂಡು, ದ್ವೈತ ಪ್ರಪಂಚಕ್ಕೆ ಮಿಥ್ಯಾತ್ವವನ್ನು ತಿಳಿಸಿ ಕೊಡುವ "ವಾಚಾರಂಭಣಂ" ಇವೇ ಮೊದಲಾದ ಶ್ರುತಿಗಳಿಂದ ವಿರೋಧ ಬರುತ್ತದಾದುದರಿಂದ ಜಗತ್ತಿನ ಸತ್ಯತ್ವವನ್ನು ಒಪ್ಪಕೊಡದು ಎಂದು ಶಂಕರಾಚಾರ್ಯರು ಸಮಾಧಾನವನ್ನು ಹೇಳಿದ್ದಾರೆಂಬುದು ಆನಂದಗಿರಿ ವಾಕ್ಯದ ಅರ್ಥವು

ವಾ. ವ —ಈ ಬೃಹದಾರಣ್ಯಕದ ವಾಕ್ಯದ ಮೇಲಿನ ಸುರೇಶ್ವರಾಚಾರ್ಯರ ವಾರ್ತಿಕವನ್ನು ನೋಡಿರುವಿರೇನು ?

ಪ್ರ ಸಾ.—ನೋಡಿದ್ದೇವೆ.

ವಾ. ವ.—| ಅದರ ಅರ್ಥವನ್ನು ಹೇಳಿ ?

ಪ್ರ ಸಾ.—ದ್ವೈತವು ಸತ್ಯವಲ್ಲವಾದರೆ "ದ್ವೈತಮಿವ" ದ್ವೈತದ ಹಾಗೆ ಎಂಬ ದ್ವೈತದ ಉಪಮಾ ಹೇಗೆ ಕೊಡುತ್ತದೆ ? ಆದುದರಿಂದ 'ಯತ್ರ ಹಿ ದ್ವೈತಮಿವ ಭವತಿ' ಈ ಶ್ರುತಿಯು ದ್ವೈತದ ಸತ್ಯತ್ವವನ್ನು ತಿಳಿಸಿ ಕೊಡುತ್ತದೆ ಹೀಗೆಂದು ಈ ವಾಕ್ಯದ ಅರ್ಥವು

§ ನನು ದ್ವೈತೇನೋಪಮೀಯಮಾನತ್ವಾತ್ ದ್ವೈತಸ್ಯ ಪಾರಮಾರ್ಥಿಕತ್ವಮಿತಿ ನ 'ವಾಚಾರಂಭಣಂ ವಿಕಾರೋ ನಾಮಧೇಯಂ' ಇತಿ ಶ್ರುತ್ಯಂತರಾತ್ 'ಏಕಮೇವಾದ್ವಿತೀಯಂ' ಆತ್ಮೈವೇದಂ ಸರ್ವಂ ಇತಿ ಚ (ಬೃ, ಶಾ ಭಾ ೨-೪-೧೪)

‡ ದ್ವೈತೇನ ದ್ವೈತಸ್ಯೋಪಮೀಯಮಾನತ್ವಾತ್ ದೃಷ್ಟಾಂತಸ್ಯ ದಾರ್ಷ್ಟಾಂತಿಕಸ್ಯ ಚ ತಸ್ಯ ವಸ್ತುತ್ವಂ ಸ್ಯಾತ್ । ಉಪಮಾನೋಪಮೇಯಯೋಶ್ಚಂದ್ರಮುಖಯೋರ್ವಸ್ತುತ್ವೋಪಲಂಭಾದಿತ್ಯರ್ಥಃ॥ ದ್ವೈತಪ್ರಪಂಚಸ್ಯ ಮಿಥ್ಯಾತ್ವವಾದಿಶ್ರುತಿವಿರೋಧಾತ್ ನ ತಸ್ಯ ಸತ್ಯತೇತಿ ಪರಿಹರತಿ । ನ ವಾಚಾರಂಭಣಂ ಇತಿ' (ಆನಂದಗಿರಿ)

† ನನು ದ್ವೈತಮಿವೇತ್ಯೇತದುಪಮಾನಂ ಕಥಂ ಭವೇತ್ । ದ್ವೈತಂ ವಸ್ತು ನ ಚೇದಸ್ತಿ.

ವಾ ವ —ಇದು ಯಾವ ಗ್ರಂಥವು ನಿಮಗೆ ಗೊತ್ತುಂಟೋ ?

ಪ್ರ. ಸಾ —ಇದು ನಮ್ಮ ಶಂಕರಾಚಾರ್ಯರ ಸೂತ್ರ ಭಾಷ್ಯವು.

ವಾ ವ —ಈ ಭಾಷ್ಯದಲ್ಲಿ ( ೨-೨-೨೮ ಬ್ರ ಸೂ ) ಈ ವಾಕ್ಯವು ಏತಕ್ಕಾಗಿ ಪ್ರವೃತ್ತವಾಗಿದೆ ?

ಪ್ರ ಸಾ – ಈ ವಾಕ್ಯವು ಬೌದ್ಧಮತವನ್ನು ಖಂಡಿಸುವದಕ್ಕಾಗಿ ಪ್ರವೃತ್ತವಾಗಿದೆ

ವಾ. ವ.—ಬೌದ್ದರು ಹೇಳಿದ ಯಾವ ವಿಷಯುವನ್ನು ಖಂಡಿಸುವುದಕ್ಕಾಗಿ ಪ್ರವೃತ್ತವಾಗಿದೆ ?

ಪ್ರ. ಸಾ.—ಬೌದ್ದರು ಜ್ಞಾನಾತಿರಿಕ್ತವಾದ ಜಗತ್ತು ಇಲ್ಲವೆಂದು ಹೇಳಿರಲು ಅದನ್ನು ಖಂಡನ ಮಾಡುವುದಕ್ಕಾಗಿ ಪ್ರವೃತ್ತವಾಗಿದೆ

ವಾ. ವ —ಹೇಗೆ ಹೇಗೆ ಖಂಡಿಸಿದ್ದಾರೆ ?

ಪ್ರ. ಸಾ.—ಜ್ಞಾನಾತಿರಿಕ್ತವಾದ ಜಗತ್ತುಂಟೆಂದು ಪ್ರಮಾಣಗಳಿಂದ ಉಪಲಬ್ಧವಾಗುವುದರಿಂದ ಜ್ಞಾನಾತಿರಿಕ್ತ ಜಗತ್ತು ಇಲ್ಲವೆಂದು ಹೇಳಕೂಡದು ಹೀಗೆಂದು ಖಂಡಿಸಿ, ಲೌಕಿಕ ವ್ಯವಹಾರದಿಂದಲೇ ಜ್ಞಾನಾತಿರಿಕ್ತ ಜಗತ್ತು ಸತ್ಯವೆಂದು ಸಿದ್ಧವಾಗುವುದರಿಂದ ಜ್ಞಾನಾತಿರಿಕ್ತವಾದ ಜಗತ್ತು ಇಲ್ಲವೆಂದು ಹೇಳಕೂಡದೆಂದು ಖಂಡನ ಮಾಡಿದ್ದಾರೆ

ವಾ ವ —ಲೌಕಿಕ ವ್ಯವಹಾರವಾವುದು ? ಅದರಿಂದ ಜಗತ್ತು ಸತ್ಯವೆಂದು ಹೇಗೆ ಸಿದ್ಧವಾಗುತ್ತದೆ ?

ಪ್ರ ಸಾ —*ಬಾಹ್ಯ ಜಗತ್ತು ಇಲ್ಲವೆಂದು ಹೇಳುವ ಜನರೇ '' ಬಹಿರ್ವತ್ ಅವಭಾಸತೇ '' ಜಗತ್ತು ಬಾಹ್ಯ ಪದಾರ್ಥಗಳ ಹಾಗೆ ಭಾಸವಾಗುತ್ತದೆಂದು ಬಾಹ್ಯಪದಾರ್ಥದ ದೃಷ್ಟಾಂತವನ್ನು ಹೇಳುತ್ತಾರೆ ಬಾಹ್ಯ ಪದಾರ್ಥವಿರದಿದ್ದರೆ ಬಾಹ್ಯ ಪದಾರ್ಥದಹಾಗೆ ಉಂಟೆಂದು ಹೇಳುವುದು ಹೇಗೆ ಕೂಡುವದು ? ವಿಷ್ಣುಮಿತ್ರನು ವಂಧ್ಯಾ ಪುತ್ರನಂತೆ ಇರುವನೆಂದು ಯಾವನಾದರೂ ಹೇಳುವವನೇನು ? ಹಾಗೆ ಯಾರೂ ಹೇಳುವುದಿಲ್ಲ ಬಹಿರ್ವತ್ ಎಂದು ಬಾಹ್ಯ ಪದಾರ್ಥದ ದೃಷ್ಟಾಂತ ಹೇಳುವುದರಿಂದ ಜಗತ್ತಿನ ಸತ್ಯತ್ವವೆ ಸಿದ್ಧವಾಗುತ್ತದೆ ಆದುದರಿಂದ ಜ್ಞಾನಾತಿರಿಕ್ತವಾದ ಜಗತ್ತು ಇಲ್ಲ ಎಂದು ಹೇಳಕೂಡದೆಂದು ಖಂಡನ ಮಾಡಿದ್ದಾರೆ

ವಾ. ವ —' ಬಹಿರ್ವತ್, ' ' ಬಹಿರಿವ ' ಈ ಎರಡು ವಾಕ್ಯಗಳಲ್ಲಿ ಇರುವ ವತ್ ಪ್ರತ್ಯಯದ ಮತ್ತು ಇವ ಎಂಬ ಶಬ್ದದ ಅರ್ಥವು ಒಂದೇ ಅಷ್ಟೆ ?

ಪ್ರ ಸಾ.—ಹೌದು ಒಂದೇ ಅರ್ಥವು

---

* '' ಬಹಿರ್ವತ್ ಅವಭಾಸತೇ ' ಇತಿ ನತ್ಕಾರಃ ಕುರ್ವಂತಿ ಇತರಥಾ ಹಿ ಕಸ್ಮಾತ್ '' ' ಬಹಿರ್ವತ್ ' ಇತಿ ಬ್ರೂಯುಃ | ನ ಹಿ — ' ವಿಷ್ಣುಮಿತ್ರೋ ವಂಧ್ಯಾಪುತ್ರವದವಭಾಸತೇ ' ಇತಿ ಕಶ್ಚಿದಾಚಕ್ಷೀತ |..... ನತು ಬಹಿರ್ವತ್ ಅವಭಾಸತ ಇತಿ |

ವಾ ವ — ‘ ವತ್ ’ ‘ ಇವ ’ ಈ ಶಬ್ದಗಳಿಂದ ತಿಳಿದು ಬರುವ ಸಾದೃಶ್ಯದ ಪ್ರತಿಯೋಗಿ§ ಸತ್ಯವಾಗಿರಬೇಕೆಂಬುದು ಶಂಕರಾಚಾರ್ಯರ ಅಭಿಪ್ರಾಯವಷ್ಟೆ ?

ಪ್ರ. ಸಾ.— ಸತ್ಯವಾಗಿರಬೇಕೆಂಬುದು ಶಂಕರಾಚಾರ್ಯರ ಅಭಿಪ್ರಾಯವು.

ವಾ ವ — ಶಾಸ್ತ್ರಿಗಳೇ ! ಶಂಕರಾಚಾರ್ಯರ ಭಾಷ್ಯ, ಸುರೇಶ್ವರಾಚಾರ್ಯರ ವಾರ್ತಿಕ, ಆನಂದಗಿರಿಟೀಕಾ, ಇವುಗಳಿಂದ “ ಯತ್ರ ಹಿ ದ್ವೈತಮಿವ ಭವತಿ ” ಈ ವಾಕ್ಯವು ಯಾವ ಅರ್ಥವನ್ನು ತಿಳಿಸಿ ಕೊಡುತ್ತದೆಂದು ಸಿದ್ಧವಾಗುತ್ತದೆ ?

ಪ್ರ ಸಾ.— ಈ ಶ್ರುತಿಯು ದ್ವೈತ ಪ್ರಪಂಚಕ್ಕೆ ಪಾರಮಾರ್ಥಿಕ ಸತ್ಯತ್ವವನ್ನು ತಿಳಿಸಿ ಕೊಡುತ್ತದೆಂಬುದು ಸಿದ್ಧವಾಗುತ್ತದೆ

ವಾ. ವ.— “ ದ್ವೈತಮಿವ ಭವತಿ ” ಈ ಶ್ರುತಿಯು ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಸಿ ಕೊಡದೆ ಪ್ರತ್ಯುತ ಸತ್ಯತ್ವವನ್ನೇ ತಿಳಿಸುತ್ತಿರಲು ನೀವು ದ್ವೈತ ಪ್ರಪಂಚದ ( ಜಗತ್ತಿನ ) ಮಿಥ್ಯಾತ್ವ ವಿಷಯದಲ್ಲಿ ಈ ಶ್ರುತಿಯು ಪ್ರಮಾಣವಾದುದೆಂದು ಹೇಗೆ ಹೇಳುತ್ತೀರಿ ?

ಪ್ರ ಸಾ — ಉತ್ತರವಿಲ್ಲ

ವಾ. ವ — ಶಾಸ್ತ್ರಿಗಳೇ ಇದು ಯಾವ ಗ್ರಂಥವು ನೋಡಿ

ಪ್ರ ಸಾ — ಇದು ನಮ್ಮ ಶಂಕರಾಚಾರ್ಯರ ಸೂತ್ರಭಾಷ್ಯದ ವ್ಯಾಖ್ಯಾನವಾದ ಬ್ರಹ್ಮವಿದ್ಯಾಭರಣವು

ವಾ. ವ — ಈ ಗ್ರಂಥವು ನಿಮಗೆ ಮಾನ್ಯವಷ್ಟೆ ?

ಪ್ರ ಸಾ — ಅತ್ಯಂತ ಮಾನ್ಯವಾದುದು

ವಾ ವ.— ಈ ವಾಕ್ಯದ ‡ ಅರ್ಥವನ್ನು ಹೇಳಿ ?

ಪ್ರ. ಸಾ.— ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ’ ಯಾವ ಈಶ್ವರನಿಂದ ಜೀವನು ಸಮಸ್ತವನ್ನು ತಿಳಿಯುವನೋ ಆ ಈಶ್ವರನನ್ನು ಹೇಗೆ ತಿಳಿದಾನು ? ಹೀಗೆ ಈ ವಾಕ್ಯದಲ್ಲಿ ಈಶ್ವರನು ಜೀವನಿಂದ ಭಿನ್ನನು ಎಂದು ಹೇಳಿದಯಾದುದರಿಂದ ಈ ವಾಕ್ಯವು ಜೀವೇಶ್ವರರ ಅತ್ಯಂತಾಭೇದವನ್ನು ಹೇಳುವ ( ಅದ್ವೈತ ) ಮತಕ್ಕೆ ವಿರುದ್ಧವಾಗುತ್ತದೆಂದು ಅರ್ಥವು.

ವಾ. ವ — ‘ ಯತ್ರ ವಾ ಅಸ್ಯ ಸರ್ವಮಾತ್ಮೈವಾಭೂತ್ .. ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ’ ಈ ವಾಕ್ಯವು ಜೀವೇಶ್ವರ

§ ಯಾವುದರ ಸಾದೃಶ್ಯವನ್ನು ಹೇಳುವುದೋ ಆ ವಸ್ತುವು ಸಾದೃಶ್ಯದ ಪ್ರತಿಯೋಗಿಯು

‡ ‘ ವಿಜ್ಞಾತಾರಮರೇ ಕೇನ ವಿಜಾನೀಯಾತ್ ’ ಇತ್ಯಸ್ಯ ಪೂರ್ವವಾಕ್ಯೇ ‘ ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ’ ಇತಿ ಜೀವಾದ್ಭಿನ್ನತಯಾ ಪರಮೇಶ್ವರಃ ಕಿಮರ್ಥಂ ಪ್ರತಿಪಾದ್ಯತೇ ಯೇನೇಶ್ವರೇಣ ಜೀವ ಇದಂ ಸರ್ವಂ ವಿಜಾನಾತಿ ತಂ ಪರಮೇಶ್ವರಂ ಕೇನ ವಿಜಾನೀಯಾದಿತಿ ಹಿ ತದರ್ಥಃ, ತಸ್ಮಾದಿದಂ ವಾಕ್ಯಮತ್ಯಂತಾಭೇದವಾದಿನೋಽಸಂಗತಮಿತಿ ಚೇತ್ |

ಭೇದವನ್ನು ತಿಳಿಸುತ್ತ ಜ್ಞಾತೃಜ್ಞೇಯಾದಿ ಜಗತ್ತು ಸತ್ಯವೆಂದು ಬೋಧಿಸುತ್ತದೆಂದು ನಿಮ್ಮ ಅದ್ವೈತಿಗಳು ಒಪ್ಪಿದ್ದಾರಷ್ಟೆ ?

ಪ್ರ ಸಾ —ನಮ್ಮನ್ನು ಸಿಕ್ಕ ಹಾಕ ( ಮೋಸಮಾಡ ) ಬೇಕೆಂದು ನೀವು ಮಾಡುವಂತೆ ತೋರುತ್ತದೆ. ಆದರೆ ನಾವು ಸಿಕ್ಕ ಬೀಳುವವರಲ್ಲ ' ಯೆನೇದಂ ' ಈ ವಾಕ್ಯವು ಜೀವೇಶ್ವರ ಭೇದವನ್ನು ತಿಳಿಸಿ ಕೊಡುವುದೆಂದು ಹೇಳುವ ( ವಾಕ್ಯವು ) ಬ್ರಹ್ಮವಿದ್ಯಾಭರಣಗ್ರಂಥದಲ್ಲಿ ಪೂರ್ವಪಕ್ಷ ವಾಕ್ಯವು ಅದು ಸಿದ್ಧಾಂತ ವಾಕ್ಯವಲ್ಲ ಸಿದ್ಧಾಂತವನ್ನು ಹೇಳುವಾಗ ' ಯೇನೇದಂ ' ಈ ವಾಕ್ಯಕ್ಕೆ ಹೇಗೆ ಅರ್ಥ ಮಾಡಿದರೆ ಜೀವೇಶ್ವರರ ಭೇದವು ಸಿದ್ಧಿಸುವುದಿಲ್ಲವೊ ಹಾಗೆಯೇ ಆ ವಾಕ್ಯದ ಅರ್ಥವನ್ನು ಹೇಳಿದ್ದಾರೆಯಾದುದರಿಂದ ಈ ವಾಕ್ಯವು ಜೀವೇಶ್ವರರ ಭೇದವನ್ನು ತಿಳಿಸಿ ಕೊಡುವುದೆಂದು ಅದ್ವೈತಿಗಳು ಒಪ್ಪಿಲ್ಲ.

ವಾ. ವ.—' ಯೇನೇದಂ ' ಈ ವಾಕ್ಯಕ್ಕೆ ಎರಡನೆಯ ಅರ್ಥವು ಯಾವ ವಾಕ್ಯದಿಂದ ಹೇಳಿದೆ ? ಆ ವಾಕ್ಯವನ್ನು ತೋರಿಸಿ ಅರ್ಥವನ್ನು ಹೇಳಿ ?

ಪ್ರ, ಸಾ —ಯೇನೇದಂ ಈ ವಾಕ್ಯಕ್ಕೆ ಪರಮಾತ್ಮನಿಂದ ಜೀವನು ತಿಳಿಯುತ್ತಾನೆ ಎಂದು ಅರ್ಥವನ್ನು ಮಾಡಿದರೆ ಜೀವ ಪರಮಾತ್ಮರ ಭೇದವು ಸಿದ್ಧವಾದೀತು ಆದರೆ ಹಾಗೆ ಅರ್ಥವನ್ನು ಮಾಡುವುದಿಲ್ಲ,§ ' ಯೇನೇದಂ ಸರ್ವಂ ವಿಜಾನಾತಿ ' ಈ ವಾಕ್ಯದಲ್ಲಿ ತೃತೀಯಾಂತವಾದ ' ಯೇನ ' ಎಂಬ ಪದವನ್ನು ಪ್ರಥಮಾಂತವಾಗಿ ಗ್ರಹಿಸಿ ಯಃ=ಯಾವ ಜೀವನು, ಎಲ್ಲವನ್ನು ತಿಳಿಯುತ್ತಾನೆಯೊ, ತಂ=ಅವನನ್ನು ಹೇಗೆ ತಿಳಿಯುವುದು ಎಂಬ ಅರ್ಥವನ್ನು ಮಾಡುತ್ತೇವೆ, ಅಥವಾ ಯೇನ=ಯಾವ ಸಾಕ್ಷಿಯಿಂದ ಜೀವನು ಈ ಎಲ್ಲವನ್ನು ತಿಳಿಯುತ್ತಾನೆಯೋ ಎಂದು ಅರ್ಥ ಮಾಡುತ್ತೇವೆ, ಆದುದರಿಂದ ಈ ವಾಕ್ಯವು ಜೀವೇಶ್ವರರ ಭೇದವನ್ನು ತಿಳಿಸಿ ಕೊಡುವುದಿಲ್ಲವೆಂಬುದನ್ನು ಸಿದ್ಧಾಂತಮಾಡಿದ್ದಾರೆ.

ವಾ ವ.—' ಯೇನೇದಂ ' ಈ ವಾಕ್ಯಕ್ಕೆ, ' ಯೇನ ' ಎಂಬ ಪದದ ಅರ್ಥವನ್ನು ' ಯಃ ಜೀವಃ ಎಂದು ಮಾಡಿಕೊಂಡು ' ಯಾವ ಜೀವನು ಸಮಸ್ತ ಜಗತ್ತನ್ನು ತಿಳಿಯುತ್ತಾನೋ ಆ ಜೀವನ ಜ್ಞಾನವು ಹೇಗೆ ಆಗುತ್ತದೆ ' ಹೀಗೆಂದು ಅರ್ಥಮಾಡಿದರೆ ' ವಿಜ್ಞಾತಾರಮರೇ ಕೇನ ವಿಜಾನೀಯಾತ್ ' ಈ ಉತ್ತರ ವಾಕ್ಯಕ್ಕೂ ಅದೇ ಅರ್ಥ ವಿರುವುದರಿಂದ ಪುನರುಕ್ತಿ*ದೋಷ ಬರುವುದಿಲ್ಲವೆ? (ವ್ಯರ್ಥವಾಗುವುದಿಲ್ಲವೆ)?

ಪ್ರ ಸಾ.—' ಯೇನೇದಂ ' ಈ ವಾಕ್ಯಕ್ಕೆ ' ವಿಜ್ಞಾತಾರಂ ' ಎಂಬುದು ವ್ಯಾಖ್ಯಾನರೂಪವಾಗಿದೆ ಎಂದು ಒಪ್ಪುತ್ತೇವೆ ಆದುದರಿಂದ ಪುನರುಕ್ತಿ ಆಗುವುದಿಲ್ಲ ( ವ್ಯರ್ಥವಾಗುವುದಿಲ್ಲ )

§ ಯೇನೇತಿ ತೃತೀಯಾ ಪ್ರಥಮಾರ್ಥೇ ಭವಿಷ್ಯತಿ | ಅಥವಾ ಯೇನ ವಿಶದ್ಧ ಸಾಕ್ಷಿಣಾ ಅಯಂ ಪ್ರಮಾತಾ ವಿಜಾನಾತೀತ್ಯರ್ಥೋ ದ್ರಷ್ಟವ್ಯಃ. ( ಬ್ರಹ್ಮವಿದ್ಯಾಭರಣ ೧-೪-೨೨ )

* ಹೇಳಿದುದನ್ನೇ ಪುನ ಹೇಳುವುದು

ವಾ. ವ — ಹಿಂದು ವಾಕ್ಯದ ಮುಂದಿನ ವಾಕ್ಯವು ಅದಕ್ಕೆ ವ್ಯಾಖ್ಯಾನರೂಪವಾಗಿದೆ ಎಂದು ಹೇಳುವುದು ' ಅಗತಿಕಾ ಗತಿಃ =ಗತ್ಯಂತರರಹಿತಾ ಗಮನಿಕಾ ' ಈ ನ್ಯಾಯದಿಂದ ಬೇರೆಯಾವ ಅರ್ಥವು ಮಾಡಲು ಬರದ ಹಾಗಿದ್ದರೆಯೆ ಕೂಡುವುದು. ಪ್ರಕೃತ ಬೇರೆ ಅರ್ಥವು ಉತ್ತಮ ( ಮುಖ್ಯ ) ರೀತಿಯಿಂದ ಕೂಡುತ್ತಿರಲು ಪುನರುಕ್ತಿ ಬರುವ ಹಾಗೆ ಅಮುಖ್ಯಾರ್ಥವನ್ನು ಸ್ವೀಕರಿಸಿ ವ್ಯಾಖ್ಯಾನ ವ್ಯಾಖ್ಯೇಯ ಭಾವವನ್ನು ಅಂಗೀಕರಿಸುವುದು ಯುಕ್ತ ಹೇಗಾದಿತು ?

ಪ್ರ. ಸಾ — ' ಯೇನೇದಂ ' ಈ ವಾಕ್ಯದ ಮುಖ್ಯಾರ್ಥವನ್ನು ( ಸ್ವರಸಾರ್ಥವನ್ನು ) ತೆಗೆದು ಕೊಂಡರೆ ಜೀವ ಈಶ್ವರರ ಭೇದವು ಸಿದ್ಧವಾಗುತ್ತದೆ ಆ ಭೇದವು ಪೂರ್ವ ಪ್ರಕರಣಕ್ಕೆ ವಿರುದ್ಧವಾಗುತ್ತದೆ ಆದುದರಿಂದ ಎರಡನೇಯ ಅಮುಖ್ಯಾರ್ಥವನ್ನು ಸ್ವೀಕರಿಸಬೇಕು ಮತ್ತು ಆ ಅಮುಖ್ಯಾರ್ಥವನ್ನು ಸ್ವಿಕರಿಸುವುದರಿಂದ ಒದಗುವ ಪುನರುಕ್ತಿ ದೋಷದ ಪರಿಹಾರ ಮಾಡುವುದಕ್ಕಾಗಿ ಅಗತಿಕಾಗತಿ ಇರುವುದೇ ( ಗತ್ಯಂತರ ಇರದಾಗ್ಗೆ ಸ್ವೀಕರಿಸುವ ) ವ್ಯಾಖ್ಯಾನವ್ಯಾಖ್ಯೇಯ ಭಾವವನ್ನು ಸ್ವೀಕರಿಸುತ್ತೇವೆ ( ಇದರ ಹೊರತು ಗತ್ಯಂತರವಿಲ್ಲ )

ವಾ. ವ. — ' ಯೇನೇದಂ ' ಎಂಬೇ ವಾಕ್ಯಕ್ಕೆ ಜೀವೇಶ್ವರ ಭೇದಪರವಾದ ಸ್ವರಸವಾದ ಅರ್ಥಕ್ಕೆ ವಿರೋಧ ಮಾಡುವ ಪೂರ್ವ ಪ್ರಕರಣವಾವುದು ಹೇಳಿರಿ ?

ಪ್ರ. ಸಾ. — ಉತ್ತರವಿಲ್ಲ.

ವಾ. ವ. — ಈ ಗ್ರಂಥವಾವುದು ಬಲ್ಲಿರೊ ?

ಪ್ರ. ಸಾ. — ಓಹೊ ? ಚೆನ್ನಾಗಿ ಬಲ್ಲೆವು. ನಮ್ಮ ಅಪ್ಪಯ್ಯದೀಕ್ಷಿತರು ರಚಿಸಿದ ನ್ಯಾಯರಕ್ಷಾಮಣಿ ಎಂಬುದು

ವಾ. ವ. — ಈ ವಾಕ್ಯದ † ಅರ್ಥವೇನು ?

ಪ್ರ. ಸಾ. — ಪೂರ್ವ ಪ್ರಕರಣದಲ್ಲ ಜೀವ ಮತ್ತು ಪರಮಾತ್ಮ ಇವರಿಬ್ಬರೂ ಪ್ರಸಕ್ತರಾಗಿದ್ದಾರೆಂದು ಒಪ್ಪಿದರೆ ( ಜೀವ ಪರಮಾತ್ಮರ ಭೇದವನ್ನು

---

† ಏವಂ ಜೀವೇ ಪರಮಾತ್ಮನಿ ಚ ಪ್ರಾಕ್ ಪ್ರಸ್ತುತೇಽಂಗೀಕೃತೇ । ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ಇತ್ಯುಪಸಂಹಾರವಾಕ್ಯಂ ಯೇನೇತಿ ತೃತೀಯಾಂತಸ್ಯ ಪರಾಮರ್ಶನೀಯಂ ಪರಮಾತ್ಮಾನಂ ವಿಜಾನಾತೇಃ ಕರ್ತಾರಂ ಜೀವಂ ಚಾಸಾದ್ಯ ಸಮಂಜಸಂ ಭವತಿ । ಜೀವಸ್ಯ ಬ್ರಹ್ಮಾಭೇದೇನ ಪ್ರಸ್ತುತತ್ವಾಂಗೀಕಾರೇ ತು ' ಯೇನೇತಿ ' ತೃತೀಯಾ ಪ್ರಥಮಾರ್ಥೇ ಯೋಜನೀಯೇತಿ ಕ್ಲೇಶಃ ಸ್ಯಾತ್ । ' ಗ್ರಾಹಕಂ ಜಗತ್ಸರ್ವಂ ಯೇನ ಕೂಟಸ್ಥಸಾಕ್ಷಿಣಾ ॥ ಲೋಕಃ ಸರ್ವೋ ವಿಜಾನಾತಿ ಜಾನೀಯಾತ್ ಕೇನ ತಂ ವದ ' ಇತಿ ವಾರ್ತಿಕೋಕ್ತಪ್ರಕಾರೇಣ ವಾ ಬ್ರಹ್ಮಾಭಿನ್ನತಯಾ ಪ್ರಸ್ತುತ ಏವ ಜೀವೋ ನಿಷ್ಕೃಷ್ಯ ಸಾಕ್ಷಿರೂಪತಯಾ ' ಯೇನೇತಿ ' ಪರಾಮೃಶ್ಯತೇ । ಅಂತಃಕರಣಾದಿವಿಶಿಷ್ಟರೂಪೇಣ ತು ವಿಜಾನಾತೇಃ ಕರ್ತಾ ಭವತೀತಿ ಕ್ಲೇಶೇನ ಯೋಜನೀಯಂ । ( ನ್ಯಾಯರಕ್ಷಾಮಣಿ ೧-೪-೨೨ ).

ಒಪ್ಪಿದರೆ ) ' ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ಈ ಉಪಸಂಹಾರ ( ಕೊನೆಯ ) ವಾಕ್ಯವು, ' ಯೇನ ' ಎಂಬ ತೃತೀಯಾಂತ ಪದದಿಂದ ಪರಮಾತ್ಮನನ್ನು ಗ್ರಹಿಸಿ ' ವಿಜಾನಾತಿ ' ಈ ಪದದಿಂದ ಜೀವನನ್ನು ಗ್ರಹಿಸಿ ಕೊಳ್ಳುವುದರಿಂದ ' ಸಮಂಜಸಂ ' ಭವತಿ=ಚೆನ್ನಾಗಿ ಹೊಂದುತ್ತದೆ . ಈ ವಾಕ್ಯವು ಜೀವೇಶ್ವರ ಭೇದ ಪರವೆಂದು ಹೇಳಲು ಯುಕ್ತವಾಗುವುದು ) ಪೂರ್ವ ವಾಕ್ಯವು ಜೀವನು ಬ್ರಹ್ಮನಿಂದ ಅಭಿನ್ನನೆಂದು ತಿಳಿಸುವುದು ಆಗಿದೆ ಎಂದು ಒಪ್ಪಿದರೆ ' ಯೇನ ' ಈ ತೃತೀಯಾಂತ ಪದಕ್ಕೆ ಪ್ರಥಮಾಂತವೆಂದು ತಿಳಿದು ಕ್ಲಿಷ್ಟವಾದ ಕಲ್ಪನೆಯಿಂದ ಅರ್ಥವನ್ನು ಹೇಳಬೇಕಾಗುತ್ತದೆಂದು ಈ ಅರ್ಥ ಮಾಡುವುದು ಯೋಗ್ಯವಲ್ಲ, ಹಾಗೆಯೇ ' ಯೇನ ' ಈ ಪದವನ್ನು ತೃತೀಯಾಂತವನ್ನೇ ಇಟ್ಟುಕೊಂಡು ಯೇನ=ಯಾವ ಸಾಕ್ಷಿಯಿಂದ ಜೀವನು, ಈ ಸಮಸ್ತ ಪದಾರ್ಥಗಳನ್ನು ತಿಳಿಯುತ್ತಾನೆಯೋ ಹೀಗೆಂದು ಅಭೇದಪರವಾದ ಅರ್ಥವನ್ನು ಮಾಡಿದರೂ ಸಾಕ್ಷಿಯು ಜೀವನೇ ಆಗಿರುವುದರಿಂದ ಒಬ್ಬ ಜೀವನಿಗೆಯೇ ' ಯೇನ ' ಈ ಪದದಿಂದ ಜ್ಞಾನ ಕರಣತ್ವವನ್ನೂ ಮತ್ತು ' ವಿಜಾನಾತಿ ' ಈ ಪದದಿಂದ ಅದಕ್ಕೆ ವಿರುದ್ಧವಾದ ಜ್ಞಾನ ಕರ್ತೃತ್ವವನ್ನು ಒಪ್ಪುವುದು ಕ್ಲಿಷ್ಟವಾಗುತ್ತದೆ ಆದುದರಿಂದ ಅಭೇದ ಅರ್ಥವನ್ನು ಹೇಳುವುದು ಅಸಂಗತ ವಾಗುತ್ತದೆ ಎಂದು ಅರ್ಥವು

ವಾ ವ — ' ಯೇನೇದಂ ' ಈ ವಾಕ್ಯದಲ್ಲಿರುವ ' ಯೇನ ' ಈ ತೃತೀಯಾಂತ ಪದವನ್ನು ಪ್ರಥಮಾಂತವೆಂದು ತಿಳಿಯುವದು, ಅಥವಾ ತೃತೀಯಾಂತವನ್ನೇ ಇಟ್ಟುಕೊಂಡು ಆ ಪದಕ್ಕೆ ಸಾಕ್ಷಿಯನ್ನು ಎಂಬ ಅರ್ಥವನ್ನು ಇಟ್ಟುಕೊಂಡು ಒಬ್ಬ ಜೀವನಲ್ಲಿಯೆ ಜ್ಞಾನಕರಣತ್ವ, ಜ್ಞಾನಕರ್ತೃತ್ವ ರೂಪವಾದ ವಿರುದ್ಧ ಧರ್ಮವನ್ನು ಒಪ್ಪಿಕೊಂಡು ಅಭೇದವಾದ ಅರ್ಥವನ್ನು ಹೊಂದಿಸುವುದೂ ಕ್ಲಿಷ್ಟ ಕಲ್ಪನೆಯೇ ಆಗುತ್ತಿದ್ದರೆ ಭೇದವನ್ನು ತಿಳಿಸುವ ಸೊಗಸಾಗಿ ಹೊಂದುವ ಅರ್ಥವನ್ನು ಬಿಟ್ಟು ಅಭೇದವನ್ನು ಕೂಡಿಸುವ ಅಯುಕ್ತ ( ಕ್ಲಿಷ್ಟ ) ವಾದ ಅರ್ಥವನ್ನು ಮಾಡುವುದಕ್ಕೆ ಗ್ರಂಥಕಾರನು ಯಾವ ಕಾರಣವನ್ನು ಹೇಳಿದ್ದಾನೆ ?

ಪ್ರ ಸಾ.—ಜೀವ ಬ್ರಹ್ಮರ ಐಕ್ಯ ( ಅಭೇದ ) ವು ಪೂರ್ವವಾಕ್ಯಗಳಲ್ಲಿ ಪ್ರಸಕ್ತವಾಗಿರುವುದರಿಂದ ' ಯೇನೇದಂ ' ಈ ವಾಕ್ಯಕ್ಕೆ ಅಭೇದಪರವಾದ ಯೋಜನೆ ಅಯುಕ್ತ ( ಕ್ಲಿಷ್ಟ ) ವಾದರೆಯೂ ದೋಷಕರವಲ್ಲ ಸಹನ ಮಾಡಿಕೊಳ್ಳಬೇಕು ಎಂದು ಪೂರ್ವ ವಾಕ್ಯಗಳಲ್ಲಿ ಅಭೇದ ಪ್ರಸಕ್ತಿಯನ್ನು ಕ್ಲಿಷ್ಟವಾದ ಯೋಜನೆಗೆ ಕಾರಣವಾಗಿ ಹೇಳಿದ್ದಾರೆ

ವಾ ವ.—ಈ ಅಪ್ಪಯ್ಯ ದೀಕ್ಷಿತರ ವಾಕ್ಯದ ಅಭಿಪ್ರಾಯವೇನು ?

ಪ್ರ ಸಾ —§ 'ಯೇನೇದಂ' ಈ ಶ್ರುತಿಯು ಸ್ವರಸತಃ ಜೀವಪರಮಾತ್ಮರ ಭೇದವನ್ನು ತಿಳಿಸುತ್ತದೆ ಆದುದರಿಂದ ಜ್ಞಾತೃ ಜ್ಞೇಯ ಪ್ರಪಂಚಕ್ಕೆ ಸತ್ಯತ್ವವನ್ನು ತಿಳಿದು ಬರುತ್ತದೆಯಾದರೂ ಪೂರ್ವ ಗ್ರಂಥಗಳಲ್ಲಿ ಜೀವಪರಮಾತ್ಮರಿಗೆ ಅಭೇದವನ್ನು ಹೇಳಿರುವುದರಿಂದ 'ಯೇನೇದಂ' ಈ ವಾಕ್ಯದಿಂದ ಸ್ವರಸತಃ ಪ್ರಾಪ್ತವಾದ ಅರ್ಥವನ್ನು ಬಿಟ್ಟು ಕಷ್ಟದಿಂದ ಬೇರೆ ಅರ್ಥವನ್ನು ಹೇಳಬೇಕೆಂದು ಅಭಿಪ್ರಾಯವು

ವಾ ವ —'ಯೇನೇದಂ' ಈ ವಾಕ್ಯಕ್ಕೆ ಜೀವೇಶ್ವರ ಭೇದವೇ ಮುಖ್ಯಾರ್ಥವು. ಆದುದರಿಂದ ಈ ವಾಕ್ಯವು ಜೀವೇಶ್ವರರ ಅಭೇದಕ್ಕೆ ವಿರೋಧಿಯಾಗಿದೆ ಎಂಬುದೇ ನಿಮ್ಮ ಅದ್ವೈತಿಗಳ ಅಭಿಪ್ರಾಯವಷ್ಟೆ ?

ಪ್ರ ಸಾ —ಉತ್ತರವಿಲ್ಲ

ವಾ. ವ.—'ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್, ಸ ಏಷ ನೇತಿ ನೇತಿ ಆತ್ಮಾಽಗೃಹ್ಯೋ ನ ಹಿ ಗೃಹ್ಯತೆ ವಿಜ್ಞಾತಾರಮರೆ ಕೇನ ವಿಜಾನೀಯಾತ್' ಈ ವಾಕ್ಯವು ಯಾವ ಉಪನಿಷತ್ತಿನಲ್ಲಿದೆ ?

ಪ್ರ ಸಾ.— ಈ ಬೃಹದಾರಣ್ಯೋಪನಿಷತ್ತಿನ ೪ ನೆಯ ಅಧ್ಯಾಯದಲ್ಲಿ ೪ನೆಯ ಬ್ರಾಹ್ಮಣದ ೧೪ ನೇ ಮಂತ್ರವು.

ವಾ ವ.—ಈ ವಾಕ್ಯದ ಅರ್ಥವೇನು ?

ಪ್ರ. ಸಾ —'ಯೇನ' =ಯಾವ ಪರಮಾತ್ಮನಿಂದ ಜೀವನು ಸಮಸ್ತ ಪದಾರ್ಥಗಳನ್ನು ತಿಳಿಯುತ್ತಾನೆಯೋ, ಸ ಏಷ ಆತ್ಮಾ=ಆ ಪರಮಾತ್ಮನು ( ಪರಬ್ರಹ್ಮನು ) 'ನೇತಿ ನೇತಿ' ಎಂಬ ವಾಕ್ಯದಿಂದ ಹೇಳಿಸಿಕೊಳ್ಳುತ್ತಾನೆ. ಅಗೃಹ್ಯಃ=ಅರಿಯುವದಕ್ಕೆ ಅಯೋಗ್ಯವಾದುದರಿಂದ, ನ ಹಿ ಗೃಹ್ಯತೇ= ತಿಳಿದು ಬರುವುದಿಲ್ಲ ಹೀಗೆಂದು ಇದರ ಅರ್ಥವು

ವಾ. ವ.—ಈ ವಾಕ್ಯದಲ್ಲಿ ತೃತೀಯಾಂತ ಪದವಾದ 'ಯೇನ' ಎಂಬುದಕ್ಕೆ 'ಯಃ' ಹೀಗೆ ಪ್ರಥಮಾಂತವೆಂದು ತಿಳಿದುಕೊಂಡು 'ಯ ' ಯಾವ ಜೀವನು ಸಮಸ್ತ ಪದಾರ್ಥಗಳನ್ನು ತಿಳಿಯುತ್ತಾನೆಯೋ ಹೀಗೆಂದು ಅರ್ಥ ಮಾಡಲು ಬರುತ್ತದೆಯೋ ಇಲ್ಲವೋ ?

ಪ್ರ ಸಾ —'ಯೇನ' ಈ ಪದದಿಂದ ಜೀವನನ್ನು ತೆಗೆದುಕೊಂಡರೆ, ಜೀವನು 'ನೇತಿ ನೇತಿ' ಈ ಮುಂದಿನ ವಾಕ್ಯದಿಂದ ಹೇಳಲ್ಪಡುವುದಿಲ್ಲವಾದುದರಿಂದ 'ಸ ಏಷ ಆತ್ಮಾ' ಈ ವಾಕ್ಯದಲ್ಲಿ ಜೀವನನ್ನು ಗ್ರಹಣ ಮಾಡುವುದಕ್ಕೆ ಬರುವುದಿಲ್ಲ, ಆದುದರಿಂದ 'ಯೇನ' ಈ ಪದದಿಂದ ಪರಮಾತ್ಮನನ್ನೇ ಗ್ರಹಿಸಬೇಕು ಜೀವನನ್ನು ಗ್ರಹಿಸಕೂಡದು

§ 'ಯೋಽನೇದಂ ಸರ್ವಂ ವಿಜಾನಾತಿ' ಇತ್ಯಸ್ಯ ಯೋಜನಾ ಕ್ಲೇಶೋಽಪಿ ಅದ್ವೈತಪ್ರಸ್ತಾವಾನುರೋಧಾರ್ಥಾ ತತ್ಸಿದ್ಧವೋಽಭ್ಯುಪೇತ್ಯಾಶಯ ಇತಿ ( ಬ್ರ ಸೂ ೧-೪-೨೨ ).

ವಾ ವ —' ಯೇನೇದಂ ಸರ್ವಂ ವಿಜಾನಾತಿ ' ( ಬೃ ೨ ೪ ೧೪ ) ಈ ಮಂತ್ರ ಕ್ಕೂ ಮತ್ತು ' ಯೇನೇದಂ ಸರ್ವಂ ವಿಜಾನಾತಿ ' ( ಬೃ ೪-೫-೧೫ ) ಈ ವಾಕ್ಯಕ್ಕೂ ಒಂದೇ ಅರ್ಥವಷ್ಟೆ ?

ಪ್ರ. ಸಾ —ಒಂದೇ ಅರ್ಥವೆ ಹೌದು

ವಾ ವ —' ಯೇನೇದಂ ಸರ್ವಂ ವಿಜಾನಾತಿ ( ಬೃ ೪-೫-೧೫ ) ಈ ವಾಕ್ಯವು ' ಯೇನ ' ಈ ಪದದಿಂದ ಪರಮಾತ್ಮನನ್ನು ತೆಗೆದುಕೊಂಡು ಜೀವನು ಪರಮಾತ್ಮನಿಂದ ತಿಳಿಯುತ್ತಾನೆ ಎಂದು ಜೀವನಿಗೆ ಪರಮಾತ್ಮನಿಂದ ಭೇದವನ್ನು ತಿಳಿಸಿ ಕೊಡುತ್ತಿರಲು ಅದರಂತೆಯೇ ಇರುವ ' ಯೇನೇದಂ ಸರ್ವಂ ವಿಜಾನಾತಿ ' ( ೨-೪-೧೪ ) ಈ ವಾಕ್ಯವೂ ಜೀವನಿಗೆ ಪರಮಾತ್ಮನಿಂದ ಭೇದವನ್ನೇ ಬೋಧಿಸುತ್ತದೆ ಎಂದೇ ಹೇಳಬೇಕಾಗಿರಲು ಅಪ್ಪಯ್ಯದೀಕ್ಷಿತರು, ಬ್ರಹ್ಮವಿದ್ಯಾಭರಣಕಾರರು ' ಯೇನ ' ಎಂಬ ಪದಕ್ಕ ' ಯ ' ಎಂದು ಪ್ರಥಮಾಂತವಾಗಿ ತಿಳಿದು ಹೇಳಿದ ' ಜೀವ ' ಎಂಬ ಅರ್ಥವು ಹೇಗೆ ಯುಕ್ತವಾಗುತ್ತದೆ ?

ಪ್ರ. ಸಾ.—ಉತ್ತರವಿಲ್ಲ.

ವಾ. ವ —ಶಾಸ್ತ್ರಿಗಳೇ ! ಈ ವಾಕ್ಯವು ಯಾವ ಗ್ರಂಥದಲ್ಲಿದೆ ?

ಪ್ರ ಸಾ.—ಇದು ನಮ್ಮ ಶಂಕರಾಚಾರ್ಯರ ಸೂತ್ರಭಾಷ್ಯದಲ್ಲದೆ

ವಾ. ವ —ಇದನ್ನೋದಿ ಅರ್ಥವನ್ನು ಹೇಳಿ ?

ಪ್ರ. ಸಾ —' ವಿಜ್ಞಾನಧಾತುರೇವ ಕೇವಲ ಸನ್ ಭೂತಪೂರ್ವಗತ್ಯಾ ಕರ್ತೃತ್ವವಚನೇನ ತೃಚಾ ನಿರ್ದಿಷ್ಟ ಇತಿ ಗಮ್ಯತೇ ' ಈ ವಾಕ್ಯಕ್ಕೆ ' ಮೋಕ್ಷಾವಸ್ಥೆಯಲ್ಲಿ ಜೀವನು ಜ್ಞಾನರೂಪವೇ ಆಗಿದ್ದಾನೆ. ಜ್ಞಾನಕರ್ತೃ ಅಲ್ಲ ಅವನಲ್ಲ ಜ್ಞಾನ ಕರ್ತೃತ್ವ ಧರ್ಮವು ಮಿಥ್ಯಾ=ಅಜ್ಞಾನ ಕಲ್ಪಿತವಾದುದು ಮೋಕ್ಷಾವಸ್ಥೆಯಲ್ಲಿ ಅಜ್ಞಾನ ಇಲ್ಲವಾದುದರಿಂದ, ಅಜ್ಞಾನ ಕಲ್ಪಿತವಾದ ಜ್ಞಾನ ಕರ್ತೃತ್ವ ಧರ್ಮವೇ ಇಲ್ಲ ಶ್ರುತಿಯು ' ವಿಜ್ಞಾತಾರಂ ' ಈ ಪದದಿಂದ ಮೋಕ್ಷಾವಸ್ಥೆಯಲ್ಲಿ ಜ್ಞಾನ ಕರ್ತೃತ್ವವನ್ನು ತಿಳಿಸಿ ಕೊಡುತ್ತಿದ್ದರೂ ಆ ಕಾಲದಲ್ಲಿ ಅದು ಉಂಟೆಂದು ಶ್ರುತಿಯ ಅಭಿಪ್ರಾಯವಲ್ಲ ಈ ಶ್ರುತಿಯು ಪೂರ್ವದಲ್ಲಿ ( ಸಂಸಾರಾವಸ್ಥೆಯಲ್ಲಿರುವ ) ಜ್ಞಾನ ಕರ್ತೃತ್ವವನ್ನು ತಿಳಿಸಿ ಕೊಡುತ್ತದೆ ಎಂದು ಅರ್ಥವು

ವಾ. ವ —ಈ ಶ್ರುತಿಯು ಮೋಕ್ಷಾವಸ್ಥೆಯನ್ನೇ ನಿರೂಪಿಸುವುದರಿಂದ 'ವಿಜ್ಞಾತಾರಂ' ಈ ಪದವು ಮೋಕ್ಷಾವಸ್ಥೆಯಲ್ಲಿಯೇ ಜ್ಞಾನ ಕರ್ತೃತ್ವವನ್ನು ಹೇಳುತ್ತದೆಂದು ಸಿದ್ಧವಾಗುತ್ತಿದ್ದರೂ ಪೂರ್ವಕಾಲದ (ಸಂಸಾರಾವಸ್ಥೆಯ) ಜ್ಞಾನಕರ್ತೃತ್ವವನ್ನು ಹೇಳುತ್ತದೆಯೆಂದು ಹೇಳಲು ಆಧಾರವೇನು ?

ಪ್ರ ಸಾ.—ಶ್ರುತಿಯು ಜೀವನಿಗ ಜ್ಞಾನ ಕರ್ತೃತ್ವವನ್ನು ಮೋಕ್ಷಾವಸ್ಥೆಯಲ್ಲಿ ಹೇಳುತ್ತಿದ್ದರೂ, ಆ ಜ್ಞಾನ ಕರ್ತೃತ್ವವು ಮಿಥ್ಯಾ=ಅಜ್ಞಾನ ಕಲ್ಪಿತ

ವಾದುದರಿಂದ ಅಜ್ಞಾನ ನಿವೃತ್ತಿರೂಪವಾದ ಮೋಕ್ಷಾವಸ್ಥೆಯಲ್ಲಿ ಅಜ್ಞಾನ ಕಲ್ಪಿತವಾದ ಜ್ಞಾನಕರ್ತೃತ್ವವಿರುವುದು ಸಾಧ್ಯವಲ್ಲ ವಾದುದರಿಂದ ಅ ಜೀವನ ಕರ್ತೃತ್ವವು ಸಂಸಾರಾವಸ್ಥೆಯದೆಂದೇ ಒಪ್ಪಬೇಕು.

ವಾ. ವ — ಶಾಸ್ತ್ರಿಗಳೇ ! ಕರ್ತೃತ್ವಾದಿ ಜಗತ್ತು ಸುಳ್ಳೆ ಅಥವಾ ಸತ್ಯವೆ ಇದರ ವಿಚಾರಣೆಯೇ ಈಗ ನಡೆದಿದೆ, ಇನ್ನು ಈವರಿಗೂ ಕರ್ತೃತ್ವವು ಮಿಥ್ಯಾ ಎಂದು ಸಿದ್ಧವಾಗಿಲ್ಲವಾದುದರಿಂದ ಕರ್ತೃತ್ವಾದಿ ಜಗತ್ತು ಮಿಥ್ಯೆಯಾದುದೆಂದು ಸಿದ್ಧವಾದಂತೆ ಇಟ್ಟುಕೊಂಡು ನೀವು ಮೇಲೆ ಹೇಳಿದ ಕಾರಣವು ಹೇಗೆ ಯುಕ್ತವಾದೀತು ?

ಪ್ರ. ವ — ಉತ್ತರವಿಲ್ಲ.

ವಾ ವ. — ಇದು ಯಾವ ಗ್ರಂಥವು ?

ಪ್ರ ಸಾ — ಇದು ನಮ್ಮ ಶಂಕರಾಚಾರ್ಯರ ಸೂತ್ರಭಾಷ್ಯದ ವ್ಯಾಖ್ಯಾನವಾದ ಬ್ರಹ್ಮವಿದ್ಯಾಭರಣವೆಂಬುದು.

ವಾ ವ — † " ಸರ್ವಪ್ರಮಾಣೈಃ " ಈ ವಾಕ್ಯದ ಅರ್ಥವೇನು ?

ಪ್ರ. ಸಾ. — ಪ್ರಪಂಚವು ಎಲ್ಲ ಪ್ರಮಾಣಗಳಿಂದ ಉಪಲಬ್ಧವಾಗುತ್ತಿರುವುದರಿಂದ ಪ್ರಪಂಚದ ಅಭಾವವೇ ( ಪ್ರಪಂಚದ ಇಲ್ಲದಿರುವಿಕೆ ) ತತ್ತ್ವವೆಂದು ನಿರೂಪಿಸುವುದು ಅಶಕ್ಯವು ( ಸಾಧನ ಮಾಡಲು ಬರುವುದಿಲ್ಲ) ಎಂಬ ದೂಷಣವು ಸ್ಪಷ್ಟವಾಗಿರುವುದರಿಂದ ಜಗತ್ತಿನ ಅಭಾವವನ್ನು ಹೇಳುವ ಶೂನ್ಯವಾದಿಗಳಾದ ಬೌದ್ಧರ ಮತವನ್ನು ನಿರಾಕರಿಸುವದಕ್ಕಾಗಿ ಸೂತ್ರಕಾರರು ಸೂತ್ರ ಮಾಡಲಿಲ್ಲ ಎಂದು ಅರ್ಥವು

ವಾ ವ — ಇದು ಯಾವ ಗ್ರಂಥವು ?

ಪ್ರ ಸಾ — ಮೇಲೆ ಹೇಳಿದ ಬ್ರಹ್ಮವಿದ್ಯಾಭರಣ ವ್ಯಾಖ್ಯಾನಕ್ಕೆ ಮೂಲಭೂತವಾದ ಶಂಕರಾಚಾರ್ಯರ ಸೂತ್ರಭಾಷ್ಯವು.

ವಾ ವ. — ' ಶೂನ್ಯವಾದಿಪಕ್ಷಸ್ತು ' * ಇದೇ ಮೊದಲಾದ ಈ ವಾಕ್ಯಕ್ಕೆ ಅರ್ಥವನ್ನು ಹೇಳಿ ?

ಪ್ರ. ಸಾ — ಜಗತ್ತು ಸತ್ಯವಲ್ಲ ಮಿಥ್ಯೆಯಾದುದು ಎಂಬ ಶೂನ್ಯವಾದಿಯ ಮತವು ಸರ್ವ ಪ್ರಮಾಣ ವಿರುದ್ಧವಾಗಿದೆ. ಆದುದರಿಂದ ಅದನ್ನು ಖಂಡನ ಮಾಡುವುದಕ್ಕೋಸ್ಕರ ಸೂತ್ರಕಾರರು ಸೂತ್ರಗಳನ್ನು ನಿರ್ಮಾಣ ಮಾಡಲಿಲ್ಲ ( ಅತ್ಯಂತ ಹೇಯವಾದ ಮತವನ್ನು ಖಂಡಿಸುವುದು ಯೋಗ್ಯವಲ್ಲ ) ಹೀಗೆಂದು ಇದರ ಅಭಿಪ್ರಾಯವು.

---

† ಸರ್ವಪ್ರಮಾಣೈಃ ಪ್ರಪಂಚೇ ಉಪಲಭ್ಯಮಾನೇ ತದಭಾವ ಏವ ತತ್ತ್ವಮಿತಿ ನಿರೂಪಯಿತುಮಶಕ್ಯಮಿತಿ ದೂಷಣಸ್ಯ ಸ್ಫುಟತಯಾ ತನ್ನಿರಾಕರಣಾಯ ನ ಸೂತ್ರಕೃತಾ ಸೂತ್ರಾಣ್ಯಾರಚಿತಾನಿ ( ಬ್ರಹ್ಮವಿದ್ಯಾಭರಣ ೨-೨-೩೦ )

* ಶೂನ್ಯವಾದಿಪಕ್ಷಸ್ತು ಸರ್ವಪ್ರಮಾಣವಿಪ್ರತಿಷಿದ್ಧ ಇತಿ ತನ್ನಿರಾಕರಣಾಯ ನಾದರಃ ಕ್ರಿಯತೇ (ಶಾರೀರ ಭಾಷ್ಯ ೨ ೨ ೩೧)

ವಾ. ವ.—ಈ ಶಂಕರಾಚಾರ್ಯರ ಭಾಷ್ಯದಿಂದಲೂ, ಮತ್ತು ಅದರ ಬ್ರಹ್ಮ ವಿದ್ಯಾಭರಣವೆಂಬ ಹೆಸರಿನ ಟೀಕೆಯಿಂದಲೂ ಏನು ಸಿದ್ಧವಾಗುತ್ತದೆ ?

ಪ್ರ ಸಾ.—ಜಗತ್ತು ಪ್ರಮಾಣಗಳಿಂದ ಸತ್ಯವಾದುದೆಂದು ಉಪಲಬ್ಧವಾಗುತ್ತಿರಲು ಆ ಜಗತ್ತು ಮಿಥ್ಯೆಯಾದುದ ಸತ್ಯವಾದುದಲ್ಲ ಎಂಬ ಬೌದ್ಧರ ಮತವು ಅತ್ಯಂತ ಅಯುಕ್ತವಾಗಿದೆ ಎಂದು ಸಿದ್ಧಿಸುವುದು.

ವಾ ವ.—ನಿಮ್ಮ ಅದ್ವೈತ ಮತದಲ್ಲಿ ಜಗತ್ತು ಸತ್ಯವೆಂದು ಹೇಳಿದೆಯೋ ಇಲ್ಲವೆ ಮಿಥ್ಯೆಯೆಂದು ಹೇಳಿದೆಯೋ ?

ಪ್ರ. ಸಾ.—ಜಗತ್ತು ಮಿಥ್ಯಾ ( ಸುಳ್ಳು ) ಎಂದು ಹೇಳಿದೆ

ವಾ. ವ.—ಎಂದ ಮೇಲೆ ನೀವು ಬೌದ್ಧರಿಗೆ ಹೇಳಿದ ದೋಷವು ನಿಮ್ಮ ಮೇಲೆ ಬರುವುದಿಲ್ಲವೆ ?

ಪ್ರ ಸಾ —ಉತ್ತರವಿಲ್ಲ.

ವಾ. ವ —" ಯತ್ರ ಹಿ ದ್ವೈತಮಿವ ಭವತಿ .. .ಯತ್ರ ವಾ ಅಸ್ಯ ಸರ್ವಂ ಆತ್ಮೈವಾಭೂತ್ ' ಈ ವೇದವಾಕ್ಯಕ್ಕೆ ಆತ್ಮಾತಿರಿಕ್ತವಾದ ವಸ್ತು ಇಲ್ಲವೆಂದು ಹೇಳುವ ಅಭಿಪ್ರಾಯವಿದ್ದರೆ ' ಅತ್ಮಾತಿರಿಕ್ತಂ ಜಗತ್ ನಾಸ್ತಿ " ( ಆತ್ಮನಿಂದ ಬೇರೆಯಾದ ಜಗತ್ತಿಲ್ಲ ) ಎಂದಿಷ್ಟೇ ಹೇಳುವುದು ಸಾಕಾಗುತ್ತಿರುವಾಗ ಯಾರು ಯಾರನ್ನು ಯಾವುದರಿಂದ ಹೇಗೆ ನೋಡುವುದು ಇತ್ಯಾದಿ ಅರ್ಥಬೋಧಕವಾದ ಅನೇಕ ವಾಕ್ಯಗಳು ವ್ಯರ್ಥವಾಗುವುವಲ್ಲವೆ ? ಹಾಗೆಯೇ ಜಿಘ್ರೇತ್ ಪಶ್ಯೇತ್ ಇತ್ಯಾದಿ ವಿಧಿಲಿಂಗಂತ ಪ್ರಯೋಗಗಳೂ ವ್ಯರ್ಥ ವಾಗುವುದಿಲ್ಲವೆ ?

ಪ್ರ. ಸಾ.—ಉತ್ತರವಿಲ್ಲ.

---

## ವಾದಿಯ ವಿಚಾರಣೆ.

ಪ್ರ ವ —ಆಚಾರ್ಯರೆ ! ನೀವು ಈ ಶ್ರುತಿಯ ಅರ್ಥವನ್ನು ಹೇಗೆ ಹೇಳುವಿರಿ ?

ವಾ. ಸ.—ಅನುಮಾನವೆಂಬ ಪ್ರಮಾಣದಲ್ಲಿ 'ತರ್ಕ' ಎಂಬುದು ಒಂದು ಪ್ರಭೇದವುಂಟು. ಅದರ ಉದಾಹರಣೆ ಹೀಗೆ ಇದೆ—ನೀನು ವಿಷವನ್ನು ಕುಡಿದರೆ ನಿನಗೆ ಮರಣರೂಪವಾದ ಅನಿಷ್ಟವುಂಟಾಗುವುದು ಆ ಮರಣವು ನಿನಗೆ ಉಂಟಾಗಬಾರದೆಂದು ನೀನು ವಿಷವನ್ನು ಕುಡಿಯಬೇಡ, ನೀನು ಅಧಿಕವಾಗಿ ಭೋಜನ ಮಾಡಿದರೆ ಅಜೀರ್ಣವಾಗುವುದು, ಅಜೀರ್ಣವಾಗಬಾರದೆಂದು ನೀನು ಅಧಿಕ ಭೋಜನ ಮಾಡಬೇಡ. ಇದೇ ಪ್ರಕಾರವಾಗಿ ಯಾವನಾದರೊಬ್ಬ ಮನುಷ್ಯನು ಯಾವುದೋ ಕೆಟ್ಟ ಕೆಲಸವನ್ನು ಮಾಡತೊಡಗಿದರೆ ಅವನಿಗೆ, ನಿನಗೆ ಕೆಟ್ಟ ಪರಿಣಾಮವಾಗುವುದು ಅದು ಆಗ ಕೂಡದು ಆದುದರಿಂದ ಆ ಕೆಟ್ಟ ಕೆಲಸವನ್ನು ಮಾಡ ಬೇಡ ಹೀಗೆಂದು ತಿಳಿಸುವದಕ್ಕಾಗಿ ಯಾವುದು ಆಪಾದನ ಮಾಡುತ್ತದೆಯೋ ಆದನ್ನು ತರ್ಕವೆಂದು ಹೇಳುತ್ತಾರೆ.

'ಯತ್ರ ವಾ' ಈ ಶ್ರುತಿಯು ಮೇಲೆ ಹೇಳಿದ ತರ್ಕರೂಪವಾದ ಪ್ರಮಾಣ ವನ್ನು ತೋರಿಸುತ್ತ ಜಗತ್ತು ಸತ್ಯವೇ ಮಿಥ್ಯಾ ಅಲ್ಲವೆಂದು ತಿಳಿಸಿ ಕೊಡುತ್ತದೆ. 'ಯತ್ರ'= ಯಾವ ಮೋಕ್ಷಾವಸ್ಥೆಯಲ್ಲಿ ಅಸ್ಯ=ಈ ಜ್ಞಾನಿಗೆ, ಸರ್ವಂ=ಎಲ್ಲಾ ಪದಾರ್ಥಗಳು'ಆತ್ಮೈವಾಭೂತ್'=ಆತ್ಮನಿಂದ ಬೇರೆ ಇರದೆ(ಹೋಗ ಬಹುದೋ) ತತ್=ತತ್ರ=ಆ ಕಾಲದಲ್ಲಿ, ಕೇನ=ಯಾವ ಘ್ರಾಣೇಂದ್ರಿಯದಿಂದ, ಕಂ=ಯಾವ ಗಂಧವನ್ನು, ಜಿಘ್ರೇತ್=ಮೂಸಿಸಿಯಾನು! ಯಾವ ಚಕ್ಷುರಿಂದ್ರಿಯದಿಂದ ಯಾವ ರೂಪವನ್ನು ತಿಳಿದು ಕೊಂಡಾನು? ಯಾವ ಶ್ರೋತ್ರೇಂದ್ರಿಯದಿಂದ ಶಬ್ದವನ್ನು ಕೇಳಿಯಾನು! ಯಾವ ವಾಗಿಂದ್ರಿಯದಿಂದ ಯಾವ ಶಬ್ದವನ್ನು ಉಚ್ಚಾರ ಮಾಡಿ ಯಾನು! ಯಾವ ಮನಸ್ಸಿನಿಂದ ವಿಷಯವನ್ನು ವಿಚಾರ ಮಾಡಿಯಾನು! ಯಾವು ದರಿಂದ ಯಾವುದರ ಜ್ಞಾನವನ್ನು ಸಂಪಾದಿಸಿಯಾನು! ಯಾವ ಪರಮಾತ್ಮನಿಂದ ಜೀವನು ಇದೆಲ್ಲವನ್ನೂ ತಿಳಿಯುವನೋ ಆ ಪರಮಾತ್ಮನನ್ನು ಹೇಗೆ ತಿಳಿದು ಕೊಂಡಾನು! ಈ ಪದಾರ್ಥಗಳನ್ನು ತಿಳಿಯತಕ್ಕ ತನ್ನನ್ನು ಹೇಗೆ(ದೋಷದೆಶೆಯಲ್ಲಿ) ಆತ್ಮಾತಿರಿಕ್ತವಾದ ವಸ್ತುವು ಇಲ್ಲದೆ ಹೋದ ಪಕ್ಷದಲ್ಲಿ ತಿಳಿದುಕೊಂಡಾನು! ಇಂಥ ಗಂಧಾದಿ ಜ್ಞಾನ ಆಗದೆ ಹೋಗಲಿ ಎಂಬ ಅನಿಷ್ಟಪ್ರಾಪ್ತಿಯನ್ನು ತೋರಿ ಸಿಕೊಟ್ಟುಗಂಧರೂಪಾದಿ ವಸ್ತುಗಳ ಜ್ಞಾನವಾಗುವುದೂ, ಮತ್ತು ಪರಮಾತ್ಮನ ಮತ್ತು ತನ್ನ ಸ್ವಂತದ ಜ್ಞಾನವಾಗುವುದೂ, ಇವೆಲ್ಲವೂ ಮೋಕ್ಷಾವಸ್ಥೆಯಲ್ಲಿ ಅತ್ಯಂತ ಆವಶ್ಯಕವಾಗಿರುವುದರಿಂದ ಯಾವ ಪದಾರ್ಥವೂ ಆತ್ಮಾರಿಕ್ತವಾಗಿ ಇಲ್ಲವೆಂದು ಹೇಳುವುದು ಯುಕ್ತವಲ್ಲ ಈ ಪ್ರಕಾರವಾಗಿ ಈ ಶ್ರುತಿಯು ಮೋಕ್ಷಾ ವಸ್ಥೆಯಲ್ಲಿ ಜ್ಞಾನ, ಜ್ಞೇಯ, ಜ್ಞಾತಾ, ಈ ಪದಾರ್ಥಗಳನ್ನು ತಿಳಿಸಿ ಕೊಡುತ್ತ, ಜೀವ ಪರಮಾತ್ಮರ ಭೇದವನ್ನೂ, ಜ್ಞಾತೃ ಜ್ಞೇಯಾದಿ ರೂಪವಾದ ಜಗತ್ತಿನ ಸತ್ಯತ್ವವನ್ನೂ ತಿಳಿಸಿ ಕೊಡುತ್ತದೆ

ಪ್ರ ವ—ಭೋಜನ ಮಾಡಿದರೆ ಹೊಟ್ಟೆ ತುಂಬೀತು ಎಂದು ಹೇಳಿದರೆ ಹೊಟ್ಟೆ ತುಂಬುವುದು (ತೃಪ್ತಿಯಾಗುವುದು) ನಮಗೆ ಇಷ್ಟವಾದುದರಿಂದ ಅದು ಹೇಗೆ ಬಾಧಕವಾಗದೋ ಹಾಗೆಯೇ ಮೋಕ್ಷದಲ್ಲಿ ಸರ್ವವೂ ಆತ್ಮ ಸ್ವರೂಪವೇ ಆದುದು ಆತ್ಮಾತಿರಿಕ್ತವಾದುದಲ್ಲ ಎಂದು ಅಂಗೀಕರಿಸಿ ದರೆ ಗಂಧಾದಿಗಳ ಜ್ಞಾನವು ಮತ್ತು ಯಾವ ಪರಮಾತ್ಮನಿಂದ ಜೀವನು ಎಲ್ಲವನ್ನೂ ತಿಳಿಯುತ್ತಾನೆಯೋ ಆ ಪರಮಾತ್ಮನ ಜ್ಞಾನವೂ ಮತ್ತು ತನ್ನ ಜ್ಞಾನವೂ ಆಗದೇ ಹೋಗ ಬೇಕಾದೀತು. ಎಂದು ನೀವು ಹೇಳಿ ದುದು, ನಮಗೆ ಅನಿಷ್ಟವಲ್ಲ ಇಷ್ಟವೇ ಆದುದು. ಮೋಕ್ಷಾವಸ್ಥೆಯಲ್ಲಿ ಗಂಧಾದಿ ಜ್ಞಾನ ಬೇಡ, ಈಶ್ವರ ಜ್ಞಾನ ಬೇಡ ತನ್ನ ಜ್ಞಾನ ಬೇಡ, ಮತ್ತೊಬ್ಬರ ಜ್ಞಾನವೂ ಬೇಡ ಆದುದರಿಂದ ಕಾರಣೀಭೂತವಾದ ಆತ್ಮಾತಿರಿಕ್ತವಾದ ಪದಾರ್ಥವನ್ನು ಒಪ್ಪುವ ಆವಶ್ಯಕತೆಯೇ ಇಲ್ಲ

ವಾ. ಸ—ಸ್ಥಲವಿಶೇಷಕ್ಕೆ ಹೋದರೆ ಅನಿಷ್ಟವಾದ ಮರಣವು ಪ್ರಾಪ್ತವಾಗು ವುದು ಆದುದರಿಂದ ನೀನು ಅಲ್ಲಿಗೆ ಹೋಗಬೇಡವೆಂದು ಪೋಲೀಸಿ

ನವನು ಯಾವನಾದರೊಬ್ಬನಿಗೆ ಹೇಳಿದರೆ ಮರಣವು ನನಗೆ ಇಷ್ಟವು ನಾನು ಹೋಗತಕ್ಕವನೇ ಹೀಗೆಂದು ಆ ಪುರುಷನು ಪೋಲೀಸಿನವನಿಗೆ ಉತ್ತರವನ್ನು ಕೊಟ್ಟರೆ ಪೋಲೀಸನು ಆ ಪುರುಷನಿಗೆ ಮರಣವು ನಿನಗೆ ಇಷ್ಟವಾದರೆ ಅದು ಶಾಸ್ತ್ರದಿಂದ ( ಕಾಯದೆಯಿಂದ ) ವಿರುದ್ಧವಾಗುತ್ತದೆಯಾದುದರಿಂದ ನಿನಗೆ ಇಷ್ಟವಾದರೂ ಆ ಮರಣವು ಶಾಸ್ತ್ರದಿಂದ ಅನಿಷ್ಟವೇ ಆದುದು ಅದಕ್ಕಾಗಿ ಅನಿಷ್ಟವಾದ ಮರಣವು ನಿನಗೆ ಆಗಬಾರದೆಂದು ನೀನು ಆ ಸ್ಥಳಕ್ಕೆ ಹೋಗಬೇಡ ಎಂದು ಹೋಗುವವನನ್ನು ತಡೆಯುವನೋ ಹಾಗೆಯೇ "ಮೋಕ್ಷಾವಸ್ಥೆಯಲ್ಲಿ ಗಂಧಾದಿ ಜ್ಞಾನವು, ಈಶ್ವರನ ಜ್ಞಾನವು, ತನ್ನ ಜ್ಞಾನವು, ಬೇರೆಯವರ ಜ್ಞಾನವು ಉಂಟೆಂದು ಪ್ರಮಾಣಗಳಿಂದ ಸಿದ್ಧವಾಗುತ್ತಿರುವುದರಿಂದ ಆ ಜ್ಞಾನಾದಿ ಪದಾರ್ಥಗಳನ್ನು ಅವಶ್ಯವಾಗಿ ಸ್ವೀಕರಿಸಲೇ ಬೇಕಾಗುವದು. ಗಂಧಾದಿ ಜ್ಞಾನ ಬೇಡ ಎನ್ನುವುದು ಇಷ್ಟವಲ್ಲ ಅನಿಷ್ಟವಾದುದೆ ( ಶಾಸ್ತ್ರ ವಿರುದ್ಧವು ). ಗಂಧಾದಿ ಜ್ಞಾನವು ಆಗುವುದಕ್ಕೋಸ್ಕರ ಮೋಕ್ಷಾವಸ್ಥೆಯಲ್ಲಿಯೂ ಆತ್ಮಾತಿರಿಕ್ತವಾದ ಪದಾರ್ಥವನ್ನು ಒಪ್ಪಲೇ ಬೇಕಾಗುವುದು, ಆತ್ಮಾತಿರಿಕ್ತವಾದ ಪದಾರ್ಥವೆ ಇಲ್ಲವೆಂದು ಹೇಳುವುದು ಯುಕ್ತವಲ್ಲವೆಂದು ಕೇನ ಕಂ ಪಶ್ಯೇತ್...... ವಿಜ್ಞಾತಾರಮರೇ ಕೇನ ವಿಜಾನೀಯಾತ್ ಇತ್ಯಾದಿ ಶ್ರುತಿಯು ಹೇಳುತ್ತದೆ ಆದಕಾರಣ ಮೋಕ್ಷಾವಸ್ಥೆಯಲ್ಲಿ ಗಂಧಾದಿ ಜ್ಞಾನವುಂಟಾಗದಿರುವುದು ನಿಮಗೆ ಇಷ್ಟವಾದರೂ ಶಾಸ್ತ್ರವಿರುದ್ಧವಾದುದರಿಂದ ಅನಿಷ್ಟವೇ ಆಗುವುದು. ಈ ಕಾರಣದಿಂದ ಆತ್ಮಾತಿರಿಕ್ತ ಪದಾರ್ಥವನ್ನು ಮೋಕ್ಷಾವಸ್ಥೆಯಲ್ಲಿ ಒಪ್ಪಲೇಬೇಕಾಗುವುದು.

ಪ್ರ ವ —ಆಚಾರ್ಯರೆ ! ಗಂಧಾದಿ ಜ್ಞಾನ, ಪರಮಾತ್ಮನ ಜ್ಞಾನ, ತನ್ನ ಜ್ಞಾನ, ಮತ್ತು ಬೇರೆಯವರ ಜ್ಞಾನ ಇವೆಲ್ಲವು ಮೋಕ್ಷಾವಸ್ಥೆಯಲ್ಲಿ ಉಂಟೆಂಬ ವಿಷಯದಲ್ಲಿ ಯಾವ ಪ್ರಮಾಣಗಳಿವೆ ?

ವಾ ಸ.—ಅನೇಕ ಪ್ರಮಾಣಗಳಿವೆ.

ಪ್ರ. ವ.—ಆ ಪ್ರಮಾಣಗಳನ್ನು ಹೇಳಿ

ವಾ. ಸ.—(೧) ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ( ಛಾ. ೮-೧೨-೩ ).

(೨) ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ ( ಛಾ. ೮-೩ ೧ )

(೩) ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ( ತೈ ) ಇತ್ಯಾದಿ

ಪ್ರ ವ.—ಈ ಶ್ರುತಿಗಳ ಅರ್ಥವನ್ನು ಹೇಳಿ ?

ವಾ. ಸ — ಸ = ಮುಕ್ತನು, ತತ್ರ = ಮೋಕ್ಷಾವಸ್ಥೆಯಲ್ಲಿ ರಥಾದಿ ವಾಹನಗಳಿಂದ ಸಂಚರಿಸುತ್ತಾನೆ, ಭಕ್ಷಿಸುತ್ತಾನೆ, ಕ್ರೀಡಿಸುತ್ತಾನೆ, ಸ್ತ್ರೀಯರೊಡನೆ ರಮಿಸುತ್ತಾನೆ

(೨) ಮುಕ್ತನು, ಯಾವಾಗ್ಗೆ ಪಿತೃಲೋಕವನ್ನು ನೋಡಬೇಕೆಂದು ಅಪೇಕ್ಷಿಸುವನೋ ಆವಾಗ್ಗೆ ಆತನ ಪಿತೃಗಳು ಸಮ್ಮುಖದಲ್ಲಿ ಬರುವರು

(೩) ಮುಕ್ತರು ತಮಗೆ ಅಪೇಕ್ಷಿತವಾದ ಸರ್ವ ಫಲವನ್ನು ಹೊಂದುವರು ಇತ್ಯಾದಿ

ಪ್ರ. ವ - ಈ ಶ್ರುತಿಗಳು ಮೋಕ್ಷಾವಸ್ಥೆಯಲ್ಲಿ ಭಕ್ಷಣ ಕ್ರೀಡಾದಿ ವ್ಯಾಪಾರಗಳು ಉಂಟೆಂದು ಬೋಧಿಸುವುವೆಂದು ಹೇಗೆ ತಿಳಿದಿರಿ ?

ವಾ ಸ — ಪರಮಾತ್ಮನನ್ನು ಹೊಂದಿ ತನ್ನ ಸ್ವರೂಪವು ಅಭಿವ್ಯಕ್ತವಾದಮೇಲೆ ( ಮುಕ್ತನಾದಮೇಲೆ ) ಅವನಿಗೆ ಕ್ರೀಡಾದಿಗಳನ್ನು ಈ ಶ್ರುತಿಗಳು ಹೇಳುವುದರಿಂದ ಈ ಕ್ರೀಡಾದಿಗಳು ಮೋಕ್ಷಾವಸ್ಥೆಯಲ್ಲಿಯೇ ಉಂಟು ಎಂದು ಸಿದ್ಧವಾಗುವುದು ಮತ್ತು **ಶಂಕರಾಚಾರ್ಯರ** ಮುಂತಾದ ಅದ್ವೈತಿಗಳೂ ' ಜಕ್ಷನ್ ' ' ಕ್ರೀಡನ್ ' ಇತ್ಯಾದಿ ಶ್ರುತಿಗಳು ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳನ್ನು ಹೇಳುತ್ತವೆ ಎಂದು ತಮ್ಮ ಗ್ರಂಥಗಳಲ್ಲಿ ಹೇಳಿದ್ದಾರೆ

ಪ್ರ ವ — ಆಚಾರ್ಯರೆ ! ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳನ್ನು ಈ ಶ್ರುತಿಗಳು ಹೇಳುತ್ತವೆ ಎಂದು ಶಂಕರಾಚಾರ್ಯರು ಯಾವ ವಾಕ್ಯಗಳಿಂದ ಹೇಳಿದ್ದಾರೆ ಆ ವಾಕ್ಯಗಳನ್ನು ಹೇಳಿ ?

ವಾ. ಸ — ' ಜಕ್ಷನ್, ಕ್ರೀಡನ್ ರಮಮಾಣಃ ' ' ಸ ಯದಿ ಪಿತೃಲೋಕಕಾಮೋ ಭವತಿ ' ' ಯ ಸರ್ವಜ್ಞಃ ಸರ್ವವಿತ್ ' ' ಸರ್ವಾನ್ ಕಾಮಾನ್ ಸಮಶ್ನುತೇ ' ಇತ್ಯಾದಿಶ್ರುತಿಭ್ಯೋ ಮೋಕ್ಷೇ ಸುಖಂ ಸಂವೇದ್ಯಮಿತಿ ( ೩-೧-೨೮ ) ಬೃಹದಾರಣ್ಯಭಾಷ್ಯೇ

ಪ್ರ ವ. — ಈ ವಾಕ್ಯಕ್ಕೆ ಅರ್ಥವನ್ನು ಹೇಳಿ ?

ವಾ. ಸ. — ಮುಕ್ತಜೀವನು ಮೋಕ್ಷಾವಸ್ಥೆಯಲ್ಲಿ ಭಕ್ಷಣ ಕ್ರೀಡಾದಿಗಳನ್ನು ಮಾಡುತ್ತಾನೆ, ಎಲ್ಲಾ ಈಪ್ಸಿತ ಪದಾರ್ಥಗಳನ್ನು ಪಡೆಯುತ್ತಾನೆ ಇತ್ಯಾದಿ ವಾಕ್ಯಗಳಿಂದ ಮೋಕ್ಷಾವಸ್ಥೆಯಲ್ಲಿ ಮುಕ್ತನಿಗೆ ಗಂಧಾದಿ ಜ್ಞಾನವುಂಟು ಎಂಬ ವಿಷಯದಲ್ಲಿ ಈ ಶ್ರುತಿಗಳು ಪ್ರಮಾಣಗಳಾಗಿವೆ ಎಂದು ಸಿದ್ಧವಾಗುತ್ತದೆ.

**ಕೋರ್ಟ — ವಿಷ್ಣುದಾಸಾಚಾರ್ಯರ ! " ಕಶ್ಚಿತ್ ಕಾಂತಾ ' ಎಂದಿಷ್ಟೆ ವಾಕ್ಯವನ್ನು ತೆಗೆದುಕೊಂಡು ' ಕಶ್ಚಿತ್ ' ಈ ಪುಲ್ಲಿಂಗ ಶಬ್ದವನ್ನು ಕಾಂತಾ ಈ ಸ್ತ್ರೀಲಿಂಗ ಶಬ್ದಕ್ಕೆ ವಿಶೇಷಣ ಮಾಡಿದೆ ಎಂದು ಹೇಳುವ ಹಾಗೆ,**

ಶಂಕರಾಚಾರ್ಯರ ಸಿದ್ಧಾಂತವಾಕ್ಯವನ್ನು ನೋಡದೆಯೇ ಕೇವಲ ಪೂರ್ವಪಕ್ಷ ವಾಕ್ಯವನ್ನು ತೆಗೆದುಕೊಂಡು ಶಂಕರಾಚಾರ್ಯರು ಸ್ವೀಕರಿಸಿದ್ದಾರೆ ಎಂದು ಹೇಳುವುದು ನಿಮ್ಮ ಸ್ವಭಾವವೆಂದು ತೋರುತ್ತದೆ,

ವಾ ಸ — ಧರ್ಮರಾಜ ಪ್ರಭುವೆ ! ನಾವು ಪೂರ್ವಪಕ್ಷ ಗ್ರಂಥವನ್ನು ಸಿದ್ಧಾಂತ ಗ್ರಂಥವನ್ನೂ ನೋಡದೆಯೇ ಹೇಳುವುದಿಲ್ಲ ನಾವು ಹೇಳಿದ ವಾಕ್ಯಗಳು ಪೂರ್ವಪಕ್ಷದಲ್ಲಿಯೇ ಉಂಟು ಆದರೆ ಸಿದ್ಧಾಂತದಲ್ಲಿಯೂಕೂಡ ಈ ಶ್ರುತಿಗಳು ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳನ್ನು ಹೇಳುತ್ತವೆ ಎಂದು ತಮ್ಮ ಬೃಹದಾರಣ್ಯಕೋಪನಿಷತ್ತಿನ ಭಾಷ್ಯದಲ್ಲಿಯೂ, ಸೂತ್ರಭಾಷ್ಯದಲ್ಲಿಯೂ, ಹೇಳಿ ತಮ್ಮ ಮತದ ಅಭಿಮಾನದಿಂದ ಪೂರ್ವಾವಸ್ಥೆಯ (ಸಂಸಾರಾವಸ್ಥೆಯ) ಲ್ಲಿ ದೇವ, ಯೋಗಿ ಇತ್ಯಾದಿಗಳು ಅನುಭವಿಸುವ ಕ್ರೀಡಾದಿಗಳ ಅನುವಾದವನ್ನು ಮೋಕ್ಷದ ಸ್ತುತಿ ಮಾಡುವುದಕ್ಕಾಗಿ ಈ ಶ್ರುತಿಯು ಮಾಡುತ್ತದೆ ಅಥವಾ ಭಕ್ಷಣ ಮಾಡುತ್ತಾನೆ, ಕ್ರೀಡಿಸುತ್ತಾನೆ ಇತ್ಯಾದಿ ಹೇಳುವ ಶ್ರುತಿಗಳಿಗೆ ಮುಕ್ತರಿಗೆ ದುಃಖವಿಲ್ಲವೆಂದು ಹೇಳುವದರಲ್ಲಿ ತಾತ್ಪರ್ಯವೇ ವಿಷಯವಾಗಿ ಇದೆ ಹೊರತು ಭಕ್ಷಣಾದಿಗಳು ಉಂಟು ಎಂದು ಹೇಳುವುದರಲ್ಲಿ ತಾತ್ಪರ್ಯವಿಲ್ಲ ಎಂದು ಹೇಳಿ ತಮ್ಮ ಮತವನ್ನು ಸರಿಪಡಿಸಿದಂತೆ ತೋರಿಸಿದ್ದಾರೆ.

ಶಂಕರಾಚಾರ್ಯರು ತಮ್ಮ ಮತವನ್ನು ಸರಿಪಡಿಸಬೇಕೆಂದು ಏನಾದರೂ ಹೇಳಿಕೊಳ್ಳಲಿ ' ಜಕ್ಷನ್ ' ಇತ್ಯಾದಿ ಶ್ರುತಿಗಳು ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳನ್ನು ಹೇಳುತ್ತವೆ ಎಂಬುವದು ನಿರ್ವಿವಾದವಾದುದು ಆದುದರಿಂದ ಈ ಶ್ರುತಿಯು ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳು ಉಂಟೆಂದು ಹೇಳುತ್ತದೆ. ಶಂಕರಾಚಾರ್ಯರು ಪೂರ್ವಪಕ್ಷ ಸಂದರ್ಭದಲ್ಲಿ ಹೇಳಿದ್ದಾಗ್ಯೂ ಸಿದ್ಧಾಂತದಲ್ಲಿ ಇದೇ ಶ್ರುತಿಗಳಿಗೆ ಬೇರೇ ಅರ್ಥವನ್ನು ಹೇಳಿಲ್ಲವಾದುದರಿಂದ ಆ ವಾಕ್ಯಗಳಿಂದ ಶಂಕರಾಚಾರ್ಯರು ಮೋಕ್ಷಾವಸ್ಥೆಯಲ್ಲಿ ಕ್ರೀಡಾದಿಗಳು ಉಂಟೆಂದು ಶ್ರುತ್ಯರ್ಥವನ್ನು ಸ್ವೀಕರಿಸಿದ್ದಾರೆಂದು ನಾವು ಹೇಳಿದ್ದೇವೆ.

ಕೋರ್ಟ — ಈ ಉಪನಿಷತ್*ಭಾಷ್ಯದಲ್ಲಿರುವ ವಾಕ್ಯಗಳ ಅರ್ಥವನ್ನು ಹೇಳಿ?

ವಾ. ಸ — ಮೋಕ್ಷದಲ್ಲಿ ಆನಂದಾನುಭವಾದಿಗಳನ್ನು ಒಪ್ಪದಿದ್ದರೆ ಮೋಕ್ಷದಲ್ಲಿ ಆನಂದಾನುಭವಾದಿಗಳುಂಟು ಎಂದು ತಿಳಿಸುವ ' ಜಕ್ಷನ್ ಕ್ರೀಡನ್ ' ಇತ್ಯಾದಿ ಶ್ರುತಿಗಳಿಗೆ ವಿರೋಧವುಂಟಾಗುತ್ತದೆಂಬ ಶಂಕಾ ಮಾಡಿ

---

* ಜಕ್ಷನ್ ಕ್ರೀಡನ್ ಇತ್ಯಾದಿ ಶ್ರುತಿ ವಿರೋಧೋಽಸಂವೇದ್ಯತ್ವ ಇತಿ ಚೇನ್ನ ಸರ್ವಾತ್ಮೈಕತ್ವೇ ಯಥಾಪ್ರಾಪ್ತಾನುವಾದಿತ್ವಾತ್ ಮುಕ್ತಸ್ಯ ಸಂಸಾರಾತ್ಮಭಾವೇಸತಿ ಯತ್ರ ಕ್ವಚಿತ್ ಯೋಗಿಷು ದೇವೇಷು ಜಕ್ಷಣಾದಿ ಪ್ರಾಪ್ತಂ ತದ್ಯಥಾಪ್ರಾಪ್ತಮೇವಾನೂದ್ಯತೇ ತತ್ತಸ್ಯೈವ ಸರ್ವಾತ್ಮಭಾವಾದಿತಿ ಸರ್ವಾತ್ಮಭಾವಮೋಕ್ಷಸ್ತುತಯೇ ( ಬೃ. ಭಾ. ೩-೯-೨೮ )

ಕೊಂಡು ಶ್ರುತಿಗಳು ಮೋಕ್ಷದಲ್ಲಿ ಆನಂದಾನುಭವಾದಿಗಳನ್ನು ತಿಳಿಸಿ ಕೊಡುತ್ತವೆ ಆದರೂ ವಸ್ತುತಃ ಮೋಕ್ಷದಲ್ಲಿ ಆನಂದಾನುಭವಾದಿಗಳು ಇಲ್ಲದುದರಿಂದ ಸರ್ವಾತ್ಮತಾರೂಪವಾದ ಮೋಕ್ಷದ ಸ್ತೋತ್ರವನ್ನು ಮಾಡುವುದಕ್ಕಾಗಿ ಸಂಸಾರಾವಸ್ಥೆಯಲ್ಲಿ ಮಾಡುವ ಯೋಗಿ ಮತ್ತು ದೇವತೆಗಳ ಕ್ರೀಡಾದಿಗಳನ್ನು ಅನುವಾದ ಮಾಡುತ್ತವೆ ಎಂದು ಅರ್ಥವು

ಕೋರ್ಟು—ಹರಿಹರಶರ್ಮರೇ ! ವಾದಿಯನ್ನು ವಿಚಾರಿಸಿ ?

ಪ್ರ ವ.—ಬ್ರಹ್ಮಸೂತ್ರದ ಶಾಂಕರಭಾಷ್ಯದಲ್ಲಿರುವ ‘ ಅತ ಏವ ಜಕ್ಷಣಾದಿ ’ ಈ ವಾಕ್ಯದ ಅರ್ಥವನ್ನು ಹೇಳಿ

ವಾ ಸ —ರಕ್ಷಣ, ಇತ್ಯಾದಿ ಕರ್ಮಗಳು ಉಂಟಾಗುವುದಕ್ಕೆ ಎರಡನೆಯ ವಸ್ತು ಕಾರಣವಾಗಿರುವುದು ಮೋಕ್ಷದಲ್ಲಿ ಎರಡನೆಯ ವಸ್ತುವೇ ಇಲ್ಲದುದ ರಿಂದ ಮೋಕ್ಷದಲ್ಲ ಭಕ್ಷಣಾದಿಗಳನ್ನು ಹೇಳುವ ಜಕ್ಷನ್ನಿತ್ಯಾದಿ ಶ್ರುತಿಗಳಿಗೆ ದುಃಖವಿಲ್ಲವೆಂಬುದೇ ಅಭಿಪ್ರಾಯವು, ಭಕ್ಷಣ ಕ್ರೀಡಾದಿ ಉಂಟೆಂಬ ಅಭಿಪ್ರಾಯವಿಲ್ಲ ಎಂದು ಅರ್ಥವು

ಪ್ರ ವ —ಶಂಕರಾಚಾರ್ಯರು ಹೇಳಿದ ರೀತಿಯಲ್ಲಿ ಶ್ರುತಿಗಳು ಮೋಕ್ಷ ವನ್ನು ಸ್ತುತಿಸುವುದಕ್ಕಾಗಿ ಸಂಸಾರಾವಸ್ಥೆಯಲ್ಲಿರುವ ಯೋಗಿಯ ಕ್ರೀಡಾದಿಗಳನ್ನು ಅನುವಾದ ಮಾಡುತ್ತವೆ, ಮೋಕ್ಷದಲ್ಲಿ ಕ್ರೀಡಾದಿ ಗಳು ಇಲ್ಲ ಹೀಗೆಂದು ಅರ್ಥವನ್ನೇಕೆ ಹೇಳಕೂಡದು ?

ವಾ. ಸ —ಮೋಕ್ಷದಲ್ಲಿ ಕ್ರೀಡಾದಿಗಳುಂಟು ಎಂದು ಸ್ಪಷ್ಟವಾಗಿ ತಿಳಿಸುತ್ತಿರುವ ಶ್ರುತಿಗಳಿದ್ದರೂ ಆ ಸ್ಪಷ್ಟವಾದ ಅರ್ಥವನ್ನು ಬಿಟ್ಟು ಪೂರ್ವಕಾಲದ ಕ್ರೀಡಾದಿಗಳನ್ನು ಈ ಶ್ರುತಿಗಳು ಅನುವಾದಿಸುವುವು ಎಂದು ಹೇಳು ವುದಕ್ಕೆ ಯಾವ ಆಧಾರವೂ ಇಲ್ಲದುದರಿಂದ ಮೋಕ್ಷದಲ್ಲಿ ಕ್ರೀಡಾ, ಭಕ್ಷಣ, ಪಿತೃದರ್ಶನಾದಿಗಳು ವಾಸ್ತವಿಕವಾದುವುಗಳೇ ಆದುದರಿಂದ ಮೋಕ್ಷದಲ್ಲಿ ಗಂಧಾದಿಗಳ ಜ್ಞಾನವನ್ನು ಒಪ್ಪದಿರುವುದು ಪ್ರಮಾಣ ವಿರುದ್ಧವಾಗುವುದರಿಂದ ಅನಿಷ್ಟವಾಗುತ್ತದೆ, ಆದಕಾರಣ ಮೋಕ್ಷ ದಲ್ಲಿ ಗಂಧಾದಿ ಜ್ಞಾನಗಳು ಆವಶ್ಯಕವು, ಮತ್ತು ಅವುಗಳ ಕಾರಣ ಗಳನ್ನು ಆವಶ್ಯಕವಾಗಿ ಒಪ್ಪಿಕೊಳ್ಳಬೇಕಾಗುತ್ತದಾದುದರಿಂದ ಮೋ ಕ್ಷದಲ್ಲಿ ‘ ಸರ್ವಂ ಆತ್ಮೈವಾಭೂತ್ ’ ಆತ್ಮಸ್ವರೂಪವೇ, ಆತ್ಮಾತಿ ರಿಕ್ತವಾದುದಿಲ್ಲ ಎಂದು ಹೇಳುವುದು ಅತ್ಯಂತ ಅಯುಕ್ತವು

§ ಅತ ಏವ ಜಕ್ಷಣಾದಿಸಂಕೀರ್ತನಮಪಿ ದುಃಖಾಭಾವಮಾತ್ರಾಭಿಪ್ರಾಯಂ ಸ್ತುತ್ಯರ್ಥಂ ಆತ್ಮ ರತಿರಿತ್ಯಾದಿವತ್, ನ ಹಿ ಮುಖ್ಯಾನ್ಯೇವ, ರತಿಕ್ರೀಡಾಮಿಥುನಾನಿ ಆತ್ಮನಿ ನಿನಿತತ್ವಾನಿ ಶಕ್ಯಂತೇ ವರ್ಣ ಯಿತುಂ ದ್ವಿತೀಯವಿಷಯತ್ವಾತ್ತೇಷಾಮ್ ( ಬ್ರ. ಶಾ. ಭಾ. ೪-೪-೬ )

ಪ್ರ. ವ —'ಜಿಘ್ರೇತ್ ಪಶ್ಯೇತ್' ಇತ್ಯಾದಿ ವಿಧಿಲಿಂಗಂತ ಪ್ರಯೋಗಗಳಿಗೆ ನಿಮ್ಮ ಮತದಲ್ಲಿ ಸಾರ್ಥಕ್ಯವು ಹೇಗಾಗುತ್ತದೆ ?

ಪಾ. ಸ.—ಜಿಘ್ರೇತ್, ಪಶ್ಯೇತ್ ಇತ್ಯಾದಿ ವಿಧಿಲಿಂಗಂತ ಪದಗಳು ಯಾವುದರಿಂದ ಗಂಧವನ್ನು ಗ್ರಹಿಸುವನು, ನೋಡುವನು ಇಂಥ ಅನಿಷ್ಟ ( ಪ್ರಮಾಣ ವಿರುದ್ಧ ) ವಾದ ಗಂಧಾದಿಗಳ ಜ್ಞಾನಾಭಾವವನ್ನು ಒಪ್ಪಬೇಕಾದೀತೆಂದು ಆಪಾದನ ಮಾಡಿ ಅನಿಷ್ಟವಾದ ಗಂಧಾದಿ ಜ್ಞಾನಾಭಾವವನ್ನು ಒಪ್ಪುವ ಪ್ರಸಂಗವು ಬರಬಾರದೆಂದು ಆತ್ಮನಿಂದ ಭಿನ್ನವಾದ ವಸ್ತು ಅವಶ್ಯವಾಗಿ ಒಪ್ಪಬೇಕು ಇಂಥ ತರ್ಕರೂಪವಾದ ಅನುಮಾನವೆಂಬ ಪ್ರಮಾಣವನ್ನು ತಿಳಿಸಿ ಕೊಡುತ್ತದೆ

ಪ್ರ ವ —'ಯತ್ರ ಹಿ ದ್ವೈತಮಿವ ಭವತಿ' ಈ ವಾಕ್ಯವು ಏತಕ್ಕೆ ಪ್ರವೃತ್ತ ವಾಗಿದೆ?

ವಾ ಸ—ತಿಳಿಯುವ ಪುರುಷನಿಂದ ಬೇರೆಯಾದ ಪದಾರ್ಥವಿದ್ದರೆಯೇ ಒಂದು ಪದಾರ್ಥದಿಂದ ( ಜ್ಞಾನಕರಣದಿಂದ ) ಬೇರೊಂದು ಪದಾರ್ಥವನ್ನು ( ಜ್ಞೇಯವನ್ನು ) ತಿಳಿಯುವುದು ಇತ್ಯಾದಿ ಕೊಡುತ್ತದೆ. ಅದಕ್ಕಾಗಿ ಗಂಧಾದಿ ಜ್ಞಾನವಾಗುವುದಕ್ಕೆ ಆತ್ಮನಿಂದ ಬೇರೆಯಾದ ಇಂದ್ರಿಯಾದಿ ಕರಣಗಳು ಬೇಕು ಎಂದು ಹೇಳಿ, ಮೋಕ್ಷಾವಸ್ಥೆಯಲ್ಲಿ ಎರಡನೆಯ ವಸ್ತುವೇ ಇಲ್ಲದುದಾದರೆ ಗಂಧ ರೂಪ ಮೊದಲಾದವುಗಳ ಜ್ಞಾನವಾಗಲಾರದು ಎಂಬ ಅನಿಷ್ಟತೆಯನ್ನು ತಿಳಿಸಿ ಕೊಡುವುದಕ್ಕೋಸ್ಕರ ಗಂಧಾದಿ ಜ್ಞಾನಕ್ಕೆ ದ್ವಿತೀಯ ವಸ್ತುವು ಕಾರಣವು ಎಂಬುದನ್ನು ಹೇಳುವುದಕ್ಕಾಗಿ ಈ ವಾಕ್ಯವು ಪ್ರವೃತ್ತವಾಗಿದೆ

ವಾ ವ —( ಕೋರ್ಟಿಗೆ ) ಮೈ ಲಾರ್ಡ ! ' ಯತ್ರ ಹಿ ದ್ವೈತಮಿವ ಭವತಿ ' ಈ ವಾಕ್ಯವು ' ಇವ ' ಶಬ್ದದಿಂದ ಯುಕ್ತವಾಗಿರುವದರಿಂದ ದ್ವೈತ ಪ್ರಪಂಚಕ್ಕೆ ಪಾರಮಾರ್ಥಿಕ ಸತ್ಯತ್ವವನ್ನು ತಿಳಿಸಿ ಕೊಡುವದೆಂದು **ಶಂಕರಾಚಾರ್ಯರು, ಆನಂದಗಿರಿ ಟೀಕಾಕಾರರು** ಹಾಗೂ **ಸುರೇಶ್ವರಾಚಾರ್ಯ** ಈ ಮೂವರು ಒಪ್ಪಿರುವದರಿಂದ, ಈ ಶ್ರುತಿಯು ಜಗತ್ತಿನ ಮಿಥ್ಯಾತ್ವವನ್ನು ತಿಳಿಸುತ್ತದೆಂದು ಹೇಳುವದು ಅದ್ವೈತಿಗಳ ಹೇಳಿಕೆಗೆ ವಿರುದ್ಧವಾಗುತ್ತದೆ

( ೨ ) ' ಯತ್ರ ಹಿ ದ್ವೈತಮಿವ ಭವತಿ ' ಈ ವಾಕ್ಯವು ಜಗತ್ತಿನ ಸತ್ಯತ್ವವನ್ನು ತಿಳಿಸಿ ಕೊಡುತ್ತಿದ್ದರೂ ' ವಾಚಾರಂಭಣಂ ' ' ಏಕಮೇವಾದ್ವಿತೀಯಂ ' ' ಆತ್ಮೈವೇದಂ ಸರ್ವಂ ' ಈ ವಾಕ್ಯಗಳು ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಸುತ್ತವಾದುದರಿಂದ ಜಗತ್ತು ಮಿಥ್ಯೆಯೆಂದು ಹೇಳಬೇಕೆಂದು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ಹೇಳಿದ್ದು ಯುಕ್ತವಲ್ಲ. ಯಾಕೆಂದರೆ ' ವಾಚಾರಂಭಣಂ ' ' ಆತ್ಮೈವೇದಂ ಸರ್ವಂ ' ಈ ಶ್ರುತಿಗಳಲ್ಲಿ ಮಿಥ್ಯಾತ್ವವನ್ನು ತಿಳಿಸಿಕೊಡುವ ಪದವೇ ಇಲ್ಲವೆಂದು ಮೊದಲಿಗೇ ಹೇಳಿದ್ದೇವೆ ' ಏಕಮೇವಾದ್ವಿತೀಯಂ ' ಈ

ವಾಕ್ಯದಲ್ಲಿಯೂ ಜಗತ್ತಿಗೆ ಮಿಥ್ಯಾತ್ವವನ್ನು ತಿಳಿಸುವ ಪದವಿಲ್ಲ ಮತ್ತು ಜಗತ್ತು ಮಿಥ್ಯೆಯೆಂದು ಈ ಉಪನಿಷತ್ತಿನ ಭಾಷ್ಯದಲ್ಲಿ ಶಂಕರಾಚಾರ್ಯರು ಈ ಶ್ರುತಿಗೆ ಅರ್ಥವನ್ನು ಹೇಳಿಲ್ಲ 'ಏಕಮೇವ' = ಸೃಷ್ಟಿಯ ಪೂರ್ವದಲ್ಲಿ ಪರಮಾತ್ಮನಿಂದ ಹುಟ್ಟಿಸಿದ ಯಾವ ವಸ್ತುವು ಇದ್ದಿಲ್ಲ ಹೀಗೆ ಈ ಶ್ರುತಿಯ ಅರ್ಥವನ್ನು ಶಂಕರಾಚಾರ್ಯರು ಮಾಡಿದ್ದಾರಾದುದರಿಂದ ಜಗತ್ತಿಗೆ ಮಿಥ್ಯಾತ್ವವು ಈ ವಾಕ್ಯದಿಂದ ಹೇಳುವದರಲ್ಲಿ ಬರುವದಿಲ್ಲ.

'ಯತ್ರ ವಾ ಅಸ್ಯ ಸರ್ವಂ ಆತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ ..ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ವಿಜ್ಞಾತಾರಮರೆ ಕೇನ ವಿಜಾನೀಯಾತ್' ಈ ವಾಕ್ಯವು ಜೀವೇಶ್ವರರ ಭೇದವನ್ನು ಸ್ವರಸತ ತಿಳಿಸಿಕೊಡುತ್ತದೆಂದು ಬ್ರಹ್ಮವಿದ್ಯಾಭರಣಕಾರರು ಹಾಗೂ ಅಪ್ಪಯ್ಯ ದೀಕ್ಷಿತರು ತಮ್ಮ ಗ್ರಂಥದಲ್ಲಿ ಹೇಳಿದ್ದಾರೆ ಶಂಕರಾಚಾರ್ಯರು 'ವಿಜ್ಞಾತಾರಂ' ಈ ಪದವು ಮೋಕ್ಷದಲ್ಲಿಯೂ ಜ್ಞಾನಕರ್ತೃತ್ವವನ್ನು ಪ್ರತಿಪಾದಿಸುತ್ತದೆಂದು ಹೇಳಿ ತಮ್ಮ ಮತದ ಅಭಿಮಾನದಿಂದ ಸಂಸಾರಕಾಲೀನ ಕರ್ತೃತ್ವವನ್ನು ಹೇಳುತ್ತದೆಂದು ಹೇಳುತ್ತಾರೆ 'ಯೇನೇದಂ' ಈ ವಾಕ್ಯವು ಸ್ವರಸತ ಭೇದವನ್ನು ತಿಳಿಸುತ್ತಿದ್ದರೂ ನಾವು (ಅದ್ವೈತಿಗಳು) ಹೇಳುವ ಅರ್ಥವು ಅಸ್ವರಸವಾದರೂ ಮತ್ತು ನಮ್ಮ ವಾಕ್ಯಯೋಜನೆಯು ಕ್ಲೇಶಕರವಾದರೂ ಅಭೇದಸಿದ್ಧಿಯಗೋಸ್ಕರ ಸ್ವರಸತ ಪ್ರಾಪ್ತವಾದ ಅರ್ಥವನ್ನು ಬಿಟ್ಟು ಅಸ್ವರಸವಾದ ಅರ್ಥವನ್ನು ಸ್ವೀಕರಿಸಲೇಬೇಕು, ಯೋಜನಾ ಕ್ಲೇಶವನ್ನಾದರೂ ಸಹನ ಮಾಡಬೇಕೆಂದು ಅದ್ವೈತಿಗಳು ಒಪ್ಪಿರುವುದರಿಂದ ಈ ವಾಕ್ಯವು ಜಗತ್ತಿಗೆ ಮಿಥ್ಯಾತ್ವವನ್ನು ಅಥವಾ ಜೀವೇಶ್ವರರ ಐಕ್ಯವನ್ನು ತಿಳಿಸಿ ಕೊಡುವದಿಲ್ಲ

(೩) ಜಗತ್ತು ಪ್ರಮಾಣಗಳಿಂದ ಉಪಲಬ್ಧವಾಗುತ್ತಿದ್ದರೂ ಜಗತ್ತು ಇಲ್ಲೆಂದು ನಿರೂಪಣ ಮಾಡುವದು ಅಯುಕ್ತವೆಂಬ ದೂಷಣವು ಜಗತ್ತು ಶೂನ್ಯದಿಂದ ಬೇರೆ ಇಲ್ಲೆಂದು ಹೇಳುವ ಬೌದ್ಧ ಮತದಮೇಲೆ ಸ್ಪಷ್ಟವಿರುವದರಿಂದ ಸೂತ್ರಕಾರರು ಜಗತ್ತು ಇಲ್ಲೆಂದು ಹೇಳುವ ಬೌದ್ಧರ ಮತವನ್ನು ಖಂಡನೆ ಮಾಡಲಿಲ್ಲ. ಹೀಗೆ ಶಂಕರಾಚಾರ್ಯರು ಹೇಳಿ ಪುನಃ ತಾವೇ ಜಗತ್ತು ಇಲ್ಲೆಂದು ಹೇಳುವದು ಸ್ವವ್ಯಾಘಾತವಾಗುವದು

(೪) ಎರಡನೇ ವಸ್ತುವು ಇದ್ದರೆ ಯಾವನೊಬ್ಬ ಪುರುಷನು ಎರಡನೇ ಕರಣಗಳಿಂದ ಎರಡನೇ ವಸ್ತುವನ್ನು ನೋಡುವನು ? ಎಂದು ಈ ಶ್ರುತಿಯು ಹೇಳುವದು ಕೂಡೀತು ಅದ್ವೈತ ಮತಾನುಸಾರವಾಗಿ ಜ್ಞಾನಾ (ಆತ್ಮಾ) ತಿರಿಕ್ತವಾದ ಒಂದಾದರೂ ವಸ್ತುವೇ ಇಲ್ಲವೆಂದು ತಿಳಿದರೆ ಯಾವ ಇಂದ್ರಿಯದಿಂದ ಯಾವ ರೂಪಾದಿಗಳನ್ನು ನೋಡಿಯಾನು, ಯಾವ ಪರಮಾತ್ಮನಿಂದ ಜೀವನು ಸಮಸ್ತವನ್ನು ತಿಳಿಯುವನೋ, ಆ ಪರಮಾತ್ಮನನ್ನು ಹೇಗೆ ತಿಳಿದಾನು ? ಸ್ವತಃ ತನ್ನನ್ನು ಹೇಗೆ ತಿಳಿದಾನು? ಆದುದರಿಂದ ಮೋಕ್ಷಾವಸ್ಥೆಯಲ್ಲಿ ತನ್ನ ಜ್ಞಾನ ಪರಮಾತ್ಮನ ಜ್ಞಾನ, ಗಂಧಾದಿವಿಷಯಕ ಜ್ಞಾನ ಇವೆಲ್ಲವು ಅವಶ್ಯಕವಿರುವ

ಹೆಂದು 'ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿ ಶ್ರುತಿಗಳಲ್ಲಿ ಹೇಳಿದೆ ಆದು ದರಿಂದ ಮೋಕ್ಷದಶೆಯಲ್ಲಿ ಸರ್ವವು ಆತ್ಮರೂಪವೆ (ಆತ್ಮಾತಿರಿಕ್ತ ವಸ್ತುವೇ ಇಲ್ಲ) ಎಂದು ಹೇಳಕೂಡದು ಈ ಪ್ರಕಾರವಾಗಿ ಈ ಶ್ರುತಿಯು ಮೋಕ್ಷದಶೆಯಲ್ಲಿ ಜಕ್ಷತ್ಕ್ರೀಡಿರಮಾದಿ ಪ್ರಪಂಚವು ಇರುವದೆಂದು ತಿಳಿಸಿ ಕೊಡುತ್ತದೆ ಇದನ್ನು ಕೋರ್ಟಿನವರು ಲಕ್ಷ್ಯದಲ್ಲಿಡಬೇಕೆಂದು ಪ್ರಾರ್ಥನೆಯಿರುತ್ತದೆ,

---

## ನೇತಿ ನೇತಿ ಎಂಬ ಶ್ರುತಿಯ ವಿಚಾರಣೆ.

ಪ್ರ ವ.— ಶಾಸ್ತ್ರಿಗಳೆ! ಜಗತ್ತು ಮಿಥ್ಯಾ ಎಂಬ ವಿಷಯದಲ್ಲಿ ಮತ್ತೂ ಏನಾದರೂ ಆಧಾರಗಳಿದ್ದರೆ ಹೇಳಿ?

ಪ್ರ ಸಾ.— "ಅಥಾತ ಆದೇಶೋ ನೇತಿ ನೇತಿ ನಹ್ಯೇತಸ್ಮಾತ್ ಇತಿ ನೇತ್ಯನ್ಯತ್ಪರಮಸ್ತಿ" (ಬೃ ೨-೩-೬) ಎಂಬ ವಾಕ್ಯವುಂಟು

ಪ್ರ ವ— ಇದರ ಅರ್ಥವೇನು?

ಪ್ರ ಸಾ.— ಅಥ=ಮೂರ್ತಾಮೂರ್ತ ಪದಾರ್ಥ ನಿರೂಪಣಾನಂತರ, ಅತಃ=ಮೂರ್ತಾಮೂರ್ತ ಪದಾರ್ಥ ನಿರೂಪಣ ಮಾಡಿದ ಪ್ರಯುಕ್ತ, ಆದೇಶಃ=ಸತ್ಯ ಪದಾರ್ಥಗಳಲ್ಲಿ ಸತ್ಯವಾದ ಪರಮಾತ್ಮನ 'ನೇತಿ ನೇತಿ' ಎಂಬ ಉಪದೇಶ (ಉಂಟು), ಇತಿ=ಪೂರ್ವದಲ್ಲಿ ಪ್ರಸಕ್ತವಾದ ಮೂರ್ತವಾದ ಪೃಥ್ವಿ, ಜಲ, ತೇಜ, ಈ ಪದಾರ್ಥಗಳು, ನ=ಅಲ್ಲ, ಇತಿ=ಪೂರ್ವಪ್ರಸಕ್ತವಾದ ಅಮೂರ್ತವಾದ ವಾಯು, ಆಕಾಶಗಳು ನ=ಅಲ್ಲ ಇತಿ=ಮೂರ್ತಾಮೂರ್ತಾತ್ಮಕ ಪಂಚಭೂತಗಳು, ನ=ಅಲ್ಲ, ಇತಿ=ವಾಸನಾರೂಪನು, ನ=ಅಲ್ಲ, ಎಂದು ಉಪದೇಶವು

'ಇತಿ ನ ಇತಿ ನ' ಈ ನಿಷೇಧರೂಪದಿಂದ ಪರಮಾತ್ಮನ ಉಪದೇಶವನ್ನು ಏಕೆ ಮಾಡಬೇಕು? ಬೇರೆ ರೀತಿಯಿಂದೇಕೆ ಮಾಡಕೂಡದು? ಎಂಬ ಶಂಕೆ ಬರಲು— 'ಪಾಠಕ' ಎಂಬೀ ಶಬ್ದವನ್ನು ಯಾವನಾದರೊಬ್ಬನ ಉದ್ದೇಶದಿಂದ ವ್ಯವಹಾರ ಮಾಡಬೇಕಾಗಿರಲು ಅವನಲ್ಲಿ ಪಾಠನ (ಪಾಠ ಹೇಳುವ) ಕ್ರಿಯೆ ಇರಬೇಕು, ಶ್ಯಾಮ' ಎಂಬೀ ಶಬ್ದವನ್ನು ಯಾವನಾದರೊಬ್ಬನ ಉದ್ದೇಶವಾಗಿ ವ್ಯವಹಾರ ಮಾಡಬೇಕಾಗಿದ್ದರೆ ಆ ಮನುಷ್ಯನಲ್ಲಿ ಶ್ಯಾಮವರ್ಣವು ಇರಬೇಕು. ಯಾವನಾದರೊಬ್ಬ ಮನುಷ್ಯನನ್ನು ದಂಡಿ ಎಂದು ಹೇಳಬೇಕಾದಲ್ಲಿ ಅವನಲ್ಲಿ ದಂಡರೂಪ ದ್ರವ್ಯವು ಇರಬೇಕಾಗುತ್ತದೆ, ಇದೇ ಪ್ರಕಾರವಾಗಿ ಯಾವುದಾದರೊಂದು ಶಬ್ದದ ವ್ಯವಹಾರವನ್ನು ಯಾವನಾದರೊಬ್ಬ ಮನುಷ್ಯನನ್ನು ಕುರಿತು ಮಾಡಬೇಕಾಗಿರುವಲ್ಲಿ ಆ ಮನುಷ್ಯನಲ್ಲಿ ಯಾವುದಾದರೊಂದು ಧರ್ಮದ ಆವಶ್ಯಕತೆ ಇರುತ್ತದೆ ಹೀಗಿರುವುದರಿಂದ ಯಾವುದಾದರೊಂದು ಶಬ್ದದಿಂದ ಬ್ರಹ್ಮ

ನನ್ನು ಹೇಳಬೇಕಾಗಿದ್ದರೆ ಬ್ರಹ್ಮನಲ್ಲಿ ಯಾವುದಾದರೊಂದು ಧರ್ಮವು ಇರಬೇಕಾದುದು. ಬ್ರಹ್ಮನಲ್ಲಿ ಯಾವುದೂ* ಧರ್ಮವಿಲ್ಲದುದರಿಂದ ಯಾವ ಶಬ್ದದಿಂದಲೂ ಬ್ರಹ್ಮನಿರೂಪಣ ಮಾಡುವುದು ಶಕ್ಯವಿಲ್ಲ ಆದುದರಿಂದ 'ನಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತಿ,' 'ಇತಿ ನೇತಿ ಏತಸ್ಮಾತ್' ಇತಿ ನೇತಿ ಹೀಗೆ ನಿಷೇಧ ಮಾಡುವ ಶಬ್ದವನ್ನು ಬಿಟ್ಟು 'ಅನ್ಯತ್ ಪರಂ ನಾಸ್ತಿ' ಪರಮಾತ್ಮನನ್ನು ಬೋಧಿಸುವ ಬೇರೆ ಶಬ್ದವಿಲ್ಲ ಎಂದು ಅರ್ಥವು

ಪ್ರ ವ —ಇದರಿಂದ ಏನು ಸಿದ್ಧಿಸುತ್ತದೆ ?

ಪ್ರ ಸಾ —ಬ್ರಹ್ಮನೊಬ್ಬನೇ ಸತ್ಯ, ಬ್ರಹ್ಮನಿಂದ ಬೇರೆಯಾದ ಮೂರ್ತಾಮೂರ್ತಾತ್ಮಕ ಸಮಸ್ತ ಜಗತ್ತು ಮಿಥ್ಯಾ ಎಂದು ಸಿದ್ಧವಾಗುತ್ತದೆ.

---

## ಕ್ರಾಸ ಎಕ್ಸಾಮಿನೇಶನ್.

ವಾ ವ.— ಶಾಸ್ತ್ರಿಗಳೇ ! 'ಅಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ' ಈ ವಾಕ್ಯದ ಅರ್ಥವನ್ನು ಹೇಳಿ ?

ಪ್ರ ಸಾ —ಸತ್ಯಭೂತವಾದ ಪ್ರಾಣಾದಿಗಳಲ್ಲಿ ಸತ್ಯವಾಗಿರುವ ಪರಮಾತ್ಮನಿಗೆ 'ಸತ್ಯಸ್ಯ ಸತ್ಯಂ' ಎಂದು ಹೆಸರು (ಉಪದೇಶ) ಉಂಟು ಎಂದು ಅರ್ಥವು.

ವಾ ವ —ಶಾಸ್ತ್ರಿಗಳೇ ! 'ಇತಿ ನ ಇತಿ ನ' ಈ ಉಪದೇಶದಿಂದ ಬೇರೆಯಾಗಿರುವ 'ಸತ್ಯಸ್ಯಸತ್ಯಂ' ಈ ಹೆಸರು (ಉಪದೇಶ) ಇರಲು 'ನಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತಿ' ಈ ಪೂರ್ವ ವಾಕ್ಯಗಳು 'ಇತಿ ನ ಇತಿ ನ' ಈ ಆದೇಶದಿಂದ ಬೇರೆಯಾದ ಬ್ರಹ್ಮನ ಆದೇಶವಿಲ್ಲವೆಂದು ಹೇಗೆ ಹೇಳಿದುವು ?

ಪ್ರ, ಸಾ —'ಸತ್ಯಸ್ಯ ಸತ್ಯಂ' ಈ ಹೆಸರು ಮಿಥ್ಯಾ (ಸುಳ್ಳು) ಆಗಿರುವ ಸಗುಣ ಬ್ರಹ್ಮನನ್ನು ತಿಳಿಸುವುದು 'ಇತಿ ನ ಇತಿ ನ' ಈ ಹೆಸರು ಸತ್ಯವಾದ ಬ್ರಹ್ಮನನ್ನು ತಿಳಿಸುವುದು 'ಇತಿ ನ ಇತಿ ನ' ಈ ಉಪದೇಶದಿಂದ ಬೇರೆಯಾದ ಉಪದೇಶವು ಸತ್ಯವಾದ ಬ್ರಹ್ಮನನ್ನು ತಿಳಿಸುವುದಿಲ್ಲ ಎಂದು ಹೇಳಲು ಬಾಧಕವಿಲ್ಲ

ವಾ. ವ —'ಅಥಾತ ಆದೇಶೋ ನೇತಿ ನೇತಿ' ಈ ವಾಕ್ಯದಿಂದ ಸತ್ಯಭೂತವಾದ ಬ್ರಹ್ಮವು ತಿಳಿದು ಬರುತ್ತದೆ, 'ಅಥ ನಾಮಧೇಯಂ' ಈ ವಾಕ್ಯದಿಂದ ಸಗುಣಭೂತವಾದ ಮಿಥ್ಯಾ ಬ್ರಹ್ಮವು ತಿಳಿದು ಬರುತ್ತದೆಂದು ಹೇಳುವುದಕ್ಕೆ ಆ ವಾಕ್ಯದಲ್ಲಿ ಏನಾದರೂ ಜ್ಞಾಪಕವುಂಟೋ ?

ಪ್ರ. ಸಾ —ಉತ್ತರವಿಲ್ಲ.

---

* ಯಸ್ಮಿನ್ ನ ಕಶ್ಚಿದ್ವಿಶೇಷೋಽಸ್ತಿ ನಾಮ ವಾ ರೂಪಂ ವಾ ಕರ್ಮ ವಾ ಭೇದೋ ವಾ ಜಾತಿರ್ವಾ ಗುಣೋ ವಾ ತದ್ದ್ವಾರೇಣ ಹಿ ಶಬ್ದಪ್ರವೃತ್ತಿರ್ಭವತಿ ನ ತೇಷಾಂ ಕಶ್ಚಿದ್ವಿಶೇಷೋ ಬ್ರಹ್ಮಣ್ಯಸ್ತಿ ಅತೋ ನ ನಿರ್ದೇಷ್ಟುಂ ಶಕ್ಯತೇ ಇದಂ ತದಿತಿ (ಬೃ. ಉ. ಶಾಂ. ಭಾ. ೨-೩-೬).

ವಾ ವ —ಶಾಸ್ತ್ರಿಗಳೆ ! ' ಘಟಃ ಪಟೋ ನ ' ಹೀಗೆಂದು ಹೇಳಿದರೆ ಏನು ಅರ್ಥವಾಗುತ್ತದೆ ?

ಪ್ರ. ಸಾ –ಘಟವು ಪಟವಲ್ಲ, ಘಟವು ಬೇರೆ, ಪಟವು ಬೇರೆ ಎಂದು ಅರ್ಥವಾಗುತ್ತದೆ

ವಾ. ವ.—'ಘಟಃ ಪಟೋನ' ಈ ವಾಕ್ಯದಿಂದ ಘಟವು ಪಟರೂಪವಲ್ಲವೆಂದು ಸಿದ್ಧವಾಗುತ್ತದೆಯೋ, ಇಲ್ಲವೆ ಪಟವೇ ಇಲ್ಲವೆಂದು ಸಿದ್ಧವಾಗುತ್ತದೆಯೋ?

ಪ್ರ ಸಾ —ಘಟವು ಪಟರೂಪವಲ್ಲವೆಂದೇ ಸಿದ್ಧಿಸುತ್ತದೆ. ಪಟವೇ ಇಲ್ಲವೆಂದು ಸಿದ್ಧವಾಗುವುದಿಲ್ಲ

ವಾ ವ — ನೇತಿ ನೇತಿ ಈ ವಾಕ್ಯದ ಅರ್ಥವೇನು ?

ಪ್ರ. ಸಾ —ಬ್ರಹ್ಮ, ಇತಿ ನ=ಪೂರ್ವಪ್ರಸಕ್ತವಾದ ಮೂರ್ತ ಪದಾರ್ಥರೂಪವಲ್ಲ, ಇತಿನ=ಪೂರ್ವಪ್ರಸಕ್ತವಾದ ಅಮೂರ್ತ ಪದಾರ್ಥರೂಪವಲ್ಲ ಈ ಕಾರಣದಿಂದ 'ನೇತಿ ನೇತಿ' ಈ ಶಬ್ದದಿಂದ ಬ್ರಹ್ಮನು ತಿಳಿದು ಬರುವನು. ಅಥವಾ ಯಾವಯಾವ ಪದಾರ್ಥಗಳನ್ನು ನಾವು ನೋಡುತ್ತೇವೆಯೋ ಆಯಾ ಪದಾರ್ಥರೂಪವಲ್ಲ ಹೀಗೆ ಬ್ರಹ್ಮನು ತಿಳಿಯಲ್ಪಡುತ್ತಾನೆ

ವಾ ವ —ಇದರಿಂದ ಏನು ಸಿದ್ಧಿಸುತ್ತದೆ ?

ಪ್ರ ಸಾ.—ಬ್ರಹ್ಮನು ಮೂರ್ತ=ಪೃಥ್ವಿ, ಜಲ, ತೇಜೋರೂಪವಲ್ಲ, ಅಮೂರ್ತ=ವಾಯು ಆಕಾಶರೂಪವಲ್ಲ, ಅಥವಾ ಲೋಕದಲ್ಲಿ ಯಾವ ಯಾವ ಪದಾರ್ಥವು ಕಾಣಿಸುತ್ತದೆಯೋ ಆಯಾ ಪದಾರ್ಥರೂಪವಲ್ಲ.

ವಾ. ವ —ಘಟವು ಪಟರೂಪವಲ್ಲವೆಂದರೆ ಘಟವು ಪಟದಿಂದ ಬೇರೆಯಾದುದು ಎಂದು ಭೇದವೆ ಸಿದ್ಧಿಸುತ್ತದೆ ಹೊರತು ಪಟವಿಲ್ಲವೆಂದು ಸಿದ್ಧಿಸದು ಹಾಗೆಯೇ ಬ್ರಹ್ಮನು ಮೂರ್ತಾಮೂರ್ತಾತ್ಮಕ ಪ್ರಪಂಚರೂಪವಲ್ಲ ಎಂದು ಹೇಳಿದರೆ ಬ್ರಹ್ಮನಿಗೂ ಮೂರ್ತಾಮೂರ್ತಾತ್ಮಕ ಪ್ರಪಂಚಕ್ಕೂ ಭೇದವೇ ಸಿದ್ಧವಾಗುತ್ತದೆ ಹೊರತು ಮೂರ್ತಾಮೂರ್ತಾತ್ಮಕ ಪ್ರಪಂಚವೇ ಇಲ್ಲವೆಂದು ಸಿದ್ಧಿಸದು. ಹೀಗಿರುವುದರಿಂದ ಈ ಶ್ರುತಿಯು ಪ್ರಪಂಚ ಮಿಥ್ಯಾತ್ವವನ್ನು ತಿಳಿಸಿ ಕೊಡುತ್ತದೆಂದು ಹೇಗೆ ಹೇಳಿದಿರಿ ?

ಪ್ರ. ಸಾ. —ಉತ್ತರವಿಲ್ಲ

ವಾ ವ —ಶಾಸ್ತ್ರಿಗಳೆ ! ಈ ವಾಕ್ಯವು ಯಾವ ಗ್ರಂಥದಲ್ಲಿದೆ ?

ಪ್ರ ಸಾ.—ಇದು ಈ ( ಬೃಹದಾರಣ್ಯ ) ಉಪನಿಷತ್ತಿನ ಶಾಂಕರಭಾಷ್ಯದಲ್ಲಿದೆ.

ವಾ. ವ —ಈ ವಾಕ್ಯದ † ಅರ್ಥವೇನು ?

ಪ್ರ ಸಾ —ಬ್ರಹ್ಮನಲ್ಲಿ ನಾಮ, ರೂಪ, ಕರ್ಮ, ಭೇದ, ಜಾತಿ, ಗುಣ ಈ ಯಾವ ವಿಶೇಷವು ಇಲ್ಲದುದರಿಂದ ಬ್ರಹ್ಮನು ಶ್ಯಾಮ, ಕರ್ತಾ, ಇತ್ಯಾದಿ ಶಬ್ದಗಳಿಂದ ತಿಳಿದು ಬರುವವನಲ್ಲ ಎಂದು ಅರ್ಥವು.

---

† ಯಸ್ಮಿನ್ ನ ಕಶ್ಚಿದ್ವಿಶೇಷೋಽಸ್ತಿ ನಾಮ ವಾ ರೂಪಂ ವಾ ಕರ್ಮ ವಾ ಭೇದೋ ವಾ ಜಾತಿರ್ವಾ ಗುಣೋ ವಾ ತದ್ದ್ವಾರೇಣ ಹಿ ಶಬ್ದಪ್ರವೃತ್ತಿರ್ಭವತಿ ನ ಚೈಷಾಂ ಕಶ್ಚಿದ್ವಿಶೇಷೋ ಬ್ರಹ್ಮಣ್ಯಸ್ತಿ ಅತೋ ನ ನಿರ್ದೇಷ್ಟುಂ ಶಕ್ಯತೇ ಇದಂ ತದಿತಿ ( ಬೃ. ಉ. ಶಾಂ ಭಾ ೨-೩-೬ )

ವಾ ವ.—' ಘಟಃ ಘಟೋನ ' ಘಟವು ಘಟವಲ್ಲವೆಂದು ಹೇಳಬಹುದೆ ?

ಪ್ರ ಸಾ —ಘಟದಲ್ಲಿ ಘಟಭೇದವಿಲ್ಲದುದರಿಂದ ' ಘಟಃ ಘಟೋನ ' = ಘಟವು ಘಟವಲ್ಲವೆಂದು ಹೇಳಕೂಡದು

ವಾ ವ.—ಬ್ರಹ್ಮನಲ್ಲಿ ಮೂರ್ತಾಮೂರ್ತ ಪ್ರಪಂಚದ ಭೇದವು ಮತ್ತು ವಾಸನಾದ ಭೇದವೂ ಉಂಟೆ ? .

ಪ್ರ. ಸಾ —ಬ್ರಹನಲ್ಲಿ ಯಾವ ಭೇದವೂ ಇಲ್ಲವೆಂದು ನಮ್ಮ ಶಂಕರಾಚಾರ್ಯರು ಭಾಷ್ಯದಲ್ಲಿ ಹೇಳಿರುವುದರಿಂದ ಮೂರ್ತಾಮೂರ್ತ ಪ್ರಪಂಚಭೇದವೂ, ವಾಸನಾಭೇದವೂ ಇಲ್ಲ.

ವಾ. ವ.— ಘಟದಲ್ಲಿ ಘಟ ಭೇದವು ಇಲ್ಲದುದರಿಂದ ' ಘಟಃ ಘಟೋನ ' ಎಂದು ಹೇಗೆ ಹೇಳಲು ಬರುವುದಿಲ್ಲವೋ ಹಾಗೆಯೇ ಬ್ರಹ್ಮನಲ್ಲಿ ಮೂರ್ತಾಮೂರ್ತ ಭೇದವು ಇಲ್ಲದುದರಿಂದ ' ಬ್ರಹ್ಮ ಮೂರ್ತಂ ನ ಅಮೂರ್ತಂ ನ ' ಹೀಗೆ ಮೂರ್ತಾಮೂರ್ತದ ಭೇದವನ್ನು ಹೇಳುವುದು ಹೇಗೆ ಕೂಡೀತು ?

ಪ್ರ. ಸಾ.— ನೀವು ವಿಚಾರಿಸಿದುದರಿಂದ ಬ್ರಹ್ಮವು ಮೂರ್ತರೂಪವಲ್ಲ ಅಮೂರ್ತರೂಪವು ಅಲ್ಲವೆಂದು ನಾವು ಹೇಳಿದೆವು. ವಾಸ್ತವಿಕವಾಗಿ ನಮ್ಮ ಬ್ರಹ್ಮವು ಯಾವ ಶಬ್ದದಿಂದಲೂ ಗಮ್ಯನು ( ತಿಳಿದು ಬರುವವನು ) ಅಲ್ಲ ಬ್ರಹ್ಮನ ವಿಷಯವಾಗಿ ಪ್ರಶ್ನೆ ಮಾಡಿದರೆ ನಮ್ಮಂಥ ಜ್ಞಾನಿಗಳು ಉತ್ತರವನ್ನು ಕೊಡದೆ ( ತೂಷ್ಣೀಂ ) ಸುಮ್ಮನಿರಬೇಕು

ವಾ. ವ —ಇದನ್ನು ನೀವೇ ಹೇಳುತ್ತೀರಿಯೋ, ಇಲ್ಲವೆ ಯಾರಾದರೂ ನಿಮ್ಮ ಆಚಾರ್ಯರು ಹೇಳಿದ್ದಾರೆಯೋ ?

ಪ್ರ ಸಾ.—ಯಾರಾದರೂ ಏಕೆ ? ನಮ್ಮ ಶಂಕರಾಚಾರ್ಯರೇ ಬ್ರಹ್ಮನು ಯಾವ ಶಬ್ದದಿಂದಲೂ ಹೇಳಿಸಿಕೊಳ್ಳುವವನಲ್ಲ, ಬ್ರಹ್ಮ ವಿಷಯವಾಗಿ ಪ್ರಶ್ನ ಮಾಡಿದರೆ ( ತೂಷ್ಣೀಂ ) ಉತ್ತರವನ್ನೀಯದೆ ಸುಮ್ಮನೆ ಇರಬೇಕು ಎಂದು ಹೇಳಿದ್ದಾರೆ.

ವಾ. ವ —ಯಾವ ಗ್ರಂಥದಲ್ಲಿ ಹೇಳಿದ್ದಾರೆ

ಪ್ರ ಸಾ —೩-೨-೧೭ ಈ ಬ್ರಹ್ಮಸೂತ್ರದ ಭಾಷ್ಯದಲ್ಲಿ ಹೇಳಿದ್ದಾರೆ.

ವಾ. ವ.—ಆ ವಾಕ್ಯದ * ಅರ್ಥವನ್ನು ಹೇಳಿ ?

ಪ್ರ. ಸಾ.—ಬ್ರಹ್ಮನನ್ನು ಹೇಳಿ ಕೊಡಿ ಎಂದು ಬಾಷ್ಕಲಿಯೆಂಬವನು ಬಾಧ್ವನನ್ನು ಕೇಳಲು ಅವನು ಸುಮ್ಮನೆ ( ಮಾತಾಡದೆ ) ಕುಳಿತನು ಮತ್ತು ಎರಡು ಮೂರು ಸಾರೆ ವಿಚಾರಿಸಲು ಬಾಧ್ವನು ಆ ಬ್ರಹ್ಮನಲ್ಲಿ ಯಾವ ಧರ್ಮವೂ ಇಲ್ಲವಾದುದರಿಂದ ಬ್ರಹ್ಮನ ವಿಷಯದ ಪ್ರಶ್ನೆಗೆ ತೂಷ್ಣೀ

---

* ಬಾಷ್ಕಲಿನಾ ಬಾಧ್ವಃ ಪೃಷ್ಟಃ ಸನ್ ಅವಚನೇನ ಬ್ರಹ್ಮ ಪ್ರೋವಾಚೇತಿ ಶ್ರೂಯತೇ । ಸ ಹೋವಾಚ ಅಧೀಹಿ ಭೋ ಇತಿ । ಸ ತೂಷ್ಣೀಂ ಬಭೂವ ತಂ ಹ ದ್ವಿತೀಯೇ ವಾ ತೃತೀಯೇ ವಾ ವಚನೇ ಉವಾಚ ಬ್ರೂಮಃ ಖಲು ತ್ವಂ ತು ನ ವಿಜಾನಾಸಿ ಉಪಶಾಂತೋಽಯಮಾತ್ಮೇತಿ ।

ಭಾವವೇ=ಉತ್ತರವನ್ನು ಕೊಡದೆ ಸುಮ್ಮನಿರುವುದೇ ಉತ್ತರವು ಎಂದು ಹೇಳಿದನೆಂದು ಅರ್ಥವು

ವಾ ವ — ಇದರಿಂದ ಏನು ಸಿದ್ಧವಾಗುತ್ತದೆ ?

ಪ್ರ ಸಾ — ಬ್ರಹ್ಮನ ವಿಷಯುವಾಗಿ ಯಾರಾದರೂ ಪ್ರಶ್ನೆ ಮಾಡಿದರೆ ಒಂದನ್ನೂ ಹೇಳದೆ ಸುಮ್ಮನೆ ( ತೂಷ್ಣೀಂ ) ಕುಳಿತಿರಬೇಕೆಂದು ಸಿದ್ಧವಾಗುತ್ತದೆ

ವಾ. ವ — ಪ್ರತಿವಾದಿಯು, ನಿಮ್ಮ ಬ್ರಹ್ಮವು ಇಲ್ಲವೇ ಇಲ್ಲ, ಆ ವಿಷಯದಲ್ಲಿ ಪ್ರಮಾಣವಿಲ್ಲ ಹೀಗೆಂದು ನಿಮ್ಮ ಮೇಲೆ ಆಕ್ಷೇಪತರಲು ನೀವು ಸುಮ್ಮನೆ ಕೂಡುವಿರಷ್ಟೆ ?

ಪ. ಸಾ — ವಕೀಲ ಸಾಹೇಬರೇ ! ಬ್ರಹ್ಮ ವಿಷಯುವಾಗಿ ಪ್ರಶ್ನೆ ಮಾಡಲು ಹೇಗೆ ತೂಷ್ಣೀ ಭಾವವೇ=ಸುಮ್ಮನೆ ಕುಳಿತಿರುವುದೇ ಉತ್ತರವಾಗಿದೆಯೋ ಹಾಗೆಯೇ ನಿಮ್ಮ ಪ್ರಶ್ನೆಗೂ ಕೂಡ ತೂಷ್ಣೀಭಾವವೇ ಉತ್ತರ ವಾಗಿದೆ ನಮ್ಮ ಪೂರ್ವಾಚಾರ್ಯರು ' ವಯಂ ಪರಬ್ರಹ್ಮಣಿ ನಿಷ್ಣಾತಾಃ ನ ಕಿಮಪಿ ಬ್ರೂಮ ' = ಪರಬ್ರಹ್ಮನಲ್ಲಿ ನಿಷ್ಣಾತರಾದುದರಿಂದ ಒಂದನ್ನೂ ಹೇಳುವುದಿಲ್ಲ ಎಂದು ಹೇಳಿದ್ದಾರೆ ನಮ್ಮ ಶಂಕರಾ ಚಾರ್ಯರುಗಳು ಕೂಡ " ದೃಢಧಿಯಸ್ತೂಷ್ಣೀಂ ಶಿಲಾವತ್‍ಸ್ಥಿತಾಃ " ( ಪ್ರಾಥಾನು ೧೩ )=ಪಂಡಿತರು ಬಂಡೆಗುಂಡಿನಹಾಗೆ ಸುಮ್ಮನೆ ಕುಳಿ ತಿರಬೇಕು ಮಾತಾಡಕೂಡದು ಎಂದು ಹೇಳಿದ್ದಾರಾದುದರಿಂದ ನಿಮ್ಮ ಪ್ರಶ್ನೆಗೆ ಉತ್ತರವನ್ನು ಹೇಳುವುದಿಲ್ಲ

ವಾ. ವ — ಶಾಸ್ತ್ರಿಗಳೇ ! " ಬ್ರಹ್ಮ ಸತ್ಯಂ ಜಗನ್ಮಿಥ್ಯಾ " ಹೀಗೆಂದು ನಿಮ್ಮ ಮತದಲ್ಲಿ ಸತ್ಯವಾದ ಬ್ರಹ್ಮನಂತೂ ಯಾವ ಶಬ್ದದಿಂದಲೂ ಪ್ರತಿ ಪಾದ್ಯನಲ್ಲ, ಜಗತ್ತಂತೂ ಮಿಥ್ಯೆಯಾದುದು, ವೇದಗಳಿಂದ ಪ್ರತಿ ಪಾದ್ಯವಾದ ಸತ್ಯ ವಸ್ತು ಇಲ್ಲದುದರಿಂದ ವೇದವು ಅಪ್ರಮಾಣ ಎಂದು ಹೇಳುತ್ತೀರಲ್ಲವೆ ?

ಪ್ರ. ಸಾ. — ನಮ್ಮ ಮತದಲ್ಲಿ ವೇದಾದಿ ಸಮಸ್ತ ಜಗತ್ತು ಮಿಥ್ಯಾ=ಬ್ರಹ್ಮನಲ್ಲಿ ಕಲ್ಪಿತವು ( ಭ್ರಮದಿಂದ ತಿಳಿದು ಬರುವುದು ) ವಾಸ್ತವವಲ್ಲ ಆದುದ ರಿಂದ ವೇದವೇ ಇಲ್ಲ ಎಂದಮೇಲೆ ವೇದ ಪ್ರಾಮಾಣ್ಯವು ಎಲ್ಲಿಂದ ಬಂದೀತು " ಚೋದ್ಯಂ ವಾ ಪರಿಹಾರೋ ವಾ ಕ್ರಿಯತಾಂ ದ್ವೈತ ಭಾಷಯಾ॥ ಅದ್ವೈತಭಾಷಯಾ ಚೋದ್ಯಂ ನಾಸ್ತಿ ನಾಸ್ತಿ ತದುತ್ತರಂ॥" ಈ ನಮ್ಮ ( ಅದ್ವೈತ ) ಮತಾನುಸಾರವಾಗಿ ನಿಮಗೆ ಸರಿಯಾದ ಶಂಕಾ ಸಮಾಧಾನವಾವುದೂ ಹೇಳಲು ಬರುವುದಿಲ್ಲ

ವಾ. ಪ — ಶಾಸ್ತ್ರಿಗಳೇ ! ಪ್ರತಿವಾದಿಗಳಕೂಡ ಶಂಕೆಯನ್ನೂ ಸಮಾಧಾನವನ್ನೂ ಮಾಡದೇ ಇರುವುದಾದರೆ ನಿಮ್ಮ ಮತದಲ್ಲಿ ಶಾಸ್ತ್ರವೇಕೆ ? ಶಾಸ್ತ್ರ ಇಲ್ಲ ವಾದರೆ ಶಿಷ್ಯರೇಕೆ ? ಸರ್ವ ಜಗತ್ತು ಮಿಥ್ಯಾ ಆದುದರಿಂದ ಸ್ವರ್ಗಾದಿ ಲೋಕಗಳ ಉದ್ದೇಶವಾಗಿ ವ್ರೀಹ್ಯಾದಿ ದ್ರವ್ಯಗಳಿಂದ ಯಜ್ಞಾದಿ ಕರ್ಮವು ಹೇಗೆ ಕೂಡೀತು ?

ಪ್ರ. ಸಾ—ವಕೀಲ ಸಾಹೇಬರೇ ! ನಮ್ಮ ಮತದಲ್ಲಿ ಶಾಸ್ತ್ರವಿಲ್ಲ, ಶಾಸ್ತಾ ಇಲ್ಲ, ಶಿಷ್ಯನಿಲ್ಲ, ಗುರುವಿಲ್ಲ, ಶಿಕ್ಷಾ ಇಲ್ಲ, ನೀವಿಲ್ಲ, ನಾವಿಲ್ಲ, ಬ್ರಾಹ್ಮಣಾದಿ ವರ್ಣವಿಲ್ಲ, ವರ್ಣಾಶ್ರಮಧರ್ಮವಿಲ್ಲ, ತಾಯಿ ಇಲ್ಲ, ತಂದೆ ಇಲ್ಲ, ದೇವತೆಗಳಿಲ್ಲ, ಸ್ವರ್ಗಾದಿ ಲೋಕಗಳಿಲ್ಲ, ವೇದವಿಲ್ಲ, ಯಜ್ಞವಿಲ್ಲ, ಗಂಗಾದಿ ತೀರ್ಥಗಳಿಲ್ಲ, ಮೀಮಾಂಸಕಾದಿ ಮತಗಳಿಲ್ಲ, ಅದ್ವೈತಮತ ವಿಲ್ಲ, ಪುಣ್ಯವಿಲ್ಲ, ಪಾಪವಿಲ್ಲ, ಸುಖವಿಲ್ಲ, ದುಃಖವಿಲ್ಲ, ಮಂತ್ರವಿಲ್ಲ, ಜಾತಿಭೇಧವಿಲ್ಲ, ಬಂಧುಗಳಿಲ್ಲ, ಮಿತ್ರರಿಲ್ಲ, ಬಂಧನವಿಲ್ಲ, ಮುಕ್ತಿ ಇಲ್ಲ ‡ ಈ ಎಲ್ಲ ಜಗತ್ತು ತುಚ್ಛವಾದುದು ( ಮೂರು ಕಾಲಗಳ ಲ್ಲಿಯೂ ಇಲ್ಲದುದು ) ಆದುದರಿಂದ ನಮ್ಮನ್ನು ಕುರಿತು ಅದು ಹೇಗೆ ಕೂಡೀತು ಎಂಬ ಪ್ರಶ್ನೆಯನ್ನೇ ಮಾಡಲು ಬರುವುದಿಲ್ಲ

ವಾ ವ—ಯಾವುದೂ ಇಲ್ಲವಾದರೆ ಶಾಸ್ತ್ರ ವಿಚಾರವು, ಯಜ್ಞ, ಸ್ನಾನ, ಸಂಧ್ಯಾದಿ ಕರ್ಮಗಳು ಇವುಗಳನ್ನು ಏಕೆ ಮಾಡುತ್ತೀರಿ ?

ಪ್ರ ಸಾ.—ಶಾಸ್ತ್ರವಿಚಾರ, ಯಜ್ಞ, ಯಾಗ, ಮುಂತಾದವುಗಳನ್ನು ಮಾಡುವವನು ಭ್ರಾಂತನೇಯೆ ಅಥವಾ ಅಜ್ಞನೇ ಹೌದು ! ಜ್ಞಾನಿಗಳು ಮಾಡರು ಭ್ರಮಿಷ್ಠರಾದವರು ಅಥವಾ ಅಜ್ಞಾನಿಗಳೇ ಶಾಸ್ತ್ರವಿಚಾರವನ್ನು ಯಜ್ಞಾದಿ ಕರ್ಮಗಳನ್ನು ಮಾಡಬೇಕು. ಜ್ಞಾನಿಗಳು ಕಲ್ಲಿನ ಹಾಗೆ ( ಗಪ್ಪಚಿಪ್ಪ ) ಸುಮ್ಮನೇ ಕುಳಿತಿರಬೇಕು ಎಂದು ನಮ್ಮ ಆಚಾ ರ್ಯರೇ ಹೇಳಿದ್ದಾರೆ

---

## ವಾದಿಯ ವಿಚಾರಣೆ

ಪ್ರ. ವ.—ಆಚಾರ್ಯರೆ ! ‘ ನೇತಿ ನೇತಿ ’ ಈ ಬೃಹದಾರಣ್ಯ ವಾಕ್ಯಕ್ಕೆ ನೀವು ಏನೆಂದು ಅರ್ಥವನ್ನು ಹೇಳುತ್ತೀರಿ ?

ವಾ. ಸ—ಪರಮಾತ್ಮನು ಪರತಂತ್ರವಾದ ಮೂರ್ತ ವಸ್ತುಗಳಿಂದ ಬೇರೆಯಾದ ವನು, ಮತ್ತು ಪರತಂತ್ರವಾದ ಅಮೂರ್ತಗಳಿಂದಲೂ ಬೇರೆಯಾದ ವನು, ಹೀಗೆಂದು ಪರಮಾತ್ಮನನ್ನೇ ಈ ವಾಕ್ಯವು ತಿಳಿಸುತ್ತದೆ. “ ನಹ್ಯೇತಸ್ಮಾದಿತಿ ನೇತ್ಯನ್ಯತ್ಪರಮಸ್ತಿ ” ಈ ಪರಮಾತ್ಮನಿಂದ ಬೇರೆ ಯಾದ ಉತ್ತಮ ವಸ್ತುವು ಯಾವುದೂ ಇಲ್ಲ, ಪರಮಾತ್ಮನೇ ಉತ್ತ ಮನು ಎಂದು ಅರ್ಥವು

‡ ನ ಶಾಸ್ತ್ರಂ ನ ಶಾಸ್ತಾ ನ ಶಿಷ್ಯೋ ನ ಶಿಕ್ಷಾ ನ ಚ ತ್ವಂ ನ ಚಾಹಂ ನ ಚಾಯಂ ಪ್ರಪಂಚಃ ನ ವರ್ಣಾ ನ ವರ್ಣಾಶ್ರಮಾಚಾರಧರ್ಮಾಃ . . ನ ಮಾತಾ ಪಿತಾ ವಾ ನ ದೇವಾ ನ ಲೋಕಾ ನ ವೇದಾ ನ ಯಜ್ಞಾ ನ ತೀರ್ಥಂ ಬ್ರುವಂತಿ . ... ನ ಮೀಮಾಂಸಕಾದೇರ್ಮತಂ ವಾ.. (ದಶಶ್ಲೋಕೀ) ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ ನ ಮಂತ್ರೋ . ನ ಮೇ ಜಾತಿಭೇದಃ ನ ಮುಕ್ತಿ ರ್ನ ಬಂಧಃ ! ( ನಿರ್ವಾಣಾಷ್ಟಕ ) ಘಟ್ಟಿತಾ ಏವ ನ ಪುರಗಂ ದೃಢಧಿಯಃ ತೂಷ್ಣೀಂ ಶಿಲಾವತ್ ಸ್ಥಿತಾಃ ( ಸ್ವಾರಾಜ್ಯ ಸಿದ್ಧಿ )

ಪ್ರ ವ —' ಅಥ ನಾಮಧೇಯಂ ಸತ್ಯಸ್ಯ ಸತ್ಯಂ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ ' ಈ ವಾಕ್ಯದ ಅರ್ಥವೇನು ?

ವಾ ಸ.—ಪ್ರಾಣವು ಸತ್ಯವಾದುದು, ಆ ಪ್ರಾಣಕ್ಕೆ ಸತ್ಯಂ = ಸತ್ಯತ್ವವನ್ನು ಕೊಡುವವನೆಂದು ಪರಮಾತ್ಮನಿಗೆ ' ಸತ್ಯಸ್ಯಸತ್ಯಂ ' ಎಂಬ ಹೆಸರುಂಟು ಎಂದು ಈ ವಾಕ್ಯದ ಅರ್ಥವು.

ಪ್ರ ವ —' ಸತ್ಯಸ್ಯಸತ್ಯಂ ' ಈ ವಾಕ್ಯಕ್ಕೆ ಸತ್ಯತ್ವಪ್ರದ ( ಸತ್ಯತ್ವವನ್ನು ಕೊಡುವವನು ) ಎಂದು ಹೇಗೆ ಅರ್ಥ ಮಾಡಿದಿರಿ ?

ವಾ. ಸ—' ಪ್ರಾಣಸ್ಯ ಪ್ರಾಣಂ ಚಕ್ಷುಷಶ್ಚಕ್ಷು ಇತ್ಯಾದಿ ವಾಕ್ಯಗಳಿಗೆ ಪ್ರಾಣಕ್ಕೆ ಚೇಷ್ಟಕತ್ವವನ್ನು ಕೊಡುವವನು ಮತ್ತು ಚಕ್ಷುರಾದಿಗಳಿಗೆ ದರ್ಶನಾದಿ ಶಕ್ತಿಯನ್ನು ಕೊಡುವವನು ಎಂದು ಶಂಕರಾಚಾರ್ಯರು ಹೇಗೆ ಅರ್ಥವನ್ನು ಮಾಡಿರುವರೋ ' ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ' ಈ ವಾಕ್ಯಕ್ಕೆ ನಿತ್ಯವಾದ ಪದಾರ್ಥಗಳಿಗೆ ನಿತ್ಯತ್ವವನ್ನು ಕೊಡುವವನು ಚೇತನ ಪದಾರ್ಥಗಳಿಗೆ ಚೈತನ್ಯವನ್ನು ಕೊಡುವವನು ಎಂದು ಹೇಗೆ ಅರ್ಥವುಂಟೋ ಹಾಗೆಯೇ ' ಸತ್ಯಸ್ಯ ಸತ್ಯಂ ' ಪ್ರಾಣರೂಪವಾದ ಸತ್ಯ ಪದಾರ್ಥಕ್ಕೆ ಸತ್ಯತ್ವವನ್ನು ಕೊಡುವವನು ಎಂದು ಅರ್ಥವು.

---

## ಅಧ್ಯಾಸ ( ಭ್ರಮ ) ದ ವಿಚಾರವು.

ಪ್ರ ವ.—ಬ್ರಾಹ್ಮಣಾದಿ ವರ್ಣ, ಯಜ್ಞ, ವೇದ, ದೇವತಾ, ಗಂಗಾದಿ ತೀರ್ಥಗಳು, ಸಮಸ್ತ ಕರ್ಮಗಳು ಮತ್ತು ಅವುಗಳ ಫಲ ಮುಂತಾದ ಎಲ್ಲ ಜಗತ್ತು ಮಿಥ್ಯೆಯಾದುದೋ ?

ಪ್ರ. ಸಾ.—ಮಿಥ್ಯೆಯಾದುದೇ

ಪ್ರ. ವ —ಮಿಥ್ಯಾ ಎಂದರೇನು ?

ಪ್ರ. ಸಾ.—ಹಗ್ಗದಲ್ಲಿ ಹಾವು, ಮುತ್ತಿನ ಸಿಂಪಿನಲ್ಲಿ ಬೆಳ್ಳಿ ಹೇಗೆ ಆರೋಪಿತವೋ ಎಂದರೆ ಭ್ರಮ ವಿಷಯವಾಗಿದೆಯೋ ಹಾಗೆಯೇ ಬ್ರಾಹ್ಮಣ ವರ್ಣಾದಿ ಎಲ್ಲ ಜಗತ್ತು ( ಪದಾರ್ಥ ) ಬ್ರಹ್ಮನಲ್ಲಿ ಆರೋಪಿತವಾದುದು.

---

# ಕ್ರಾಸ ಎಕ್ಸಾಮಿನೇಶನ್.

ವಾ ವ —ಭ್ರಮಕ್ಕೆ ಕಾರಣಗಳಾವುವು ?

ಪ್ರ ಸಾ —(೧) ಅಧಿಷ್ಠಾನವು=ಯಾವುದರಲ್ಲಿ ಬೇರೊಂದು ಪದಾರ್ಥದ ಭಾಸ (ಭ್ರಮ) ವುಂಟಾಗುತ್ತದೆಯೋ ಆ ಪದಾರ್ಥವು. (೨) ಆ ಅಧಿಷ್ಠಾನದಲ್ಲಿಯ ಸಾಮಾನ್ಯ ಧರ್ಮವು (೩) ವಿಶೇಷ ಧರ್ಮವು (೪) ಆರೋಪ್ಯ ವಸ್ತುವಿನ ಸಾದೃಶ್ಯವು. (೫) ಸಾಮಾನ್ಯ ಧರ್ಮದ ಜ್ಞಾನವು. (೬) ವಿಶೇಷ ಧರ್ಮದ ಅಜ್ಞಾನವು. (೭) ಸಾಮಾನ್ಯ ಧರ್ಮದ ಜ್ಞಾನವಿದ್ದು ವಿಶೇಷ ಧರ್ಮದ ಜ್ಞಾನವಿಲ್ಲದ ಮನುಷ್ಯನು. (೮) ಜ್ಞಾನಕ್ಕೆ ಕಾರಣವಾದ ಭ್ರಾಂತಪುರುಷನ ದೇಹ ಇಂದ್ರಿಯಾದಿ ವಸ್ತು ಇತ್ಯಾದಿ ಕಾರಣಗಳು ಇವೆ

ವಾ. ವ.—ರಜ್ಜುವಿನಲ್ಲಿ ಸರ್ಪದ ಭ್ರಮವುಂಟಾಗಲು ಇಷ್ಟು ಕಾರಣಗಳುಂಟೇ ?

ಪ್ರ ಸಾ.—ಉಂಟು ರಜ್ಜು (ಹಗ್ಗವು) ಅಧಿಷ್ಠಾನವಾಗಿದೆ, ರಜ್ಜುವಿನಲ್ಲಿ ಇದಂತ್ವ ಎಂಬ (ಇದು ಎಂಬ) ಸಾಮಾನ್ಯ ಧರ್ಮವುಂಟು, ರಜ್ಜುತ್ವವೆಂಬ ವಿಶೇಷ ಧರ್ಮವುಂಟು, ರಜ್ಜುವಿನಲ್ಲಿ ಆರೋಪ್ಯಮಾಣವಾದ ಸರ್ಪದ ಸಾದೃಶ್ಯವುಂಟು (ಸರ್ಪದ ಹಾಗೆ ಉದ್ದಕ್ಕಿರುವುದು), ಇದಂತ್ವವೆಂಬ ಸಾಮಾನ್ಯ ಧರ್ಮವನ್ನು ತಿಳಿದವನು ಮತ್ತು ರಜ್ಜುತ್ವವೆಂಬ ವಿಶೇಷ ಧರ್ಮವನ್ನು ತಿಳಿಯದ ಪುರುಷನು ಉಂಟು, ಅವನಿಗೆ ದೇಹೇಂದ್ರಿಯಾದಿ ರೂಪವಾದ ಜ್ಞಾನ ಕಾರಣಗಳು ಉಂಟು. ಈ ಪ್ರಕಾರವಾಗಿ ರಜ್ಜುವನ್ನು ನೋಡಿ ಇದು ಸರ್ಪವು ಎಂಬ ಭ್ರಮಕ್ಕೆ ಯಾವ ಕಾರಣಗಳು ಬೇಕೋ ಅವೆಲ್ಲವು ಉಂಟು

ವಾ ವ — ಜಗತ್ತಿನ ಭ್ರಮವು ಯಾರಿಗೆ ಉಂಟಾಗುತ್ತದೆ ?

ಪ್ರ ಸಾ — ಬ್ರಹ್ಮನಿಗೆಯೆ ಆಗುತ್ತದೆ

ವಾ ವ. ಅಧಿಷ್ಠಾನವಾವುದು ?

ಪ್ರ ಸಾ —ಬ್ರಹ್ಮನೇ !

ವಾ ವ —ಆ ಬ್ರಹ್ಮನಲ್ಲಿ ಅಧಿಷ್ಠಾನವಾಗಲು ಕಾರಣವಾಗಿರುವ ಸಾಮಾನ್ಯ ಧರ್ಮವು ಮತ್ತು ವಿಶೇಷ ಧರ್ಮವು ಉಂಟೇ ?

ಪ್ರ. ಸಾ. —ಇಲ್ಲ

ವಾ. ವ —ಬ್ರಹ್ಮನಲ್ಲಿ ಆರೋಪ್ಯ ಜಗತ್ತಿನ ಸಾದೃಶ್ಯವುಂಟೇ ?

ಪ್ರ ಸಾ.—ಇಲ್ಲ.

ವಾ. ವ.—ಬ್ರಹ್ಮನಿಗೆ ಭ್ರಮವುಂಟಾಗಲು ಕಾರಣವಾಗಿರುವ ಸಾಮಾನ್ಯ ಧರ್ಮದ ಜ್ಞಾನವುಂಟೆ ?

ಪ್ರ. ಸಾ —ಸಾಮಾನ್ಯ ಧರ್ಮದ ಜ್ಞಾನವಿಲ್ಲ.

ವಾ ವ —ಭ್ರಮಕ್ಕೆ ಕಾರಣವಾಗಿರುವ ವಿಶೇಷ ಧರ್ಮದ ಅಜ್ಞಾನವು ಬ್ರಹ್ಮನಿಗುಂಟೇ ?

ಪ್ರ ಸಾ. —ಇಲ್ಲ

ವಾ ವ —ನಿಮ್ಮ ಅದ್ವೈತ ಮತದಲ್ಲಿ ಭ್ರಮೆಗೊಳ್ಳುವನೆಂದು ಒಪ್ಪಿರುವ ಬ್ರಹ್ಮನಿಗೆ ಭ್ರಮೆಗೆ ಕಾರಣವಾದ ದೇಹೇಂದ್ರಿಯಾದಿಗಳುಂಟೇ ?

ಪ್ರ. ಸಾ. — ಇಲ್ಲ.

ವಾ ವ —ಸರ್ಪದ ಭ್ರಮಕ್ಕೆ ಘಟವು ಅಧಿಷ್ಠಾನವಾಗಬಹುದೇ

ಪ್ರ ಸಾ —ಸರ್ಪದ ಭ್ರಮಕ್ಕೆ ಘಟವು ಅಧಿಷ್ಠಾನವಾಗದು

ವಾ. ವ —ಘಟವು ಅಧಿಷ್ಠಾನ ಏಕೆ ಆಗದು ?

ಪ್ರ. ಸಾ —ಭ್ರಮಕ್ಕೆ ಕಾರಣವಾದ ಸರ್ಪದ ಸಾದೃಶ್ಯವು ಘಟದಲ್ಲಿ ಇಲ್ಲದುದರಿಂದ ಘಟವು ಅಧಿಷ್ಠಾನವಾಗದು

ವಾ ವ.—ಅದ್ವೈತ ಮತದಲ್ಲಿ ಬ್ರಹ್ಮನು ಸಕಲ ಧರ್ಮರಹಿತನೆಂದು ಒಪ್ಪಿಕೊಂಡಿರುವುದರಿಂದ ಆ ಬ್ರಹ್ಮನಲ್ಲಿ ಅಧಿಷ್ಠಾನವಾಗುವುದಕ್ಕೆ ಕಾರಣವಾಗಿರುವ ಸಾಮಾನ್ಯ ಧರ್ಮ, ವಿಶೇಷ ಧರ್ಮ, ಆರೋಪಿತಸಾದೃಶ್ಯ ಈ ಧರ್ಮಗಳು ಇಲ್ಲವಾದುದರಿಂದ ಬ್ರಹ್ಮನು ಅಧಿಷ್ಠಾನ ಹೇಗಾದಾನು ! ಭ್ರಮ ಬರುವುದಕ್ಕೆ ಕಾರಣೀಭೂತವಾದ ಸಾಮಾನ್ಯ ಧರ್ಮದ ಜ್ಞಾನ ಮತ್ತು ವಿಶೇಷ ಧರ್ಮದ ಅಜ್ಞಾನ, ದೇಹೇಂದ್ರಿಯಾದಿಗಳು ಇವೆಲ್ಲವೂ ಬ್ರಹ್ಮನಿಗಿಲ್ಲವೆಂದು ನೀವು ಒಪ್ಪಿರೋಣದರಿಂದ ಆ ಬ್ರಹ್ಮನು ಭ್ರಾಂತನು ಹೇಗಾದಾನು ! ಬ್ರಹ್ಮನು ಅಧಿಷ್ಠಾನವೂ ಆಗುವುದಿಲ್ಲ, ಭ್ರಾಂತನೂ ಆಗುವುದಿಲ್ಲ ಎಂದ ಮೇಲೆ ಜಗತ್ತಿನ ಭ್ರಮವು ಯಾರಿಗೆ, ಮತ್ತು ಎಲ್ಲಿ ಆದೀತು !

ಪ್ರ ಸಾ —ನಮ್ಮ ಅದ್ವೈತಿಗಳು ಒಪ್ಪಿಕೊಂಡಿರುವ ಬ್ರಹ್ಮನಲ್ಲಿ ಅಧಿಷ್ಠಾನತ್ವಕ್ಕೆ ಉಪಯೋಗಿಯಾದ ಸಾಮಾನ್ಯ ಧರ್ಮ, ವಿಶೇಷ ಧರ್ಮ, ಆರೋಪ್ಯ ಸಾದೃಶ್ಯ, ಇವು ಸತ್ಯವಾದುವು ಇಲ್ಲದಿದ್ದರೂ ಸುಳ್ಳು ( ಕಲ್ಪಿತ) ಆದುವುಗಳು ಉಂಟು ಹಾಗೆಯೇ ಭ್ರಾಂತನಾಗಲು ಕಾರಣಗಳಾದ ಸಾಮಾನ್ಯ ಧರ್ಮದ ಜ್ಞಾನವು, ವಿಶೇಷ ಧರ್ಮದ ಅಜ್ಞಾನವು, ದೇಹೇಂದ್ರಿಯಾದಿಗಳು ಸತ್ಯವಾದವುಗಳಿಲ್ಲದಿದ್ದರೂ, ಕಲ್ಪಿತ (ಸುಳ್ಳು) ಆದವುಗಳು ಉಂಟು. ಬ್ರಹ್ಮನು ಅಧಿಷ್ಠಾನನಾಗುವನು ಮತ್ತು ಭ್ರಾಂತನೂ ಆಗುವನು ಆದುದರಿಂದ ಜಗತ್ತಿನ ಭ್ರಮವು ತನ್ನ ( ಬ್ರಹ್ಮನ ) ಲ್ಲಿ ಬ್ರಹ್ಮನಿಗೆ ಆಗುತ್ತದೆ ಎಂದು ಹೇಳುವುದು ಸರಿ ಹೋಗುತ್ತದೆ

ವಾ. ವ —ಸಾಮಾನ್ಯ ಧರ್ಮ, ವಿಶೇಷಧರ್ಮ ಮತ್ತು ಆರೋಪ್ಯ ಸಾದೃಶ್ಯ, ಇವುಗಳ ಆರೋಪಕ್ಕೆ ( ಭ್ರಮಕ್ಕೆ ) ಬ್ರಹ್ಮನು ಅಧಿಷ್ಠಾನ, ಮತ್ತು ಭ್ರಾಂತ=ಈ ಭ್ರಮದಿಂದ ಯುಕ್ತನು ಆದನಷ್ಟೆ ?

ಪ್ರ ಸಾ — ಹೌದು ಸಾಮಾನ್ಯ ಧರ್ಮಾದಿಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನು ಆಗುತ್ತಾನೆ ಮತ್ತು ಆಶ್ರಯನು ( ಭ್ರಾಂತನು ) ಆಗುತ್ತಾನೆ

ವಾ ವ — ಸಾಮಾನ್ಯ ಧರ್ಮಾದಿಗಳ ಆರೋಪಕ್ಕೆ ಬ್ರಹ್ಮನು ಅಧಿಷ್ಠಾನನಾಗಬೇಕಾದರೆ ಆ ಬ್ರಹ್ಮನಲ್ಲಿ ಆರೋಪಕ್ಕೆ ಕಾರಣವಾದ ಸಾಮಾನ್ಯ ಧರ್ಮಾದಿಗಳು ಇರಬೇಕಷ್ಟೆ !

ಪ್ರ ಸಾ — ಬ್ರಹ್ಮನಲ್ಲಿ ಧರ್ಮಾದಿಗಳ ಆರೋಪ ಮಾಡುವುದಕ್ಕೆ ಕಾರಣವಾಗಿರುವ ಸಾಮಾನ್ಯ ಧರ್ಮಾದಿಗಳು ಅವನಲ್ಲಿ ಇರಬೇಕಾದುವುಗಳು.

ವಾ ವ. — ಅದ್ವೈತಿಗಳ ಬ್ರಹ್ಮನು ನಿರ್ಧರ್ಮಕನಾಗಿರುವುದರಿಂದ ಸಾಮಾನ್ಯ ಧರ್ಮಾದಿಗಳು ಆ ಬ್ರಹ್ಮನಲ್ಲಿ ಇಲ್ಲವಾದುದರಿಂದ ಧರ್ಮಗಳ ಆರೋಪವು ಹೇಗೆ ಕೂಡುವುದು ?

ಪ್ರ. ಸಾ — ನಿಜವಾದ ಧರ್ಮಗಳು ಇರದೇ ಹೋದರೂ ಸುಳ್ಳು ಧರ್ಮಗಳು ಇರುವುದರಿಂದ ಆ ಬ್ರಹ್ಮನಲ್ಲಿ ಧರ್ಮಗಳ ಆರೋಪವು ಕೂಡುತ್ತದೆ

ವಾ ವ — ಆ ಸುಳ್ಳು=ಆರೋಪಿತ ಧರ್ಮಗಳ ಆರೋಪಕ್ಕಾಗಿ, ಪೂರ್ವದಲ್ಲಿ ಕಾರಣೀಭೂತವಾದ ಧರ್ಮಗಳ ಆರೋಪ ಮಾಡಬೇಕು ಆ ಆರೋಪಕ್ಕಾಗಿ ಪೂರ್ವದಲ್ಲಿ ಪುನಃ ಧರ್ಮಗಳ ಆರೋಪಬೇಕು ಈ ಪ್ರಕಾರವಾಗಿ ಅನವಸ್ಥಾ ಉಂಟಾಗುವುದಿಲ್ಲವೆ ?

ಪ್ರ. ಸಾ. — ಅನವಸ್ಥಾ ಉಂಟಾದರೆ ಏನು ಬಾಧಕವು ? ನಾವು ಅನವಸ್ಥಾ ಅಂಗೀಕಾರ ಮಾಡುತ್ತೇವೆ.

ವಾ ವ — ಬೀಜಾಂಕುರ ಪರಂಪರೆಯಂತೆ ಪೂರ್ವ ಪೂರ್ವ ವಾಸನಾಬಲದಿಂದ ಉತ್ತರೋತ್ತರ ವಿಜ್ಞಾನದಲ್ಲಿ ವಿಚಿತ್ರತಾ ಒಪ್ಪುತ್ತೇವೆಂದು ಬೌದ್ಧರು ಹೇಳಲು ಶಂಕರಾಚಾರ್ಯರು " ನ ಭಾವೋಽನುಪಲಬ್ಧೇಃ " ( ೨-೨ ೩೦ ) ಈ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನ ಮಾಡುವಾಗ ಯಾವ ದೂಷಣವನ್ನು ಹೇಳಿದ್ದಾರೆ ?

ಪ್ರ ಸಾ. — ಬೀಜದಿಂದ ಅಂಕುರವು ಹುಟ್ಟುತ್ತೆ, ಅಂಕುರದಿಂದ ಬೀಜವು ಹುಟ್ಟುತ್ತೆ ಹೀಗೆಂದು ಸ್ಪಷ್ಟವಾಗಿ ತೋರುವುದು. ( ಪ್ರಾಮಾಣಿಕ ವಾಗಿದೆ ). ಹೀಗೆ ಮೂಲವು ಪ್ರಾಮಾಣಿಕವಾಗಿರುವುದರಿಂದ ಬೀಜಾಂಕುರಗಳಿಗೆ ಕಾರ್ಯಕಾರಣಭಾವವನ್ನು ಕೂಡಿಸುವುದಕ್ಕೋಸ್ಕರ ಬೀಜಾಂಕುರ ಪರಂಪರಾ ಒಪ್ಪಲು ಬರುತ್ತದೆ. ಬಾಹ್ಯ ಪದಾರ್ಥಗಳ ಉಪಲಬ್ಧಿ ಇರದೆ ಪದಾರ್ಥಗಳ ವಾಸನಾ ( ಸಂಸ್ಕಾರವು ) ಎಲ್ಲಿಯೂ ಕಂಡು ಬಂದಿಲ್ಲ. ಆದುದರಿಂದ ಮೂಲವೇ ಅಪ್ರಾಮಾಣಿಕವಾದುದರಿಂದ ವಾಸನಾ ಪರಂಪರೆಯನ್ನು ಅಂಗೀಕರಿಸಲು ಬರುವುದಿಲ್ಲ ಎಂಬ ದೂಷಣೆಯನ್ನು ಹೇಳಿದ್ದಾರೆ.

ವಾ ವ —ಯಾವ ಪರಂಪರೆಯನ್ನು (ಅನವಸ್ಥೆಯನ್ನು) ಒಪ್ಪಬೇಕು, ಯಾವ ಅನವಸ್ಥೆಯನ್ನು ಒಪ್ಪಕೂಡದು ಎಂದು ಶಂಕರಾಚಾರ್ಯರ ಅಭಿಪ್ರಾಯವು?

ಪ್ರ. ಸಾ —ಮೂಲವು ಪ್ರಾಮಾಣಿಕವಾಗಿದ್ದರೆ ಅದನ್ನು ಹೊಂದಿಸುವುದಕ್ಕಾಗಿ ಕಲ್ಪಿಸಿದ ಪರಂಪರೆಯನ್ನು (ಅನವಸ್ಥಾ) ಒಪ್ಪಬೇಕು, ಯಾವ ಪರಂಪರೆಯ ಮೂಲವು ಅಪ್ರಾಮಾಣಿಕ ಆಗಿದೆಯೋ ಆ ಅಪ್ರಾಮಾಣಿಕವಾದ ಮೂಲವನ್ನು ಹೊಂದಿಸುವುದಕ್ಕಾಗಿ, ಕಲ್ಪಿಸಿದ ಪರಂಪರೆಯನ್ನು ಒಪ್ಪಕೂಡದು ಎಂದು ಶಂಕರಾಚಾರ್ಯರ ಅಭಿಪ್ರಾಯವು

ವಾ ವ.—ಬ್ರಹ್ಮನಲ್ಲಿ ಸಾಮಾನ್ಯ ಧರ್ಮಾದಿಗಳ ಭ್ರಮ ಪರಂಪರೆಯನ್ನು ಏಕೆ ಒಪ್ಪಬೇಕು ?

ಪ್ರ. ಸಾ —ಬ್ರಹ್ಮನಲ್ಲಿ ಬ್ರಾಹ್ಮಣ ವರ್ಣಾದಿ ಜಗತ್ತಿನ ಭ್ರಮವು ಪ್ರಾಮಾಣಿಕವಾಗಿರುವುದರಿಂದ ಆ ಭ್ರಮವನ್ನು ಹೊಂದಿಸುವುದಕ್ಕಾಗಿ ಕಲ್ಪಿಸುವ ಭ್ರಮ ಪರಂಪರೆಯನ್ನು ಒಪ್ಪಬೇಕು.

ವಾ ವ —೪-೧-೩ ಈ ಬ್ರಹ್ಮಸೂತ್ರದ ಶಾಂಕರಭಾಷ್ಯವನ್ನು ಮತ್ತು ಅದರ ಮೇಲಿನ ಭಾಮತೀ ವ್ಯಾಖ್ಯಾನವನ್ನೂ ನೀವು ನೋಡಿರುವಿರೇನು ?

ಕೋರ್ಟು—ನೀವು ಮಧ್ಯದಲ್ಲಿ ಅಸಂಗತವಾದ ಪ್ರಶ್ನೆಯನ್ನು ಮಾಡಬೇಡಿ.

ವಾ ವ — ಪ್ರಭುಗಳೆ! ನಮ್ಮ ಪ್ರಶ್ನೆಯು ಅಸಂಗತವಲ್ಲ ಶಂಕರಾಚಾರ್ಯರು ಮತ್ತು ಭಾಮತೀಕಾರ ಮುಂತಾದ ಅದ್ವೈತಿಗಳು ೪-೧-೩ ಈ ಬ್ರಹ್ಮಸೂತ್ರಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಅದ್ವೈತ ಮತಾನುಸಾರವಾಗಿ ಭ್ರಮವೇ ಕೂಡುವುದಿಲ್ಲ, ಭ್ರಮವು ಅಪ್ರಾಮಾಣಿಕವೆಂದು ಹೇಳಿದ್ದಾರೆ. ಇದನ್ನು ಪ್ರತಿವಾದಿಯ ಮುಖದಿಂದ ಹೇಳಿಸಬೇಕೆಂದು ಪ್ರಶ್ನೆಯನ್ನು ಮಾಡಿದ್ದೇವೆ. ಆದುದರಿಂದ ಈ ಪ್ರಶ್ನೆ ಮಾಡಲು ಕೋರ್ಟಿನವರು ಆಜ್ಞಾಪಿಸಬೇಕೆಂದು ಪ್ರಾರ್ಥನೆ.

ಕೋರ್ಟು—ಯಸ್ ಆಲ್ ರೈಟ್ ಪ್ರಶ್ನೆ ಮಾಡಿ

ವಾ. ವ —ಅಹೋ ಶಾಸ್ತ್ರಿಗಳೇ ೪-೧ ೩ ನೇ ಬ್ರಹ್ಮಸೂತ್ರದ ಶಾಂಕರಭಾಷ್ಯವನ್ನು ಭಾಮತೀಯನ್ನು ನೀವು ನೋಡಿರುವಿರೋ ?

ಪ್ರ ಸಾ —ನೋಡಿದ್ದೇವೆ

ವಾ ವ —ಅವುಗಳಲ್ಲಿ ಏನು ಹೇಳಿದೆ ?

ಪ್ರ. ಸಾ —$ ಭ್ರಮವನ್ನು ಹುಟ್ಟಿಸುವ ಅಧಿಷ್ಠಾನದಲ್ಲಿ ಆರೋಪ್ಯದ ಸಾದೃಶ್ಯ, ಸಾಮಾನ್ಯ ಧರ್ಮ, ವಿಶೇಷಧರ್ಮ, ಇವುಗಳಿದ್ದು ಸಾಮಾನ್ಯ ಧರ್ಮ

---

$ ಯುಕ್ತಂ ಹಿ ಪುರೋವರ್ತಿನಿ ದ್ರವ್ಯೇ ದ್ವಾಭ್ಯಾಮಪಿ ಸಾಮಾನ್ಯರೂಪೇಣಾಲೋಚಿತೇ ವಿಶೇಷರೂಪೇಣಾಗೃಹೀತೇ ವಿಶೇಷಾಂತರಸಮಾರೋಪಣಂ। ಇಹ ತು ಪ್ರಕಾಶಾತ್ಮನೋ ನಿರ್ವಿಶೇಷಸ್ಯಾನನ್ಯಪರಾಧೀನಪ್ರಕಾಶಸ್ಯ ನಾಗೃಹೀತಮಸ್ತಿ ಕಿಂಚಿತ್ ರೂಪಮಿತಿ ಕಸ್ಯ ವಿಶೇಷಸ್ಯಾಗ್ರಹೇ ಕಿಂ ವಿಶೇಷಾಂತರಂ ಸಮಾರೋಪ್ಯತಾಮ್ । ತಸ್ಮಾತ್ ಬ್ರಹ್ಮಣೋ ಜೀವಭಾವಸ್ಯಾಸಂಭವಾತ್ ಜೀವೋ ಜೀವಃ ಬ್ರಹ್ಮ ಚ ಬ್ರಹ್ಮೇತಿ ತತ್ತ್ವಮಸೀತಿ ಪ್ರತೀಕೋಪದೇಶ ಏವೇತಿ ಪ್ರಾಪ್ತಮ್।(ಭಾಮತೀ ೪-೧-೩)

ದಿಂದ ಆ ಅಧಿಷ್ಠಾನವು ಜ್ಞಾತವೂ ( ತಿಳಿದು ಬಂದುದು ) ಮತ್ತು ವಿಶೇಷ ಧರ್ಮದಿಂದ ಅಜ್ಞಾತವೂ ( ತಿಳಿದು ಬಾರದುದು ) ಆಗಿರ ಬೇಕು ಹೀಗೆ ಯಾವುದಿರುವುದೋ ಆ ಅಧಿಷ್ಠಾನದಲ್ಲಿ ಬೇರೆ ವಿಶೇಷ ವನ್ನು ಆರೋಪಿಸಲು ಬರುವುದು. ಹೇಗೆಂದರೆ:—ರಜ್ಜು ಸರ್ಪದ ಹಾಗೆ ಉದ್ದವಿದೆ, ಇದಂತ್ವವೆಂಬ ಸಾಮಾನ್ಯ ಧರ್ಮದಿಂದ ಯುಕ್ತ ವಾಗಿದೆ. ಹಾಗೆಯೇ ರಜ್ಜುತ್ವ ಎಂಬ ವಿಶೇಷ ಧರ್ಮದಿಂದ ಕೂಡಿದೆ, ಭ್ರಮಕ್ಕೆ (ಆರೋಪಕ್ಕೆ) ಮುಂಚೆ ಇದಂತ್ವ ಧರ್ಮದಿಂದ ತಿಳಿದು ಬರು ವದಾಗಿದೆ ಮತ್ತು ರಜ್ಜುತ್ವವೆಂಬ ವಿಶೇಷ ಧರ್ಮದಿಂದ ತಿಳಿಯ ದಾಗಿದೆ ಆದುದರಿಂದ ಸರ್ಪದ ಆರೋಪಕ್ಕೆ ಅಧಿಷ್ಠಾನವಾಗುತ್ತದೆಂದು ಕಂಡಿರುವುದರಿಂದ ಪ್ರಕೃತದಲ್ಲಿ ದಾಷ್ಟಾರ್ಂತಿಕವಾದ ಬ್ರಹ್ಮನಲ್ಲಿ (ಅಧಿಷ್ಠಾನದಲ್ಲಿ) ಜೀವಾದಿಗಳ ಭ್ರಮವುಂಟಾಗುವದಕ್ಕೆ ಮೇಲ್ಕಂಡ ಧರ್ಮಗಳು ಇರಬೇಕು. ಆದರೆ ಆ ಬ್ರಹ್ಮನು ಪ್ರಕಾಶರೂಪನು, ಸಾಮಾನ್ಯವಿಶೇಷ ಧರ್ಮಗಳಿಂದ ರಹಿತನಾದುದರಿಂದ ಸಾಮಾನ್ಯ ಧರ್ಮದಿಂದ ತಿಳಿದು ಬರುವವನು ಮತ್ತು ವಿಶೇಷ ಧರ್ಮದಿಂದ ತಿಳಿದು ಬಾರದವನೂ ಎಂದು ಆಗನು. ಹಾಗೆಯೇ ಬ್ರಹ್ಮನಲ್ಲಿ ಆರೋ ಪ್ಯವಾಗುವ ( ಜಗತ್ತಿನ ) ಸಾದೃಶ್ಯವು ಇಲ್ಲವಾದುದರಿಂದ ಜೀವ ಭಾವ ಮುಂತಾದ ಯಾವುದೂ ಧರ್ಮವನ್ನು ಆರೋಪಿಸಲು ಬರುವು ದಿಲ್ಲ ಎಂದರೆ ಬ್ರಹ್ಮನೇ ಜೀವನು ಇತ್ಯಾದಿ ಭ್ರಮೆ ಉತ್ಪನ್ನವಾಗುವು ದಿಲ್ಲವಾದುದರಿಂದ, ಜೀವವು ಜೀವವೇ, ಬ್ರಹ್ಮವು ಬ್ರಹ್ಮವೇ ! ಬ್ರಹ್ಮ ನಲ್ಲಿ ಜೀವತ್ವದ ಆರೋಪವಾಗುವುದು ಸಾಧ್ಯವಲ್ಲವಾದುದರಿಂದ ' ತತ್ವಮಸಿ ' ಈ ವಾಕ್ಯಕ್ಕೆ ಜೀವ ಬ್ರಹ್ಮರಿಗೆ ಅಭೇದ ಎಂಬ ಅರ್ಥ ವನ್ನು ಹೇಳಕೂಡದು, ಪ್ರತಿಮೆಯಲ್ಲಿ ದೇವರಿದ್ದಾನೆಂದು ಹೇಗೆ ಹೇಳು ತ್ತಾರೊ ಹಾಗೆಯೇ ಜೀವನಲ್ಲಿ ಪರಮಾತ್ಮನಿದ್ದಾನೆ ಹೀಗೆಂದು ಆ ಶ್ರುತಿಗೆ ಅರ್ಥವನ್ನು ಹೇಳಬೇಕೆಂದು ಈ ವಾಕ್ಯದಿಂದ ಆಕ್ಷೇಪವನ್ನು ಮಾಡಿದ್ದಾರೆ.

ವಾ ವ.—ಭ್ರಮವು ಕೂಡುವುದಿಲ್ಲ ಎಂಬ ಆಕ್ಷೇಪಕ್ಕೆ ಏನು ಸಮಾಧಾನವನ್ನು ಹೇಳಿದ್ದಾರೆ ?

ಪ್ರ. ಸಾ.—ಸಾಂಶವಾದ ( ಧರ್ಮವುಳ್ಳ ) ಅಧಿಷ್ಠಾನದಲ್ಲಿ ಭ್ರಮಕ್ಕೆ ಕಾರಣ ವಾದ ಕೆಲವು ಭಾಗದ ( ಧರ್ಮದ) ಜ್ಞಾನವು ಮತ್ತು ಕೆಲವು ಭಾಗದ ( ಧರ್ಮದ ) ಅಜ್ಞಾನವು ಇರುವುದರಿಂದ ಹೇಗೆ ಭ್ರಮವು ಉಂಟಾಗುತ್ತದೆಯೋ ಹಾಗೆಯೇ ಬ್ರಹ್ಮನಲ್ಲಿ ( ವಾಸ್ತವಿಕ ) ಭ್ರಮೆ ಯುಂಟಾಗುವದು ಶಕ್ಯವಿಲ್ಲ. ಏಕೆಂದರೆ ಬ್ರಹ್ಮನು ಸಾಂಶ ( ಧರ್ಮ ವುಳ್ಳವ ) ನಲ್ಲ ಆದ್ದರಿಂದ ಅವನಲ್ಲಿ ಭ್ರಮೆಯುಂಟಾಗಲು ಶಕ್ಯವಿಲ್ಲ.

ಏಕೆಂದರೆ ಬ್ರಹ್ಮನು ನಿರಂಶನು§( ಧರ್ಮಧರ್ಮಿ ವಿಭಾಗ ವಿಲ್ಲದವನು) ಆಗಿರುವಕಾರಣ ಭ್ರಮುಕ್ಕೆ ಕಾರಣವಾದ ಕೆಲವು ಅಂಶದ ತಿಳಿಯೋಣವು, ಕೆಲವು ಅಂಶಗಳ ತಿಳಿಯದೆ ಇರೋಣವು ಎಂಬ ಇವೇ ಮೊದಲಾದ ಕಾರಣಗಳು ಅವನಲ್ಲಿ ಇಲ್ಲವಾದುದರಿಂದ ಬ್ರಹ್ಮನಲ್ಲಿ ಭ್ರಮೆ ಬರುವುದಕ್ಕೆ ಕಾರಣವಿಲ್ಲ ಆದರೂ ಅನಾದಿ ಅನಿರ್ವಾಚ್ಯವಾದ ಅವಿದ್ಯಾ, ಮತ್ತು ಅವಿದ್ಯಾವಾಸನಾ ಇವುಗಳಿಂದ ಕಲ್ಪಿತವಾದ ಯಾವ ಪ್ರಪಂಚವೋ ಅಂತಹ ಪ್ರಪಂಚರೂಪನಾಗಿ ಸಾಂಶ ಪದಾರ್ಥದಂತೆ ತೋರುವ ಪರಮಾತ್ಮನ ಕಲ್ಪಿತವಾದ ಕೆಲವು ಅಂಶದ ಅಗ್ರಹಣದಿಂದ ನಾನಾ ಪ್ರಪಂಚರೂಪನಾಗಿ ಅಂದರೆ ಭ್ರಮೆಯುಂಟಾದವನಂತೆ ತೋರುತ್ತಾನೆಂದು ಸಮಾಧಾನವನ್ನು ಹೇಳಿದ್ದಾರೆ

ವಾ ವ —ಭ್ರಮ ಬಂದಹಾಗೆ ಭಾಸವಾಗುತ್ತದೆಂದು ಹೇಳುವ ಭಾಮತೀಕಾರರ ಅಭಿಪ್ರಾಯವು ಭ್ರಮವು ಕೂಡುತ್ತದೆಂದೋ ಅಥವಾ ಭ್ರಮವು ಕೂಡುವದಿಲ್ಲವೆಂದೋ ?

ಪ್ರ ಸಾ —ಭ್ರಮವು ಕೂಡುವುದಿಲ್ಲವೆಂದು ಅಭಿಪ್ರಾಯವುಂಟು

ವಾ ವ.—ಭ್ರಮವು ಕೂಡುವುದಿಲ್ಲವೆಂಬ ಭಾಮತೀಕಾರರ ಅಭಿಪ್ರಾಯವು ನಿಮಗೆ ಹೇಗೆ ಗೊತ್ತಾಯಿತು ?

ಪ್ರ ಸಾ.—ಅವರ ವಾಕ್ಯದಿಂದಲೇ ಗೊತ್ತಾಯಿತು

ವಾ ವ —ಅವರು ಏನು ಹೇಳಿದ್ದಾರೆ ?

ಪ್ರ ಸಾ —* ವಾಸ್ತವವಾಗಿ ವಿಚಾರ ಮಾಡಿದರೆ ಭ್ರಮವೇ ಇಲ್ಲ, ಕರ್ತೃತ್ವ ಭೋಕ್ತೃತ್ವ ಮುಂತಾದ ಸಂಸಾರವಿಲ್ಲ, ನಾವು ಭ್ರಮವಿದೆ, ಸಂಸಾರವುಂಟು ಎಂದು ಹೇಳಿದರೆ ಅದರಮೇಲೆ ದ್ವೈತವಾದಿಗಳು ಹೇಳುವ ಸರ್ವಾನುಪಪತ್ತಿಗಳು ಬರುತ್ತವೆ ಅದುದರಿಂದ ಭ್ರಮವು ಹೇಗೆ ಬರುವುದೆಂಬದು ಹೇಳುವುದಕ್ಕೆಬರದು ( ಅನಿರ್ವಚನೀಯವಾದುದು ) ಎಂದು ಹೇಳುವುದೇ ಯುಕ್ತವೆಂದು ಹೇಳಿದ್ದಾರೆ

ವಾ ವ —ಭಾಮತೀಕಾರರು ಅದು ತಮ್ಮ ಸ್ವಂತವಾದ ಅಭಿಪ್ರಾಯವು ಎಂದು ಹೇಳಿದ್ದಾರೆಯೋ ಇಲ್ಲವೆ **ಶಂಕರಾಚಾರ್ಯರ** ಅಭಿಪ್ರಾಯವೆಂದು ಹೇಳಿದ್ದಾರೆಯೊ ?

ಪ್ರ ಸಾ.—ಅದು ಭಾಮತೀಕಾರರ ಸ್ವಂತವಾದ ಅಭಿಪ್ರಾಯವಲ್ಲ ' ಯದ್ಯೇವಂ ಪ್ರತಿಬುದ್ಧೋಸಿ ನಾಸ್ತಿ ಕಸ್ಯಚಿದಪ್ರಬೋಧ ಇತಿ ' ಈ ವಾಕ್ಯದಿಂದ **ಶಂಕರಾಚಾರ್ಯರ** ಅಭಿಪ್ರಾಯ ವೆಂದು ಹೇಳಿದ್ದಾರೆ

---

§ ನಿರಂಶಸ್ಯಾಪಿ ಅನಾದ್ಯನಿರ್ವಾಚ್ಯಾವಿದ್ಯಾ ತದ್ವಾಸನಾಸಮಾರೋಪಿತವಿವಿಧಪ್ರಪಂಚಾತ್ಮನಃ ಸಾಂಶಸ್ಯೇವ ಕಸ್ಯಚಿದಂಶಸ್ಯಾಗ್ರಹಣಾದ್ವಿಭ್ರಮ ಇವ.

* ಪರಮಾರ್ಥತಸ್ತು ನ ವಿಭ್ರಮೋ ನಾಮ ಕಶ್ಚಿನ್ನ ಚ ಸಂಸಾರೋ ನಾಮ । ಕಿಂತು ಸರ್ವಮೇತತ್ ಸರ್ವಾನುಪಪತ್ತಿಭಾಜನತ್ವೇನಾನಿರ್ವಚನೀಯಮಿತಿ ಯುಕ್ತಮುತ್ಪಶ್ಯಾಮಃ ॥

ವಾ. ವ.—'ಯದ್ಯೇವಂ' ಈ ವಾಕ್ಯದ ಶಂಕರಾಚಾರ್ಯರ ಅಭಿಪ್ರಾಯವೇನು?

ಪ್ರ. ಸಾ.—ಒಬ್ಬ ಶಿಷ್ಯನು ಈ ಅಜ್ಞಾನವು (ಸಂಸಾರವು) ಯಾರಿಗೆ ಎಂದು ಶಂಕರಾಚಾರ್ಯರನ್ನು ಪ್ರಶ್ನೆ ಮಾಡಲು, ಪ್ರಶ್ನೆ ಮಾಡುವ ನಿನಗೆಯೇ ಅಜ್ಞಾನವೆಂದು ಶಂಕರಾಚಾರ್ಯರು ಉತ್ತರವನ್ನಿತ್ತರು. ಅದರ ಮೇಲೆ ಪುನಃ ಶಿಷ್ಯನು, ಅಹಮೀಶ್ವರಃ=ನಾನು ಈಶ್ವರನೇ ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಈಶ್ವರರೂಪಿಯಾದ ನನಗೆ ಅಜ್ಞಾನವು ಹೇಗೆ ಕೂಡೀತು ? ಹೀಗೆಂದು ವಿಚಾರಿಸಲು "ಆ ರೀತಿ ನಿನಗೆ ತಿಳಿದಿದ್ದರೆ ಯಾರಿಗೂ ಅಜ್ಞಾನವಿಲ್ಲ" ಎಂದು ಹೇಳಿದರೆಂದು 'ಯದ್ಯೇವಂ' ಈ ವಾಕ್ಯದ ಶಂಕರಾಚಾರ್ಯರ ಅಭಿಪ್ರಾಯವು.

ವಾ. ವ.—ಭ್ರಮವು ಕೂಡದಿದ್ದರೆ ನಿಮ್ಮ ಅದ್ವೈತ ಮತವು ಹೇಗೆ ಯುಕ್ತವಾದೀತು ?

ಪ್ರ ಸಾ—ಭ್ರಮವು ಸರಿಯಾಗಿ ಕೂಡಿದರೆ ಬ್ರಹ್ಮನಿಂದ ಬೇರೇಯಾದ ಈ ಭ್ರಮವೂ ಒಂದು ಸತ್ಯ ಪದಾರ್ಥವಾಗಿ ಬ್ರಹ್ಮನೊಬ್ಬನೇ ಸತ್ಯ ಎಂದು ಹೇಳುವ ಅದ್ವೈತ ಮತಕ್ಕೆ ಹಾನಿ ಬಂದೀತು. ಆದುದರಿಂದ ಭ್ರಮವು ಕೂಡದೇ ಇರೋಣವೇ ಅದ್ವೈತ ಮತಕ್ಕೆ ಭೂಷಣವು

ವಾ. ವ.—ಭ್ರಮವೇ ಮೊದಲಾದ ಪದಾರ್ಥಗಳು ಚನ್ನಾಗಿ ಕೂಡಿದರೆ(ಪ್ರಾಮಾಣಿಕವಾದರೆ) ನಿಮ್ಮ ಆದ್ವೈತ ಮತವು ದುಷ್ಟವಾಗುತ್ತದೆಂದು ನೀವು ಹೇಳುತ್ತೀರೋ ಅಥವಾ ನಿಮ್ಮ ಪ್ರಾಚೀನರಾರಾದರೂ ಹೇಳಿದ್ದಾರೆಯೋ ?

ಪ್ರ ಸಾ.—'ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಂ | ಕಥಂಚಿದ್ ಘಟಮಾನತ್ವೇಽವಿದ್ಯಾತ್ವಂ ದುರ್ಘಟಂ ಭವೇತ್,' "ಮಾಯಾಯಾ ಅನುಪಪತ್ತಿರ್ಭೂಷಣಂ," "ಅನುಪಪತ್ತಿರ್ಮಾಯಾಮುಪೋದ್ಬಲಯತಿ" "ತಸ್ಯ ಮಾಯಿಕತ್ವೇ ನ ಮಾಯಾಯಾ .......ಸರ್ವಾನುಪಪತ್ತೇರ್ಭೂಷಣತ್ವಾತ್" ಇತ್ಯಾದಿ ಅನೇಕ ವಾಕ್ಯಗಳಿಂದ ಅವಿದ್ಯಾ, ಅವಿದ್ಯಾಕಾರ್ಯ, ಇವುಗಳಿಗೆ ದುರ್ಘಟತ್ವ=ಯುಕ್ತಿಯಿಂದ ಹೊಂದಿಸುವುದಕ್ಕೆ ಬಾರದುದು ಭೂಷಣವೇ ಆದುದು, ದೂಷಣವಲ್ಲ. ಯಾವುದೇ ಪ್ರಕಾರದಿಂದ ಅವಿದ್ಯೆಯು ಕೂಡಿದರೆ ಅದು ಅವಿದ್ಯೆಯೇ ಆಗುವುದಿಲ್ಲ (ಅಲ್ಲಿ ಅವಿದ್ಯಾತ್ವವೇ ಬರುವುದಿಲ್ಲ) ಹೀಗೆಂದು ನಮ್ಮ ಪೂರ್ವಾಚಾರ್ಯರು ಹೇಳಿದ್ದಾರೆ.

ವಾ. ವ.—ಮೊದಲಿನ ಭ್ರಮವೇ ಪ್ರಾಮಾಣಿಕವಾಗದಿರಲು, ಆ ಭ್ರಮವನ್ನು ಕೂಡಿಸುವದಕ್ಕೋಸ್ಕರ ಭ್ರಮ ಪರಂಪರೆಯನ್ನೊಪ್ಪುವದು ನಿರ್ಮೂಲವಾಗುತ್ತದೆ ಎಂದು ನೀವು ಬೌದ್ಧರಿಗೆ ಹೇಳಿದ 'ಅಂಧ ಪರಂಪರಾ' ದೋಷವು ನಿಮ್ಮ ಮೇಲೆ ಬರುವುದಿಲ್ಲವೆ ?

ಪ್ರ. ಸಾ.—ಉತ್ತರವಿಲ್ಲ.

ವಾ ವ—( To the court ) ಅದ್ವೈತ ಮತದ ಪ್ರಕಾರವಾಗಿ ನಿರ್ಧರ್ಮಕ ( ಧರ್ಮರಹಿತ ) ಎಂದು ಒಪ್ಪಿದ ಬ್ರಹ್ಮನಲ್ಲಿ ಜಗತ್ತಿನ ಭ್ರಮವುಂಟಾಗಲು ಕಾರಣವಿಲ್ಲ, ಮತ್ತು ಜಗತ್ತು ಕಲ್ಪಿತವಾದುದು ಎಂಬ ವಿಷಯದಲ್ಲಿ ಪ್ರಮಾಣವೇ ಇಲ್ಲ—" ಮೂಲವೇ ಅಪ್ರಾಮಾಣಿಕವಾಯಿತೆಂದು ಅಪ್ರಾಮಾಣಿಕವಾದ ಭ್ರಮುವನ್ನು ಹೊಂದಿಸುವುದಕ್ಕಾಗಿ ನೀವು ಭ್ರಮ ಪರಂಪರೆಯನ್ನು ಒಪ್ಪಿದರೆ ಅನವಸ್ಥಾ ದೋಷವು ಬಂದೀತು " ಹೀಗೆಂದು ಅದ್ವೈತಿಗಳು ಬೌದ್ಧರಿಗೆ ಹೇಳಿದ ದೋಷವು ಅದ್ವೈತಿಗಳ ಮೇಲೆ ಬರುತ್ತದೆ ಇದನ್ನು ಕೋರ್ಟಿನವರು ಗಮನಿಸಬೇಕೆಂದು ಕೋರಿಕೆ

---

## ' ಸರ್ವಂ ಖಲ್ವಿದಂ ಬ್ರಹ್ಮ ' ಎಂಬ ಶ್ರುತಿಯ ವಿಚಾರಣೆ.

ಪ್ರ. ವ—ಶಾಸ್ತ್ರಿಗಳೇ ! ಜಗತ್ತು ಮಿಥ್ಯಾ ಎಂಬ ವಿಷಯದಲ್ಲಿ ಬೇರೆ ಯಾವುದಾದರೂ ಆಧಾರವುಂಟೋ ?

ಪ್ರ ಸಾ.—ಬೇರೊಂದು ಶ್ರುತಿಯುಂಟು.

ಪ್ರ ವ.—ಅದನ್ನು ಹೇಳಿ ?

ಪ್ರ. ಸಾ.—" ಸರ್ವಂ ಖಲ್ವಿದಂ ಬ್ರಹ್ಮ " ( ಛಾ. ೩-೧೪-೧ ) ಎಂಬ ಶ್ರುತಿಯೇ

ಪ್ರ. ವ.– ಇದಕ್ಕೆ ಅರ್ಥವೇನು ?

ಪ್ರ. ಸಾ.—' ಇದಂ ಸರ್ವಂ '= ಈ ಸಮಸ್ತವಾದ ಜಗತ್ತು, ಬ್ರಹ್ಮ=ಬ್ರಹ್ಮನೇ ಎಂದರೆ ಬ್ರಹ್ಮನಲ್ಲಿ ಕಲ್ಪಿತವು=ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದುದು ) ಎಂದು ಅರ್ಥವು

ಪ್ರ. ವ—ಇದರಿಂದ ಏನೆಂದು ಸಿದ್ಧವಾಗುತ್ತದೆ ?

ಪ್ರ. ಸಾ.—ಎಲ್ಲ ಜಗತ್ತು ಬ್ರಹ್ಮನಲ್ಲಿ ಕಲ್ಪಿತವೆಂದು ಸಿದ್ಧವಾಗುತ್ತದೆ.

---

## ಕ್ರಾಸ ಎಕ್ಸಾಮಿನೇಶನ್.

ವಾ. ವ—ಬ್ರಹ್ಮ ಶಬ್ದಕ್ಕೆ ಬ್ರಹ್ಮನಲ್ಲಿ ಕಲ್ಪಿತವು ಎಂಬ ಅರ್ಥವು ಮುಖ್ಯಾರ್ಥವೋ ಅಥವಾ ಅಮುಖ್ಯಾರ್ಥವೋ ( ಗೌಣಾರ್ಥವೋ= Secondary meaning )?

ಪ್ರ. ಸಾ.—ಅಮುಖ್ಯಾರ್ಥವೇ, ಮುಖ್ಯಾರ್ಥವಲ್ಲ.

ವಾ ವ —ಮುಖ್ಯಾರ್ಥವಲ್ಲದಿದ್ದರೆ, ಈ ಅರ್ಥವನ್ನೇ ಏಕೆ ತೆಗೆದು ಕೊಳ್ಳಬೇಕು? ಬೇರೆ ಅರ್ಥವನ್ನು ಏಕೆ ತೆಗೆದುಕೊಳ್ಳಕೂಡದು ?

ಪ್ರ ಸಾ —ಬೇರೆ ಅರ್ಥವು ಹೊಂದಿದರೆ ಅದನ್ನು ತೆಗದುಕೊಳ್ಳಬಹುದು

ವಾ ವ.—'ಸರ್ವಕಾಮ. ಸರ್ವರಸಃ ಸರ್ವಗಂಧಃ' ಎಂಬ ವಾಕ್ಯವು ಎಲ್ಲಿಯದು?

ಪ್ರ. ಸಾ.—' ಸರ್ವಂ ಖಲ್ವಿದಂ ಬ್ರಹ್ಮ ' ಎಂಬ ವಾಕ್ಯದ ಮುಂದಿನದೇ

ವಾ. ವ.—ಈ ವಾಕ್ಯಕ್ಕೆ ಶಂಕರಾಚಾರ್ಯರ ಭಾಷ್ಯವನ್ನೂ ಆನಂದಗಿರಿ ಟೀಕೆಯನ್ನೂ ನೊಡಿರುವಿರಾ ?

ಪ್ರ, ಸಾ,—ನೋಡಿರುತ್ತೇನೆ

ವಾ. ವ.—ಈ § ವಾಕ್ಯಕ್ಕೆ ಅರ್ಥವನ್ನು ಹೇಳಿ

ಪ್ರ ಸಾ.—' ಸರ್ವಕಾಮಃ ' ಎಂಬ ಪದಕ್ಕೆ " ಸರ್ವೇ ಕಾಮಾಃ ಯಸ್ಯ ಸ " ಎಂದರೆ ಎಲ್ಲಾ ಕಾಮುಗಳೂ ಯಾವಾತನ ಅಧೀನಗಳಾಗಿವೆಯೋ ಆತನು ಪರಮಾತ್ಮನೆಂದು ಶಂಕರಾಚಾರ್ಯರು ತಾವೇ ಅರ್ಥ ಮಾಡಿ ಅದಕ್ಕೆ ತಾವೇ—" ಕಾಮೋಽಸ್ಮಿ ಭರತರ್ಷಭ" ಗೀತಾ. ಅ. ೭ ಶ್ಲೊ. ೧೧ ನೇದರಲ್ಲಿ ' ನಾನು ಕಾಮರೂಪನಾಗಿದ್ದೇನೆ ' ಎಂದು ಶ್ರೀಕೃಷ್ಣನು ಹೇಳಿರುವುದರಿಂದ ಇದೇ ಪ್ರಕಾರವಾಗಿ ಈ ಶ್ರುತಿಯಲ್ಲಿರುವ ' ಸರ್ವಕಾಮ ' ಎಂಬ ಪದಕ್ಕೂ ' ಸರ್ವಶ್ಚಾ ಸೌ ಕಾಮಶ್ಚ ಎಂದು ಕರ್ಮಧಾರಯ ಸಮಾಸ ಮಾಡಿಕೊಂಡು ಪರ ಮಾತ್ಮನು ಸರ್ವಕಾಮರೂಪನಾಗಿದ್ದಾನೆ ( ಪರಮಾತ್ಮನೂ ಕಾಮವೂ ಒಂದೇ ) ಎಂದು ಏಕೆ ಅರ್ಥಮಾಡಕೂಡದು ಎಂದು ಆಕ್ಷೇಪಿಸಿ ಕೊಂಡು, ಕಾಮವು ಪರತಂತ್ರವಾದುದು ಜನ್ಯವಾದುದು, ಇಂಥಾ ಕಾಮಕ್ಕೂ ಪರಮಾತ್ಮನಿಗೂ ಐಕ್ಯವನ್ನು ಹೇಳಿದರೆ ಪರಮಾತ್ಮ ನಿಗೂ ಪಾರತಂತ್ರ್ಯವೂ, ಜನ್ಯತ್ವವು ಸಂಭವಿಸಿ ಆತನ ಸ್ವಾತಂತ್ರ್ಯವೂ ಅನಾದಿತ್ವವೂ ನಾಶ ಹೊಂದುವುವು ಆದುದರಿಂದ ಕಾಮಕ್ಕೆ ಪರ

---

§ ಸರ್ವಕಾಮಃ ಸರ್ವೇ ಕಾಮಾ ದೋಷರಹಿತಾ ಅಸ್ಯೇತಿ। ಸ ಸರ್ವಕಾಮಃ " ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ" ಇತಿ ಸ್ಮೃತೇಃ। ನನು ಕಾಮೋಽಸ್ಮೀತಿ ವಚನಾದಿಹ ಬಹುವ್ರೀಹಿರ್ನ ಸಂಭವತಿ। ಸರ್ವಕಾಮ ಇತಿ। ನ ಕಾಮಸ್ಯ ಕರ್ತವ್ಯತ್ವಾಚ್ಛಬ್ದಾದಿವತ್ಪಾರಾರ್ಥ್ಯಪ್ರಸಂಗಾಚ್ಚ ದೇವಸ್ಯ। ತಸ್ಮಾದ್ಯಥೇಹ ಸರ್ವಕಾಮ ಇತಿ ಬಹುವ್ರೀಹಿಸ್ತಥಾ ಕಾಮೋಽಸ್ಮೀತಿ ಸ್ಮೃತ್ಯರ್ಥೋ ವಾಚ್ಯಃ ( ಛಾ ಶಾಂ. ಭಾ ೩-೧೪-೨ ).

ಉದಾಹೃತಸ್ಮೃತಿಮಾಶ್ರಿತ್ಯೋಕ್ತಮಾಕ್ಷಿಪತಿ। ನನ್ವಿತಿ। ಕಾಮಸಾಮಾನಾಧಿಕರಣ್ಯೇ ಬಾಧಕೋಪಲಂಭಾತ್ ಬಹುವ್ರೀಹಿರೇವೇತಿ ಪರಿಹರತಿ। ನ ಕಾಮಸ್ಯೇತಿ। ತಸ್ಯ ಕಾರ್ಯತ್ವಾತ್ತದೈಕ್ಯೇ ಬ್ರಹ್ಮಣೋಽನಾದಿತ್ವಂ ಬಾಧ್ಯೇತ। ಚೇತನಶೇಷತ್ವಾಚ್ಚ ಕಾಮಸ್ಯ। ತದನ್ಯೈಕ್ಯೇ ಬ್ರಹ್ಮಣಃ ಸ್ವಾತಂತ್ರ್ಯಂ ಹೀಯೇತ। ತಥಾ ಚ ಕರ್ಮಧಾರಯಾಸಂಭವಾತ್ ಬಹುವ್ರೀಹಿರೇವೇತ್ಯರ್ಥಃ। ಕಥಂ ತರ್ಹಿ ಕಾಮೋಽಸ್ಮೀತಿ ತಾದಾತ್ಮ್ಯಸ್ಮೃತಿರಿತ್ಯಾಶಂಕ್ಯಾಹ। ತಸ್ಮಾದಿತಿ। ಕಾಮೇಶ್ವರಯೋಃ ಸಾಮಾನಾಧಿಕರಣ್ಯಾಸಂಭವಾತ್ ಪ್ರಕೃತಶ್ರುತೌ ಬಹುವ್ರೀಹಿರ್ಯಥೇಷ್ಟಸ್ತಥಾ ಸ್ಮೃತಾವಪಿ ಬ್ರಹ್ಮಪಾರತಂತ್ರ್ಯಮಾತ್ರಂ ಕಾಮಸ್ಯ ವಿವಕ್ಷಿತಂ। ಶ್ರುತ್ಯನುಸಾರೇಣ ಸ್ಮೃತೇರ್ನೇತವ್ಯತ್ವಾತ್ ಇತ್ಯರ್ಥಃ(ಆನಂದಗಿರಿ).

ಮಾತ್ಮನಿಂದ ಅಭೇದವನ್ನು ಹೇಳಬಾರದು " ಸರ್ವೇ ಕಾಮಾ ಯಸ್ಯ " ಎಂದು ಬಹುವ್ರೀಹಿ ಸಮಾಸವನ್ನು ಮಾಡಿಕೊಂಡು ಕಾಮಕ್ಕೆ ಪರಮಾತ್ಮನು ಸ್ವಾಮಿಯು ಎಂದು ಅರ್ಥಮಾಡಬೇಕು. " ಕಾಮೋಽಸ್ಮಿ " ಎಂಬ ಗೀತಾ ವಾಕ್ಯಕ್ಕೂ, ಕಾಮ =ಕಾಮಸ್ವಾಮಿಯಾಗಿ, ಅಸ್ಮಿ=ಇರುತ್ತೇನೆ, ( ನಾನು ಕಾಮಕ್ಕೆ ಸ್ವಾಮಿಯಾಗಿರುತ್ತೇನೆ ) ಎಂದೇ ಅರ್ಥಮಾಡಬೇಕೆಂದು ಹೇಳಿರುತ್ತಾರೆ

ವಾ ವ.—ಕಾಮೋಽಸ್ಮಿ ಭರತರ್ಷಭ ' ಎಂಬ ವಾಕ್ಯದಲ್ಲಿರುವ ಕಾಮ ಪದಕ್ಕೆ ' ಕಾಮಸ್ವಾಮಿಯು ' ಎಂದು ಶಂಕರಾಚಾರ್ಯರು ಅರ್ಥಮಾಡಿರುವಂತೆ, ಬ್ರಹ್ಮನು ಇದಂ ಸರ್ವಂ=ಈ ಸಮಸ್ತ ಜಗತ್ತಿಗೂ ಸ್ವಾಮಿಯು ಎಂದು ಅರ್ಥಮಾಡುವುದು ಯುಕ್ತವಾಗುವುದಲ್ಲವೆ ?

ಪ್ರ ಸ್ವಾ.—ಅದೂ ಯುಕ್ತವಾಗುವುದು

ವಾ. ವ —ಹಾಗಾದರೆ ' ಸರ್ವಂ ಖಲ್ವಿದಂ ಬ್ರಹ್ಮ ' ' ಇದಂ ಸರ್ವಂ ಯದಯಮಾತ್ಮಾ ' ' ಬ್ರಹ್ಮೈವೇದಂ ಸರ್ವಂ ' ಆತ್ಮೈವೇದಂ ಸರ್ವಂ' ಇವೇ ಮೊದಲಾದ ಪೂರ್ವದಲ್ಲಿ ಹೇಳಿರುವ ವಾಕ್ಯಗಳಿಗೆ, ಇತರ ಪ್ರಮಾಣಗಳಿಗೆ ಅವಿರುದ್ಧವಾಗಿ, ಮತ್ತು " ಕಾಮೋಽಸ್ಮಿ " ಎಂಬ ವಾಕ್ಯಕ್ಕೆ ಶಂಕರಾಚಾರ್ಯರು ಕಾಮಸ್ವಾಮಿಯು ಎಂದು ಅರ್ಥ ಮಾಡಿರುವ ರೀತಿಯಾಗಿಯೇ ಬ್ರಹ್ಮನು ಸರ್ವ ಜಗತ್ತಿಗೆ ಸ್ವಾಮಿಯು ಎಂಬ ಅರ್ಥವು ಗ್ರಹಿಸುವದಕ್ಕೆ ಯುಕ್ತವಾಗಿರಲಾಗಿ ' ಜಗತ್ತು ಬ್ರಹ್ಮನಲ್ಲಿ ಕಲ್ಪಿತವು ' ಎಂದು ಸರ್ವ ಪ್ರಮಾಣಗಳಿಗೆ ವಿರುದ್ಧವಾದ ಅರ್ಥವನ್ನು ಏಕೆ ಅಂಗೀಕರಿಸಬೇಕು ?

ಪ್ರ. ಸ್ವಾ.—ಉತ್ತರವಿಲ್ಲ.

---

## ವಾದಿಯ ವಿಚಾರಣೆ.

ಪ್ರ . ವ.—ಆಚಾರ್ಯರೆ ! 'ಸರ್ವಂ ಖಲ್ವಿದಂ ಬ್ರಹ್ಮ' ಎಂಬ ಶ್ರುತಿಗೆ ನೀವು ಏನು ಅರ್ಥ ಹೇಳುತ್ತೀರಿ ?

ವಾ. ಸ.—ಇದಂ ಬ್ರಹ್ಮ=ಈ ಬ್ರಹ್ಮವು, ಸರ್ವಂ=ಪೂರ್ಣವಾದುದು ಅಥವಾ ಸರ್ವತ್ರ ವ್ಯಾಪ್ತವಾದುದು; ಅಥವಾ ಸರ್ವಸ್ವಾಮಿಯು ಎಂದು ಇವೇ ಮೊದಲಾದ ಅರ್ಥಗಳನ್ನು ಮಾಡುತ್ತೇವೆ

---

# ಸಂಯಮನೀಪುರದ ಹೈಕೋರ್ಟ್.

## O. S. No 564 of 1927.

| | | |
|---|---|---|
| ವಾದಿ. | } | ಪ್ರತಿವಾದಿ |
| ಸತ್ಯಬೋಧಾಚಾರ್ಯ | | ಗಂಗಾಧರಶಾಸ್ತ್ರಿ |

## ವಾದಿಯ ವಿಚಾರಣೆ.

(ವಾದಗ್ರಸ್ತ ವಿಷಯ ೨ b ಇದರ ವಿಚಾರಣೆ)

೩೧-೬-೧೯೨೭.

ವಾ. ವ.—ಆಚಾರ್ಯರೆ ! ಸ್ವಾಪ್ನ ಪದಾರ್ಥಗಳು ಸತ್ಯವಾದುವುಗಳೇ, ಮಿಥ್ಯೆಯಾದುವುಗಳೇ !

ವಾ. ಸ —ಸ್ವಾಪ್ನ ಪದಾರ್ಥಗಳು ಸತ್ಯವಾದುವುಗಳೆ.

ವಾ ವ —ಈ ವಿಷಯದಲ್ಲಿ ಆಧಾರಗಳೇನು ?

ವಾ. ಸ — ಶ್ರುತಿಗಳು, ಅಬಾಧಿತವಾದ ಪ್ರತ್ಯಕ್ಷಗಳು, ಅನುಮಾನಗಳು ಆಧಾರವಾಗಿವೆ.

ವಾ. ವ.—ಸ್ವಾಪ್ನ ಪದಾರ್ಥಗಳ ಸತ್ಯತ್ವವನ್ನು ತಿಳಿಸಿ ಕೊಡುವ ಶ್ರುತಿಗಳು ಯಾವುವು ?

ವಾ. ಸ —"ಅಥ ರಥಾನ್ ರಥಯೋಗಾನ್ ಪಥಃ ಸೃಜತೇ | ಅಥಾನಂದಾನ್ ಮುದಃ ಪ್ರಮುದಃ ಸೃಜತೇ |... ಅಥ ವೇಶಾಂತಾನ್ ಪುಷ್ಕರಿಣೀಃ ಸ್ರವಂತೀಃ ಸೃಜತೇ | .. ಸ ಹಿ ಕರ್ತಾ" ( ಬೃ ೪-೩-೧೦), "ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ ..ತದೇವ ಶುಕ್ರಂ ತದ್‌ಬ್ರಹ್ಮ ತದೇವಾಮೃತಮುಚ್ಯತೇ | ತಸ್ಮಿನ್ ಲೋಕಾಃ ಶ್ರಿತಾಃ ಸರ್ವೇ ತದುನಾತ್ಯೇತಿ ಕಶ್ಚನ ಏತದ್ವೈ ತತ್" ( ಕಾ, ೫-೮ ) "ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಷ್ವಭಿಪಶ್ಯತಿ | ಸಮೃದ್ಧಿಂ ತತ್ರ ಜಾನೀಯಾತ್ ತಸ್ಮಿನ್ ಸ್ವಪ್ನ ನಿದರ್ಶನೇ" ( ಛಾ. ೫-೨-೨೮ ) "ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ" ( ಐ ೩-೨-೪-, ೭ ) ಇತ್ಯಾದಿ ಅನೇಕ ಶ್ರುತಿಗಳುಂಟು.

ವಾ. ವ.—ಇವುಗಳ ಅರ್ಥವೇನು ?

ವಾ. ಸ.—"ಈಶ್ವರನು ರಥ, ಕುದುರೆ, ಮಾರ್ಗ, ಆನಂದ, ಸರೋವರ ಮುಂತಾದ ಪದಾರ್ಥಗಳನ್ನು ಹುಟ್ಟಿಸುವನು. ಈಶ್ವರನು ಎಲ್ಲರನ್ನು ಸೃಷ್ಟಿಸುವವನು, ಆದುದರಿಂದ ಸ್ವಾಪ್ನ ಪದಾರ್ಥಗಳನ್ನೂ ಸೃಷ್ಟಿಸುವನು" ಎಂದು ಈ ಬೃಹದಾರಣ್ಯ ಶ್ರುತಿಯ ಅರ್ಥವು.

" ಯಾವ ಪರಮಾತ್ಮನು, " ಸ್ವಪ್ನಸ್ಥರಾದ ( ಎಂದರೆ ಮನಸ್ಸೊಂದುಳಿದು ಬೇರೆ ಇಂದ್ರಿಯಗಳು ಉಪರತವಾಗಿರುವ ) ಎಲ್ಲ ಜನರಿಂದ ಅಪೇಕ್ಷಿತ ಪುತ್ರಾದಿಗಳನ್ನು ಉತ್ಪನ್ನ ಮಾಡುತ್ತಾನೆಯೋ ಆ ಪರಮಾತ್ಮನೇ ಸರ್ವ ಜನರ ಆಶ್ರಯನು " ಹೀಗೆಂದು ಈ ಕಾಠಕ ಶ್ರುತಿಯ ಅರ್ಥವು.

" ಸ್ವಪ್ನದಲ್ಲಿ ಸ್ತ್ರೀಯನ್ನು ನೋಡಿದರೆ, ಆ ಪುರುಷನ ಈಪ್ಸಿತವು ಪ್ರಾಪ್ತವಾಗುವುದು " ಹೀಗೆಂದು ಛಾಂದೋಗ್ಯ ಶ್ರುತಿ ತಿಳಿಸುತ್ತದೆ

" ಸ್ವಪ್ನದಲ್ಲಿ ಯಾವ ಪುರುಷನು ಕಪ್ಪುಹಲ್ಲಿನವನನ್ನೂ, ಕಪ್ಪು ಮನುಷ್ಯನನ್ನೂ ನೋಡುತ್ತಾನೆಯೋ, ಆ ನೋಡುವ ಪುರುಷನನ್ನು ಸ್ವಪ್ನದಲ್ಲಿ ನೋಡಿದ ಮನುಷ್ಯನು ಕೊಲ್ಲುತ್ತಾನೆ " ಹೀಗೆಂದು ಐತರೇಯ ಶ್ರುತಿಯ ಅರ್ಥವು. ಹೀಗೆ ಸ್ವಾಪ್ನ ಪದಾರ್ಥಗಳು ಇಷ್ಟಾನಿಷ್ಟ ಪದಾರ್ಥಗಳನ್ನು ಹೊಂದಿಸಿ ಕೊಡುತ್ತವೆ ಈ ಪ್ರಕಾರ ಅರ್ಥಕ್ರಿಯಾಕಾರಿತ್ವವು ( ಅರ್ಥವನ್ನು ಹುಟ್ಟಿಸುವುದು ) ಶ್ರುತಿಯಲ್ಲಿ ಹೇಳಿದೆಯಾದುದರಿಂದ ಸ್ವಾಪ್ನ ಪದಾರ್ಥಗಳು ಸತ್ಯವಾದುವೆಂದೇ ಸಿದ್ಧವಾಗುತ್ತದೆ.

ವಾ ವ—ಸ್ವಾಪ್ನ ಪದಾರ್ಥಗಳಿಗೆ ಸತ್ಯತ್ವವನ್ನು ತಿಳಿಸಿ ಕೊಡುವ ಪ್ರತ್ಯಕ್ಷ ವಾವುದು ?

ವಾ. ಸ—ಎಚ್ಚರಿಕೆಯಲ್ಲಿ ' ಘಟಃ ಸನ್ ಪಟಃ ಸನ್ ' ಇತ್ಯಾದಿ ಪ್ರತ್ಯಕ್ಷದಿಂದ ತಿಳಿದು ಬರುವ ಘಟಪಟಾದಿ ಪದಾರ್ಥಗಳು ಹೇಗೆ ಸತ್ಯವೆಂದು ಸಿದ್ಧವಾಗುತ್ತದೋ ಹಾಗೆಯೇ ಸ್ವಪ್ನಾವಸ್ಥೆಯಲ್ಲಿಯೂ ಕೂಡ " ಗಜಃ ಸನ್, ಘಟಃ ಸನ್ " ಇವು ಸತ್ಯವೆಂದೆಯೇ ತಿಳಿದು ಬರುತ್ತವೆ ಆದುದರಿಂದ ಜಾಗ್ರತ್ ಪದಾರ್ಥಗಳ ಹಾಗೆಯೇ ಸ್ವಪ್ನಾವಸ್ಥೆಯಲ್ಲಿ ಕಂಡು ಬರುವ ಪದಾರ್ಥಗಳು ಸತ್ಯವಾದುವೇ ಎಂದು ಸಿದ್ಧವಾಗುತ್ತದೆ

ವಾ ವ.—ಸ್ವಾಪ್ನ ಪದಾರ್ಥಗಳ ಸತ್ಯತ್ವವನ್ನು ತಿಳಿಸಿ ಕೊಡುವ ಅನುಮಾನವು ಯಾವುದು ?

ವಾ. ಸ.—" ಸ್ವಾಪ್ನಗಜಾದಿಕಂ ಸತ್ಯಂ ಅರ್ಥಕ್ರಿಯಾಕಾರಿತ್ವಾತ್ ಈಶ್ವರ ಸೃಷ್ಟತ್ವಾತ್ ಜಾಗ್ರತ್ಪದಾರ್ಥವತ್ " ಜಾಗ್ರತ್ ಪದಾರ್ಥಗಳು ಈಶ್ವರನಿಂದ ಸೃಷ್ಟವಾಗಿರುವುದರಿಂದಲೂ, ಅವು ಪದಾರ್ಥ ( ಕಾರ್ಯ ) ವನ್ನು ಹುಟ್ಟಿಸುತ್ತವೆಯಾದುದರಿಂದ ಅವು ಹೇಗೆ ಸತ್ಯವಾದುವುಗಳೋ ಹಾಗೆಯೇ ಸ್ವಾಪ್ನ ಗಜಾದಿಗಳೂ ಕೂಡ ಈಶ್ವರನಿಂದ ಸೃಷ್ಟವಾಗಿರುವುದರಿಂದಲು, ಅದರಂತೆಯೇ ಸ್ವಾಪ್ನ ಕಾಮಿನೀ ಸಂಭೋಗಾದಿ ಪದಾರ್ಥಗಳಿಂದ ರೇತೋತ್ಸರ್ಜನಾದಿ ಕಾರ್ಯಗಳು ಉತ್ಪನವಾಗುವುದರಿಂದಲೂ ಸ್ವಾಪ್ನ ಪದಾರ್ಥಗಳು ಸತ್ಯವಾದುವು ಹೀಗೆ ಅನುಮಾನದಿಂದ ಸಿದ್ಧವಾಗುತ್ತದೆ

---

ಈ ಮುಂದಿನ ಪಾನಗಳಿಗೆ ೧೨೩ ರಿಂದ ಅಂಕಿ ಹಾಕತಕ್ಕದ್ದಿದ್ದು ೧೨೯ ರಿಂದ ಅಂಕಿ ಹಾಕಿದೆ ಆದುದರಿಂದ ೧೨೩ ರಿಂದ ೧೨೮ ವರಿಗೆ ಪಾನಗಳಿಲ್ಲೆಂದು ತಿಳಿಯಬಾರದು.

## ಕ್ರಾಸ ಎಕ್ಸ್ಯಾಮಿನೇಶನ್.

ಪ್ರ. ವ—ಆಚಾರ್ಯರೇ ! "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" (ಬ್ರ ಸೂ ೨-೨-೨೯) ಈ ಸೂತ್ರವನ್ನು ನೀವು ನೋಡಿರುವಿರೊ ?

ವಾ. ಸ.—ನೋಡಿದ್ದೇವೆ.

ಪ್ರ ವ.—ಈ ಸೂತ್ರವು ಯಾವುದಕ್ಕೋಸ್ಕರ ಪ್ರವೃತ್ತವಾಗಿದೆ ?

ವಾ ಸ.—"ಘಟಃ ಸನ್ ಪಟಃ ಸನ್" ಮುಂತಾದ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಘಟಪಟಾದಿ ಸಮಸ್ತ ಜಗತ್ತಿನ ಸತ್ಯತ್ವವು ತಿಳಿದು ಬರುತ್ತಿರುವುದರಿಂದ ಜಗತ್ತು ಸತ್ಯವಾದುದೆಂದು ತಿಳಿಯಬೇಕು ಹೀಗೆಂದು ಸೂತ್ರಕಾರರು ಬೌದ್ಧರಿಗೆ ಜಗತ್ಸತ್ಯತ್ವವನ್ನು ಒಪ್ಪಬೇಕೆಂದು ಹೇಳಿದುದಕ್ಕೆ ಜಾಗ್ರತ್ಕಾಲದ ಘಟಪಟಾದಿ ಸಮಸ್ತ ಪದಾರ್ಥಗಳು ಸತ್ಯವೆಂದೇ ತಿಳಿದು ಬರುತ್ತದೆ ಆದುದರಿಂದ ಇವನ್ನು ಸತ್ಯವೆಂದು ಒಪ್ಪಿದರೆ ಸ್ವಪ್ನಾವಸ್ಥೆಯಲ್ಲಿ ಸತ್ಯವೆಂದು ತಿಳಿದು ಬರುವ ಸ್ವಾಪ್ನಪದಾರ್ಥಗಳು, ಜಾಗ್ರತ್ಕಾಲದಲ್ಲಿಯೇ ಸತ್ಯವೆಂದು ತಿಳಿದು ಬರುವ ಶುಕ್ತಿರಜತಾದಿ ಪದಾರ್ಥಗಳು ಇವುಗಳನ್ನೂ ಸತ್ಯವೆಂದೇ ಒಪ್ಪಬೇಕಾಗುವುದು ಅವನ್ನು ಹಾಗೆ ಸತ್ಯವೆಂದು ಯಾರೂ ಒಪ್ಪುವುದಿಲ್ಲ, ಅದರಂತೆಯೇ ಜಾಗ್ರದವಸ್ಥೆಯಲ್ಲಿ ಸತ್ಯವೆಂದು ತಿಳಿದು ಬರುವ ಘಟಪಟಾದಿ ಪದಾರ್ಥಗಳೂ ಸತ್ಯವಾದುವೇ ಎಂದು ತಿಳಿದು ಕೊಳ್ಳುವ ಅವಶ್ಯಕತೆ ಇಲ್ಲ ಹೀಗೆ ಬೌದ್ಧರು ಆಕ್ಷೇಪ ಮಾಡಲು ಆ ಆಕ್ಷೇಪದ ನಿರಾಕರಣಕ್ಕಾಗಿ ಈ ಸೂತ್ರವು ಪ್ರವೃತ್ತವಾಗಿದೆ

ಪ್ರ. ವ—ಈ ಸೂತ್ರದ ಅರ್ಥವೇನು ?

ವಾ ಸ.—ಸ್ವಾಪ್ನ ಪದಾರ್ಥಗಳಿಗೂ, ಶುಕ್ತಿರಜತಾದಿಗಳಿಗೂ ಬಾಧಜ್ಞಾನವು (ಕಾಲತ್ರಯದಲ್ಲಿ ಇಲ್ಲವೆಂಬ ಜ್ಞಾನವು) ಬರುತ್ತದೆಂದು ಸ್ವಪ್ನದಲ್ಲಿ ಸತ್ಯವೆಂದು ತಿಳಿದು ಬರುವ ಸ್ವಾಪ್ನ ಪದಾರ್ಥಗಳೂ, ಜಾಗ್ರತ್ಕಾಲದಲ್ಲಿ ಉಂಟು ಎಂದು ತಿಳಿದು ಬರುವ ಶುಕ್ತಿರಜತಾದಿ ಪದಾರ್ಥಗಳೂ ಸತ್ಯವಾದುವು ಎಂದು ತಿಳಿಯಕೂಡದು ಜಾಗ್ರತ್ಕಾಲದಲ್ಲಿ ಸತ್ಯವಾದುವು ಎಂದು ತಿಳಿದು ಬರುವ ಘಟಪಟಾದಿ ಪದಾರ್ಥಗಳಿಗೆ ಇವು ತ್ರಿಕಾಲದಲ್ಲಿಯೂ ಇಲ್ಲದಿರುವುವು ಎಂಬ ಬಾಧ ಜ್ಞಾನವು ಬರುವುದಿಲ್ಲ ಆದುದರಿಂದ ಜಗತ್ತು ಸತ್ಯವಾದುದೇ ಎಂದು ತಿಳಿಯಬೇಕೆಂಬುದೇ ಅರ್ಥವು.

ಪ್ರ. ವ.—ಆಚಾರ್ಯರೇ ! ಈ ಸೂತ್ರವು ಸ್ವಾಪ್ನ ಪದಾರ್ಥಗಳು ಬಾಧಿತವಾದುವುಗಳು (ಮಿಥ್ಯಾ ಆದುವು) ಎಂದು ತಿಳಿಸಿ ಕೊಡುತ್ತದೆಯೋ ಇಲ್ಲವೊ ?

ವಾ. ಸ.—ಯಾವ ಸ್ವಾಪ್ನ ಪದಾರ್ಥಗಳ ವಿಷಯವಾಗಿ ಇವು ಸುಳ್ಳಾದುವು, ಸತ್ಯವಾದುವಲ್ಲ ಎಂಬ ಬಾಧ ಜ್ಞಾನವು ಬರುತ್ತದೆ ಅವು ಮಿಥ್ಯಾ ಆದವುಗಳು ಎಂದು ಈ ಸೂತ್ರವು ತಿಳಿಸಿ ಕೊಡುತ್ತದೆ, ಸರ್ವ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವು ಎಂದು ತಿಳಿಸಿ ಕೊಡುವುದಿಲ್ಲ.

ಪ್ರ. ವ.—ಸ್ವಾಪ್ನ ಪದಾರ್ಥಗಳಲ್ಲಿಯು ಕೆಲವು ಸ್ವಾಪ್ನ ಪದಾರ್ಥಗಳು ಮಿಥ್ಯಾ ಆದುವುಗಳು ಎಂಬುದನ್ನಾದರೂ ನೀವು ಒಪ್ಪಿರುವಿರಷ್ಟೆ?

ವಾ ಸ—ಯಾವ ಸ್ವಾಪ್ನ ಪದಾರ್ಥಗಳ ಮಿಥ್ಯಾತ್ವ ವಿಷಯದಲ್ಲಿ ಪ್ರಮಾಣ ವುಂಟೋ, ಆ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವುಗಳು ಎಂದು ನಮ್ಮ ಒಪ್ಪಿಗೆ ಇದೆ

ಪ್ರ. ವ—ಕೆಲವು ಸ್ವಾಪ್ನ ಪದಾರ್ಥಗಳ ಮಿಥ್ಯಾತ್ವವನ್ನು ತಿಳಿಸುವ ಪ್ರಮಾಣ ಗಳು ಯಾವವು ?

ವಾ. ಸ.—" ಸ್ವಪ್ನೆ . ಸಚ್ಚಾಸಚ್ಚ ಸರ್ವಂ ಪಶ್ಯತಿ " ( ಷಟ್ಪ್ರ ೪-೫ ) ಈ ಶ್ರುತಿ ಯು, ಸ್ವಪ್ನಾವಸ್ಥೆಯಲ್ಲಿ ಜೀವನು ಸತ್ ಪದಾರ್ಥಗಳನ್ನೂ ಅಸತ್ ಪದಾರ್ಥಗಳನ್ನೂ ನೋಡುತ್ತಾನೆ ಎಂದು ಸ್ಪಷ್ಟವಾಗಿ ತಿಳಿಸುತ್ತದೆ. ಸ್ವಪ್ನಾವಸ್ಥೆಯಲ್ಲಿಯಾಗಲಿ, ಜಾಗ್ರದವಸ್ಥೆಯಲ್ಲಾಗಲಿ ತಿಳಿದು ಬರುವ ಪದಾರ್ಥಗಳಲ್ಲಿ ಯಾವುವು ಬಾಧಿತವಾಗುವುವೋ ಅವು ಮಿಥ್ಯಾ, ಯಾವುವು ಬಾಧಿತವಾಗುವುದಿಲ್ಲವೊ ಅವು ಸತ್ಯ. ಶುಕ್ತಿರಜತಾದಿ ಪದಾರ್ಥಗಳು ಜಾಗ್ರದವಸ್ಥೆಯಲ್ಲಿ ಇರುವ ಹಾಗೆ ತಿಳಿದು ಬಂದರೂ ಬಾಧಿತವಾಗುವುದರಿಂದ ಅವನ್ನು ಸತ್ಯವೆಂದು ತಿಳಿಯಲಾಗದು. ರಥಾ ದಿಗಳು ಸ್ವಾಪ್ನಾವಸ್ಥೆಯಲ್ಲಿ ತಿಳಿದು ಬಂದರೂ ಅವುಗಳಿಗೆ ( ಅಲ್ಲಿ ) ಬಾಧ ಜ್ಞಾನ ಇಲ್ಲವಾದುದರಿಂದ ಸತ್ಯವೆಂದೇ ತಿಳಿಯಬೇಕು.

ಪ್ರ ವ—ಸಕಲ ಸ್ವಾಪ್ನ ಪದಾರ್ಥಗಳ ವಿಷಯವಾಗಿ ಜಾಗ್ರತ್ಕಾಲದಲ್ಲಿ ಬಾಧ ಬರುವುದಿಲ್ಲವೆ ?

ವಾ. ಸ.—ಸಮಸ್ತ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು ಎಂಬ ಬಾಧ ಜ್ಞಾನ ಬರುವುದಿಲ್ಲ. ' ನೇದಂ ಜಾಗ್ರತ್ ಕಿಂತು ಸ್ವಾಪ್ನಮೇವ ' ಎಂದು ಸ್ವಪ್ನಾವಸ್ಥೆಯಲ್ಲಿ ತಿಳಿದು ಬರುವ ಪದಾರ್ಥಗಳು, ಜಾಗ್ರತ್ಕಾ ಲದಲ್ಲಿ ತಿಳಿದು ಬರುವ ಪದಾರ್ಥಗಳಲ್ಲ ಸ್ವಪ್ನಕಾಲದಲ್ಲಿ ಇರುವುವೇ ಎಂದೇ ತಿಳಿಯುತ್ತದೆ ಆದರೆ ' ನಾತ್ರ ರಜತಂ' = ಇಲ್ಲಿ ಬೆಳ್ಳಿ ಇಲ್ಲ, ಎಂಬ ಬಾಧ ಜ್ಞಾನದಂತೆ 'ನಾತ್ರ ವಸ್ತು'=ಇಲ್ಲಿ (ಸ್ವಪ್ನಾವಸ್ಥೆಯಲ್ಲಿ) ಪದಾರ್ಥವೇ ಇಲ್ಲ ಎಂಬ ಬಾಧ ಜ್ಞಾನ ಬರುವುದಿಲ್ಲವಾದಕಾರಣ ಸ್ವಪ್ನಕಾಲದಲ್ಲಿ ತಿಳಿದು ಬರುವ ಪದಾರ್ಥಗಳಲ್ಲಿ ಇವು ಜಾಗ್ರತ್ಕಾಲ ದುವುಗಳೇ ಎಂದು ಜಾಗ್ರತ್ಕಾಲದ ಪದಾರ್ಥಗಳಿಂದ ಅಭೇದವು ತಿಳಿದು ಬರುವುದೋ ಆ ಅಭೇದವಷ್ಟೆ ಬಾಧಿತವಾಗುತ್ತದೆ. ಸ್ವಾಪ್ನ ಪದಾರ್ಥಗಳ ಸ್ವರೂಪವೇ ಬಾಧಿತವಾಗುವುದಿಲ್ಲ .

ಸ್ವಪ್ನಕಾಲದಲ್ಲಿ ಯಾವ ಪದಾರ್ಥಗಳು ಕಂಡು ಬರುವುವೋ ಅವು ಸ್ವಪ್ನಕಾಲದಲ್ಲಿಯುವೆ, ಜಾಗ್ರತ್ಕಾಲದಲ್ಲಿ ಕಂಡು ಬರುವ ಪದಾರ್ಥರೂಪಗಳಲ್ಲವೆಂಬ ಜ್ಞಾನವು ಬಂದಷ್ಟಕ್ಕೇ ಆ ಪದಾರ್ಥಗಳು ಸುಳ್ಳಾದುವುಗಳು ಎಂದು ಹೇಳಿದರೆ—ವೈಶಾಖಮಾಸದಲ್ಲಿ ನೋಡದೆ ಇದ್ದ ಮನುಷ್ಯನ ವಿಷಯವಾಗಿ ಇವನು ನಾನು ವೈಶಾಖಮಾಸದಲ್ಲಿ ನೋಡಿದ ಮನುಷ್ಯನು ಎಂಬ ಜ್ಞಾನವುಂಟಾಗಿ ಕೆಲಹೊತ್ತಿನಮೇಲೆ ಈ ಮನುಷ್ಯನು ವೈಶಾಖಮಾಸದಲ್ಲಿ ನಾನು ನೋಡಿದವನಲ್ಲ ಕಾರ್ತಿಕ ಮಾಸದಲ್ಲಿ ನಾನು ನೋಡಿದ ಮನುಷ್ಯನು ಎಂಬ ಬಾಧ ಜ್ಞಾನ ಬರಲು ಆ ಮನುಷ್ಯನು ಸುಳ್ಳು (ಇಲ್ಲದವನು) ಎಂದು ತಿಳಿಯಬೇಕಾದೀತು. ಆ ಮನುಷ್ಯನೇ ಸುಳ್ಳೆಂದು ಆಗುವುದಿಲ್ಲ. ಆ ಮನುಷ್ಯನ ವಿಷಯದಲ್ಲಿ ತೋರಿದ ವೈಶಾಖಮಾಸವೃತ್ತಿತ್ವವು ಹೇಗೆ ಸುಳ್ಳಾದುದೋ ಹಾಗೆಯೇ ಗಜಾದಿ ಪದಾರ್ಥಗಳು ಸ್ವಪ್ನದಲ್ಲಿ ನೋಡಿದುವುಗಳು ಜಾಗ್ರತ್ಕಾಲದಲ್ಲಿ ನೋಡಿದುವುಗಳಲ್ಲ ಎಂಬ ಬಾಧ ಜ್ಞಾನವು ಬರಲು ಆ ಸ್ವಾಪ್ನ ಪದಾರ್ಥಗಳ ವಿಷಯದಲ್ಲಿ ತಿಳಿದು ಬರುವ ಜಾಗ್ರತ್ಕಾಲವೃತ್ತಿತ್ವವೇ ಸುಳ್ಳಾಗುವುದು. ಸ್ವಪ್ನಕಾಲದಲ್ಲಿ ತಿಳಿದು ಬರುವ ಪದಾರ್ಥಗಳು ಸುಳ್ಳಾದುವುಗಳು ಎಂದು ಆ ಬಾಧ ಜ್ಞಾನದಿಂದ ಸಿದ್ಧವಾಗುವುದಿಲ್ಲ. (ಆ ಬಾಧ ಜ್ಞಾನವು ಸಮಸ್ತ ಸ್ವಾಪ್ನ ಪದಾರ್ಥಗಳು ಮಿಥ್ಯಾ=ಅಸತ್ ಆದುವುಗಳು ಎಂದು ತಿಳಿಸಿ ಕೊಡುವುದಿಲ್ಲ).

ಪ್ರ. ವ.—ಸ್ವಾಪ್ನ ಪದಾರ್ಥಗಳನ್ನು ಹುಟ್ಟಿಸುವ ಉಪಾದಾನ ಕಾರಣವಿಲ್ಲವಷ್ಟೆ?

ವಾ. ಸ.—ಇಲ್ಲವೇಕೆ? ಉಪಾದಾನ ಕಾರಣವುಂಟು

ಪ್ರ ವ.—ಸ್ವಾಪ್ನ ಘಟ, ಪಟ, ಗಜ, ತುರಗಾದಿ ಪದಾರ್ಥಗಳಿಗೆ ಉಪಾದಾನ ಕಾರಣವಾವುದು?

ವಾ. ಸ.—ಪೂರ್ವದಲ್ಲಿ (ಈ ಜನ್ಮದಲ್ಲಿಯೂ, ಜನ್ಮಾಂತರದಲ್ಲಿಯೂ) ಯಾವ ಯಾವ ಪದಾರ್ಥಗಳ ಶ್ರವಣ, ದರ್ಶನ, ಇವುಗಳಿಂದ ಉತ್ಪನ್ನವಾದ ಮನಸ್ಸಿನ ಮೇಲೆ ಸಂಸ್ಕಾರ ಇರುವದೋ ಆ ಸಂಸ್ಕಾರವೇ ಉಪಾದಾನ ಕಾರಣವಾಗಿದೆ.

ಪ್ರ. ವ.—ಸಂಸ್ಕಾರವು ಸ್ವಾಪ್ನ ಪದಾರ್ಥಗಳಿಗೆ ಉಪಾದಾನ ಕಾರಣವೆಂದು ನಿಮಗೆ ಹೇಗೆ ತಿಳಿಯಿತು?

ವಾ. ಸ.—ನಮ್ಮ ಆಚಾರ್ಯರ ಉಪದೇಶದಿಂದಲೂ, ಅದರಂತೆಯೇ ಪ್ರಮಾಣ ವಾಕ್ಯಗಳಿಂದ, ಹೆಚ್ಚಿಗೆ ಹೇಳುವುದೇನು ಶಂಕರಾಚಾರ್ಯರ ಗ್ರಂಥಗಳಿಂದಲೂ ಇದು ತಿಳಿದು ಬರುವುದು, ಇದು ಪ್ರಸಿದ್ಧವಾದ ವಿಷಯವಾಗಿದೆ; ಸರ್ವಸಮ್ಮತವೂ ಆಗಿದೆ.

ಪ್ರ. ವ — ಸ್ವಪ್ನಕಾಲದಲ್ಲಿ ಕಣ್ಣು ಮುಂತಾದ ಇಂದ್ರಿಯಗಳು ಉಪರತ (= ವ್ಯಾಪಾರರಹಿತ) ವಾಗಿರುವುದರಿಂದ ಪದಾರ್ಥಗಳನ್ನು ನೋಡು ವುದು ಮುಂತಾದುವುಗಳು ಹೇಗೆ ಕೂಡುತ್ತದೆ ?

ವಾ ಸ — " ಸ್ವಪ್ನೇ . ಸಚ್ಚ ಅಸಚ್ಚ ಸರ್ವಂ ಪಶ್ಯತಿ " ಈ ಶ್ರುತಿಯು ಸ್ವಾಪ್ನ ಪದಾರ್ಥಗಳನ್ನು ಜೀವನು ಸ್ವಪ್ನಾವಸ್ಥೆಯಲ್ಲಿ ನೋಡುತ್ತಾನೆಂದು ತಿಳಿಸಿ ಕೊಡುತ್ತದೆ ಮತ್ತು ಸರ್ವರಿಗೆ ಸ್ವಾಪ್ನ ಪದಾರ್ಥಗಳ ಜ್ಞಾನವು ಅನುಭವಸಿದ್ಧವಾಗಿರುವುದರಿಂದ ಅವುಗಳ ಜ್ಞಾನವು ಕೂಡು ವುದಿಲ್ಲವೆಂಬ ಆಕ್ಷೇಪಣೆಗೆ ಅವಕಾಶವೇ ಇಲ್ಲ

ಪ್ರ. ವ — ಸ್ವಾಪ್ನ ಪದಾರ್ಥಗಳ ಜ್ಞಾನವು ಅನುಭವಸಿದ್ಧವಾದುದರಿಂದ ಆ ಜ್ಞಾನವು ಉಂಟಾದರೆ ಆಗಲಿ ಅದರ ಕಾರಣವೇನು ಹೇಳಿ ?

ವಾ ವ — ಈ ಪ್ರಶ್ನೆ ಈಗ ಅನುಪಯುಕ್ತವಾಗಿದೆ ಸ್ವಾಪ್ನ ಪದಾರ್ಥಗಳ ಜ್ಞಾನವು ಸ್ವಪ್ನಾವಸ್ಥೆಯಲ್ಲಿ ಸರ್ವರಿಗೆ ಅನುಭವಸಿದ್ಧವಾಗಿದೆ ಆದು ದರಿಂದ ಅದಕ್ಕೆ ಏನಾದರೊಂದು ಕಾರಣವು ಇದ್ದೇಇರಬೇಕು ಈ ಸಂದರ್ಭದಲ್ಲಿ ಅದರ ಹೆಸರನ್ನು ಹೇಳುವಲ್ಲಿ ಪ್ರಯೋಜನವೇನೂ ಇಲ್ಲ ವಾದುದರಿಂದ ಇಂತಹ ಪ್ರಶ್ನೆಯನ್ನು ಹಾಕಕೂಡದೆಂದು ಕೋರ್ಟಿ ನವರು ಅಪ್ಪಣೆ ಕೊಡಿಸಬೇಕು

ಕೋರ್ಟ — ಅವರ ಪ್ರಶ್ನೆಯ ಉತ್ತರವನ್ನು ಆಚಾರ್ಯರು ತಿಳಿದಿದ್ದರೆ ಹೇಳ ಬಹುದು. ಇಲ್ಲವಾದರೆ ನನಗೆ ಗೊತ್ತಿಲ್ಲವೆಂದು ಹೇಳಬೇಕು ಈ ಸಂದರ್ಭದಲ್ಲಿ ಇದು ಉಪಯುಕ್ತ ಅಥವಾ ಅನುಪಯುಕ್ತ ಎಂಬ ವಿಷಯದ ವಿಚಾರಣೆ ಕೋರ್ಟಿನವರಿಗೆ ಸಂಬಂಧಿಸಿದುದು ಆಚಾರ್ಯರೆ ಮುಂದೆ ನಡೆಯಲಿ ! ಪ್ರಶ್ನೆಗೆ ಉತ್ತರ ಹೇಳಿ.

ವಾ ವ — ಪ್ರಭುಗಳ ಆಜ್ಞೆ ಹೀಗೆಯೇ ಅದರೆ ಹೇಳುತ್ತಾರೆ
ಮಿಸ್ಟರ್ ಶರ್ಮಾ ! ಸ್ವಾಪ್ನ ಪದಾರ್ಥಗಳ ದರ್ಶನವು ಕೂಡುವದಿಲ್ಲ ಎಂಬುದು ಆಕ್ಷೇಪಣೆಯೇ ಇಲ್ಲವೆ ಪ್ರಶ್ನವೇ ?

ಪ್ರ ವ — ಆಕ್ಷೇಪವೇ ! ಸಮಾಧಾನವನ್ನು ಹೇಳಿ.

ವಾ, ಸ. — ಸ್ವಪ್ನಕಾಲದಲ್ಲಿ ಮನಸ್ಸೆಂಬ ಇಂದ್ರಿಯಕ್ಕೆ ಉಪರತಿ ಇಲ್ಲ, ಆದುದ ರಿಂದ ಜೀವವು ಮನಸ್ಸಿನಿಂದ ಸ್ವಾಪ್ನ ಪದಾರ್ಥಗಳನ್ನು ತಿಳಿಯುತ್ತದೆ, ಸಾಕ್ಷಿಯಿಂದಲೂ ( ಸ್ವರೂಪ ಭೂತವಾದ ಜ್ಞಾನದಿಂದಲೂ ) ತಿಳಿ ಯಲು ಸಾಧ್ಯವು

ಪ್ರ. ವ. — ಸ್ವಾಪ್ನ ಪದಾರ್ಥಗಳನ್ನು ಉತ್ಪನ್ನ ಮಾಡುವವರು ಯಾರು ?

ವಾ ಸ. — ಈಶ್ವರನೇ ಉತ್ಪನ್ನ ಮಾಡುವವನು ಎಂದು ಶ್ರುತಿಗಳು ಹೇಳುತ್ತವೆ.

ಪ್ರ ವ — ಈಶ್ವರನು ಸಗುಣನೋ ನಿರ್ಗುಣನೋ (ನಿರ್ಧರ್ಮಕನೋ)?

ವಾ ಸ — ಈ ಪ್ರಶ್ನೆ ಈ ಸಂದರ್ಭದಲ್ಲಿ ಬಹಳ ಅನುಪಯುಕ್ತವಾದುದರಿಂದ ಇದರ ಉತ್ತರ ಈಗ ಹೇಳಲಾಗುವುದಿಲ್ಲ.

ಪ್ರ ವ — ಮೈಲಾರ್ಡ! ಬ್ರಹ್ಮನು ನಿರ್ಧರ್ಮಕನು ಧರ್ಮರಹಿತನು ಆದರೆ ವಾದಿ ಹೇಳಿದ ಪ್ರಕಾರ ಅವನಿಗೆ (ಬ್ರಹ್ಮನಿಗೆ) ಸ್ವಪ್ನ ಪದಾರ್ಥಗಳ ಕರ್ತೃತ್ವವು ಕೂಡುವುದಿಲ್ಲ ಆದುದರಿಂದ ಈ ಪ್ರಶ್ನೆಗೆ ಉತ್ತರ ಹೇಳಬೇಕೆಂದು ಪ್ರಭುಗಳು ಆಜ್ಞಾಪಿಸಬೇಕು.

ಕೋರ್ಟ — ಆಚಾರ್ಯರೆ! ಅವರ ಪ್ರಶ್ನೆಗೆ ಉತ್ತರವನ್ನು ಹೇಳಿ?

ವಾ ಸ — ಲೋಕದಲ್ಲಿ ನಿರ್ಧರ್ಮಕವಾದ ಪದಾರ್ಥವೇ ಯಾವುದು ಇಲ್ಲವಾದುದರಿಂದ ನಿರ್ಧರ್ಮಕವಾದ ಪದಾರ್ಥವೇ ಅಪ್ರಸಿದ್ಧವಾಗುವುದರಿಂದ ಬ್ರಹ್ಮನು ಸಗುಣನೇ ಇಲ್ಲವೆ ನಿರ್ಗುಣನೆ (ನಿರ್ಧರ್ಮಕನೇ) ಎಂಬ ಪ್ರಶ್ನೆ ಹುಟ್ಟುವ ಸಂಭವವೆ ಇಲ್ಲ

ಪ್ರ ವ — ಶಶವಿಷಾಣದಲ್ಲಿ ಧರ್ಮವಿದೆಯೋ?

ವಾ. ಸ. — ಹಾ, ಹಾ, ಅಸತ್ವರೂಪ ಧರ್ಮವೂ, ಜ್ಞೇಯತ್ವಾದಿ ಧರ್ಮವೂ ಉಂಟು.

ಪ್ರ. ವ — ಸ್ವಾಪ್ನ ಪದಾರ್ಥಗಳು ಪೂರ್ವಕ್ಷಣದಲ್ಲಿ ಇರುವುದಿಲ್ಲ, ಉತ್ತರಕ್ಷಣದಲ್ಲಿಯೂ ಇರುವುದಿಲ್ಲ, ಮಧ್ಯದಲ್ಲಿಯೇ ಸ್ವಪ್ನಕಾಲದಲ್ಲಿ ಉತ್ಪನ್ನವಾಗಿ ನಷ್ಟವಾಗುವವು ಎಂಬುದು ಹೇಗೆ ಕೂಡುತ್ತದೆ?

ವಾ ಸ — ಮಿಂಚು ಪೂರ್ವಕ್ಷಣದಲ್ಲಿಯೂ, ಉತ್ತರಕ್ಷಣದಲ್ಲಿಯೂ ಇಲ್ಲದುದು, ಮಧ್ಯಕ್ಷಣದಲ್ಲಿಯೇ ಉತ್ಪನ್ನವಾಗಿ ಅದೇ ಕ್ಷಣದಲ್ಲಿ ನಷ್ಟವಾಗುತ್ತದೆ ಇದು ಎಲ್ಲರ ಅನುಭವಸಿದ್ಧವಾದುದು ಅದೇ ಪ್ರಕಾರವಾಗಿ ಸ್ವಾಪ್ನ ಪದಾರ್ಥಗಳು ಕೂಡ ತತ್ಕ್ಷಣವೇ ಉತ್ಪನ್ನವಾಗಿ ನಷ್ಟವಾಗುತ್ತವೆ, ಹೀಗೆಂದು ಹೇಳುವಲ್ಲಿ ಯಾವ ಬಾಧಕವೂ ಇಲ್ಲ, ಆದುದರಿಂದ ಪರಮಾತ್ಮನಿಂದ ಉತ್ಪನ್ನವಾದ ಸ್ವಾಪ್ನ ಪದಾರ್ಥಗಳು ಸತ್ಯವಾದುವುಗಳೇ.

ಪ್ರತಿವಾದೀ ವಕೀಲರು ವಿಚಾರಣೆಯನ್ನು ಮುಗಿಸಿದರು, (ಮುಂದೆ ನಡಿಸಲಿಲ್ಲ)

---

# ಸಂಯಮನೀಪುರದ ಹೈಕೋರ್ಟ್.

## O S. No 564 of 1927.

### (೨. b ಇಶ್ಯುವಿನ ಮೇಲೆ) ಪ್ರತಿವಾದಿಯ ಸಾಕ್ಷಿದಾರನ ವಿಚಾರಣೆ.

ತಾ ೧೫ ೬-೧೯೨೮

ಪ್ರ ವ—ಸ್ವಪ್ನದಲ್ಲಿ ಕಂಡು ಬರುವ ಪದಾರ್ಥಗಳು ಸತ್ಯವಾದುವುಗಳೇ, ಅಥವಾ ಮಿಥ್ಯೆಯಾದುವುಗಳೇ ?

ಪ್ರ ಸಾ—ಸ್ವಪ್ನದಲ್ಲಿ ಕಂಡು ಬರುವ ಪದಾರ್ಥಗಳು ಸುಳ್ಳಾದುವುಗಳು.

ಪ್ರ. ವ—ಮಿಥ್ಯಾ ಎಂದರೇನು ?

ಪ್ರ ಸಾ—ರಜ್ಜುವಿನಲ್ಲಿ ತೋರಿ ಬರುವ ಸರ್ಪದ ಹಾಗೆ ಮೂರು ಕಾಲದಲ್ಲಿಯೂ ಇಲ್ಲದಿರುವ ಪದಾರ್ಥ.

ಪ್ರ. ವ.—ಸ್ವಾಪ್ನ ಪದಾರ್ಥಗಳು, ಜಾಗ್ರತ್ಕಾಲದಲ್ಲಿ ತಿಳಿದು ಬರುವ ಪದಾರ್ಥಗಳಂತೆ ಹೌದೋ ಅಲ್ಲವೋ.

ಪ್ರ. ಸಾ.—ಸ್ವಾಪ್ನ ಪದಾರ್ಥಗಳು ಜಾಗ್ರತ್ ಪದಾರ್ಥಗಳ ಹಾಗೆ ಅಲ್ಲ,

ಪ್ರ ವ.—ಹಾಗೇಕೆ ಅಲ್ಲ ?

ಪ್ರ. ಸಾ.—ಸೂತ್ರಕಾರರು "ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್" (ಬ್ರ ಸೂ ೩-೨-೩) ಈ ಸೂತ್ರದಲ್ಲಿ (೧) ಸ್ವಾಪ್ನಪದಾರ್ಥಗಳು ಹುಟ್ಟಲಿಕ್ಕೆ ಬೇಕಾದ ಉಪಾದಾನ ಕಾರಣಗಳೂ, ಮತ್ತು ಜಾಗ್ರತ್ ಪದಾರ್ಥಗಳ ಹಾಗೆ ಇರಲು ಯೋಗ್ಯವಾದ (೨) ದೇಶ (೩) ಕಾಲ ಇವು ಇಲ್ಲ, (೪) ನಿಮಿತ್ತ ಕಾರಣವೂ ಇಲ್ಲ, (೫) ಆ ಪದಾರ್ಥಗಳ ಜ್ಞಾನವು ಉಂಟಾಗಲು ಸಾಧನಗಳಿಲ್ಲ, (೬) ಸ್ವಾಪ್ನ ಪದಾರ್ಥಗಳು ಕಾಲತ್ರಯದಲ್ಲಿಯೂ ಇಲ್ಲವೆಂಬ ಬಾಧ ಜ್ಞಾನವು ಬರುತ್ತದೆ. ಆದುದರಿಂದ ಆ ಸ್ವಾಪ್ನ ಪದಾರ್ಥಗಳು ಮಿಥ್ಯಾ (ಮಾಯಾಕಲ್ಪಿತ) ಆದುವುಗಳೆಂದು ಹೇಳಿದುದರಿಂದ, ಆ ಸ್ವಾಪ್ನ ಪದಾರ್ಥಗಳು ಮಿಥ್ಯಾ (ಯಾವ ಕಾಲದಲ್ಲಿಯೂ ಇಲ್ಲದುವುಗಳು) ಆದುವುಗಳು ಜಾಗ್ರತ್ಕಾಲದ ಪದಾರ್ಥಗಳಂತೆ ಅಲ್ಲ.

ಪ್ರ. ವ.—ಸ್ವಾಪ್ನ ಪದಾರ್ಥಗಳು ಕಾಲತ್ರಯದಲ್ಲಿಯೂ ಇಲ್ಲದುವುಗಳು ಎಂಬ ಬಾಧಜ್ಞಾನವು ಯಾವ ಪ್ರಮಾಣಗಳಿಂದ ಹುಟ್ಟುತ್ತದೆ

ಪ್ರ. ಸಾ.—ಶ್ರುತಿಗಳಿಂದ ಉತ್ಪನ್ನವಾಗುತ್ತದೆ

ಪ್ರ. ವ.—ಆ ಶ್ರುತಿಗಳು ಯಾವವು ?

ಪ್ರ. ಸಾ —"ನ ತತ್ರ ರಥಾ ರಥಯೋಗಾ ನ ಪಂಥಾನೋ ಭವಂತಿ...........
ನ ತತ್ರ ಆನಂದಾ ಮುದಃ ಪ್ರಮುದೋ ಭವಂತಿ...........ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ ( ಬೃ—೪-೩-೧೦ ) ಎಂಬೀ ಶ್ರುತಿ.

ಪ್ರ. ವ — ಈ ಶ್ರುತಿಯ ಅರ್ಥವೇನು ?

ಪ್ರ ಸಾ.—ತತ್ರ=ಆ ಸ್ವಪ್ನ ಕಾಲದಲ್ಲಿ ರಥವಿದ್ದಿಲ್ಲ, ರಥಗಳಿಗೆ ಹೂಡುವ ಕುದುರೆಗಳಿಲ್ಲ, ಮಾರ್ಗವಿಲ್ಲ, ಸುಖಾದಿ ಇಲ್ಲ, ಎಂದು ಅರ್ಥವು.

ಪ್ರ. ವ —ಈ ಶ್ರುತಿಯಿಂದ ಏನು ಸಿದ್ಧವಾಗುತ್ತದೆ ?

ಪ್ರ ಸಾ —ಸ್ವಪ್ನಾವಸ್ಥೆಯಲ್ಲಿ ಯಾವುದೂ ಪದಾರ್ಥವಿಲ್ಲವೆಂದು ಸಿದ್ಧವಾಗುತ್ತದೆ

ಪ್ರ ವ – ಇದರಿಂದ ಸ್ವಾಪ್ನ ಪದಾರ್ಥಗಳ ಮಿಥ್ಯಾತ್ವವು ಹೇಗೆ ಸಿದ್ಧವಾಗುತ್ತದೆ.

ಪ್ರ ಸಾ.—ಮಿಥ್ಯಾ ಎಂದರೆ ಯಾವ ಕಾಲದಲ್ಲಿಯೂ ಇಲ್ಲದಿರುವ ಪದಾರ್ಥವು. ಸ್ವಾಪ್ನ ಪದಾರ್ಥಗಳು ಯಾವ ಕಾಲದಲ್ಲಿಯೂ ಇಲ್ಲದಿರುವುದರಿಂದ ಅವು ಸುಳ್ಳಾಗುತ್ತವೆ

ಪ್ರ ವ —ಸ್ವಾಪ್ನ ಪದಾರ್ಥಗಳನ್ನು ಉತ್ಪನ್ನ ಮಾಡುವ ಉಪಾದಾನ† ಕಾರಣಗಳು ಮತ್ತು ನಿಮಿತ್ತ§ಕಾರಣಗಳು ಇಲ್ಲೆಂಬುವದೇಕೆ ?

ಪ್ರ ಸಾ —ಸ್ವಪ್ನ ಕಾಲದಲ್ಲಿ ಸ್ವಾಪ್ನ ಪದಾರ್ಥಗಳನ್ನು ಒಂದು ನಿಮಿಷದಲ್ಲಿ ಉತ್ಪನ್ನ ಮಾಡುವ ಸಮರ್ಥನಾದ ನಿಮಿತ್ತಕಾರಣ ಪುರುಷನು, ಮತ್ತು ಸ್ವಾಪ್ನ ಪದಾರ್ಥಗಳ ಉಪಾದಾನ ಕಾರಣ—ರಥಾದಿ ರೂಪಪರಿಣಾಮಹೊಂದುವ ಕಾಷ್ಠಾದಿರೂಪಪದಾರ್ಥ ಇಲ್ಲವಾದುದರಿಂದ ಸ್ವಾಪ್ನ ಪದಾರ್ಥಗಳಿಗೆ ನಿಮಿತ್ತಕಾರಣವೂ, ಉಪಾದಾನಕಾರಣವೂ ಇಲ್ಲ.

ಪ್ರ. ವ —ಸ್ವಾಪ್ನ ಪದಾರ್ಥಗಳಿಗೆ ಯೋಗ್ಯವಾದ ದೇಶ ಕಾಲ ಇವು ಏಕೆ ಇಲ್ಲ ?

ಪ್ರ. ಸಾ —ರಾತ್ರಿ ಮಲಗಿದ ಮನುಷ್ಯನು, ಸ್ವಪ್ನದಲ್ಲಿ ಹಗಲನ್ನು ನೋಡುತ್ತಿರುತ್ತಾನೆ, ಆದರೆ ಆ ಕಾಲದಲ್ಲಿ ಹಗಲು ಇರುವುದಿಲ್ಲ ಹಾಗೆಯೇ ಯಾವ ರಥಾದಿ ಪದಾರ್ಥಗಳನ್ನು ದೇಹದಲ್ಲಿದ್ದು ನೋಡುತ್ತಿರುತ್ತಾನೋ ಆ ರಥಾದಿ ಪದಾರ್ಥಗಳು ಇರಲು ಸಾಕಾಗುವಷ್ಟು ಸ್ಥಳವು ಇರುವುದಿಲ್ಲ. ಆದುದರಿಂದ ಸ್ವಾಪ್ನ ಪದಾರ್ಥಗಳಿಗೆ ಯೋಗ್ಯವಾದ ಕಾಲ ದೇಶವಿಲ್ಲ

---

† ಉಪಾದಾನಕಾರಣ ಎಂದರೆ—ಯಾವ ಕಾರಣವು ಕಾರ್ಯರೂಪದಲ್ಲಿ ಪರಿಣತವಾಗುತ್ತದೆಯೋ ಅದು ಉದಾಹರಣೆ —ಮಣ್ಣೇ ಕೊಡವಾಗಿ ಪರಿಣತ ( ವಿಕೃತ ) ಆಗುವುದರಿಂದ ಮಣ್ಣು ಉಪಾದಾನಕಾರಣವು.

§ ನಿಮಿತ್ತಕಾರಣ— ಯಾವ ಕಾರಣವು ಕಾರ್ಯರೂಪದಿಂದ ಪರಿಣತವಾಗದೆ ಪದಾರ್ಥದ ಉತ್ಪತ್ತಿ ಮಾಡುತ್ತದೆಯೋ ಅದು ಉದಾಹರಣೆ ಕುಂಬಾರನು ತಾನೇ ಘಟರೂಪದಿಂದ ಪರಿಣತವಾಗದೆ ಘಟವನ್ನು ಉತ್ಪನ್ನಮಾಡುವನು ಆದುದರಿಂದ ಅವನು ನಿಮಿತ್ತಕಾರಣನು.

ಪ್ರ ವ.—ಸ್ವಾಪ್ನ ಪದಾರ್ಥಗಳ ಜ್ಞಾನವು ಏಕೆ ಇಲ್ಲ ?

ಪ್ರ ಸಾ.—ಪದಾರ್ಥಗಳ ಜ್ಞಾನವನ್ನು ಹುಟ್ಟಿಸುವ ಕಣ್ಣು ಮುಂತಾದ ಇಂದ್ರಿಯಗಳು ಸ್ವಪ್ನಕಾಲದಲ್ಲಿ ವ್ಯಾಪಾರರಹಿತವಾಗಿರುತ್ತವೆ ಆದುದರಿಂದ ಸ್ವಾಪ್ನ ಪದಾರ್ಥಗಳ ಜ್ಞಾನವು ಹುಟ್ಟುವದಿಲ್ಲ

ಹೀಗೆ ಸ್ವಾಪ್ನ ಪದಾರ್ಥಗಳ ಜ್ಞಾನಕ್ಕೆ ಕಾರಣ, ಒಂದೇ ನಿಮಿಷದಲ್ಲಿ ಉತ್ಪನ್ನ ಮಾಡುವ ಸಮರ್ಥನಾದ ಕರ್ತೃ, ಸ್ವಾಪ್ನ ರಥಾದಿ ರೂಪಪದಾರ್ಥಗಳಾಗಿ ಪರಿಣಿತವಾಗುವ ಕಾಷ್ಠಾದಿ ಉಪಾದಾನ ಕಾರಣವಾದ ಪದಾರ್ಥಗಳು ಇಲ್ಲ ಯೋಗ್ಯವಾದ ದೇಶ ಕಾಲವೂ ಇಲ್ಲ ಮತ್ತು ಸ್ವಾಪ್ನ ಪದಾರ್ಥಗಳು ಇಲ್ಲವೆಂದು ತಿಳಿಸುವ ಬಾಧ ಜ್ಞಾನವನ್ನು ಉತ್ಪನ್ನ ಮಾಡುವ ಶ್ರುತಿಯುಂಟು, ಆದುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯಾ=ಕಾಲತ್ರಯದಲ್ಲಿ ಇಲ್ಲವೆಂದು ಸಿದ್ಧವಾಗುತ್ತದೆ

---

## ಕ್ರಾಸ್ ಏಕ್ಝಾಮಿನೇಶನ್

ವಾ ವ —“ ನ ತತ್ರ ರಥಾಃ ” ಈ ಶ್ರುತಿಯ ಉತ್ತರ ವಾಕ್ಯವನ್ನು ನೋಡಿದ್ದೀರೇನು ?

ಪ್ರ. ಸಾ.—ನೋಡಿದ್ದೇನೆ

ವಾ ವ —ಆ ಶ್ರುತಿ ವಾಕ್ಯವನ್ನು ಹೇಳಿರಿ

ಪ್ರ ಸಾ —ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ ನ ತತ್ರಾನಂದಾ ಮುದಃ ಪ್ರಮುದೋ ಭವಂತ್ಯಥಾನಂದಾನ್ಮುದಃ ಪ್ರಮುದಃ ಸೃಜತೇ=ನ ತತ್ರ ವೇಶಾಂತಾಃ ಪುಷ್ಕರಿಣ್ಯಃ ಸ್ರವಂತ್ಯೋ ಭವಂತಿ ಅಥ ವೇಶಾಂತಾನ್ ಪುಷ್ಕರಿಣೀಃ ಸ್ರವಂತೀಃ ಸೃಜತೇ ಸಹಿ ಕರ್ತಾ ( ಬೃ–೪–೩–೧೦ )

ವಾ ವ.— ಈ ಶ್ರುತಿಯ ಅಭಿಪ್ರಾಯವೇನು ?

ಪ್ರ ಸಾ —ಸ್ವಪ್ನಾವಸ್ಥೆಯಲ್ಲಿ ರಥ, ಕುದುರೆ, ಮಾರ್ಗ ಮುಂತಾದ ಪದಾರ್ಥಗಳು ಇರಲಿಲ್ಲ ಅಥ=ಅನಂತರ, ಪರಮಾತ್ಮನು ರಥ. ಕುದುರೆ ಮುಂತಾದುವುಗಳನ್ನು ನಿರ್ಮಾಣ ಮಾಡುತ್ತಾನೆ. ಸಹಿ ಕರ್ತಾ=ಆ ಪರಮಾತ್ಮನು ಸಮಸ್ತ ಪದಾರ್ಥಗಳನ್ನು ಸೃಷ್ಟಿಸುವವನು. ಆದುದರಿಂದ ಸ್ವಾಪ್ನ ಪದಾರ್ಥಗಳನ್ನು ಅವನೇ ಸೃಷ್ಟಿಸುವವನು ಎಂದು ಅಭಿಪ್ರಾಯವು

ವಾ ಪ —' ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ' ಈ ಶ್ರುತಿಯು ಯಾವ ಉಪನಿಷತ್ತಿನಲ್ಲಿದೆ? ಈ ಶ್ರುತಿಯ ಅಭಿಪ್ರಾಯವೇನು?

ಪ್ರ. ಸಾ.— ಈ ಶ್ರುತಿಯು ಕಾಠಕದಲ್ಲಿದೆ(೫-೮) ಜೀವನು ನಿದ್ದೆ ಹೋಗುತ್ತಿರಲು ಯಾವ ಪುರುಷನು (ಪರಮಾತ್ಮನು) ಎಚ್ಚರವಾಗಿರುತ್ತ ಜನರು ಬಯಿಸುವ ಪುತ್ರಾದಿಗಳನ್ನು ನಿರ್ಮಾಣಮಾಡುವನೋ ಎಂದು ಶ್ರುತಿಯ ಅಭಿಪ್ರಾಯವು

ವಾ. ವ — ಈ ಎರಡು ಶ್ರುತಿಗಳು ಜಾಗ್ರತ್ ಪದಾರ್ಥಗಳಂತೆ ಸ್ವಾಪ್ನ ಪದಾರ್ಥಗಳನ್ನು ಹುಟ್ಟಿಸುವವನು ಪರಮಾತ್ಮನೆಂದು ಹೇಳಿದುವಷ್ಟೆ?

ಪ್ರ ಸಾ — ಹೌದು ಈಶ್ವರನೇ ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿಸುವವನು ಎಂದು ಹೇಳಿದೆ

ವಾ. ಪ — ನಿಮಗೆ ಎಷ್ಟು ಜನ ಮಕ್ಕಳಿದ್ದಾರೆ!

ಪ್ರ ಸಾ — ಮೂವರಿದ್ದಾರೆ

ವಾ. ವ — ನಿಮ್ಮ ಲಗ್ನವಾಗುವುದಕ್ಕೆ ಮುಂಚೆ ಮಕ್ಕಳಿದ್ದರೋ?

ಪ್ರ ಸಾ — ಮದುವೆ ಆಗುವ ಮುಂಚೆ ಮಕ್ಕಳಿದ್ದರೆಂದರೇನು? ಇರಲಿಲ್ಲ

ವಾ ವ — ಆ ಮಕ್ಕಳು ಯಾವಾಗ ಹುಟ್ಟಿದರು?

ಪ್ರ ಸಾ — ಮದುವೆಯಾದ ೫-೬ ವರ್ಷಗಳ ಮೇಲೆ ಹುಟ್ಟಿದರು

ವಾ ವ — ನಿಮ್ಮ ಮಕ್ಕಳು ಸ್ವಾಪ್ನ ಪದಾರ್ಥಗಳ ಹಾಗೆ ಮಿಥ್ಯೆಯಾದುವುಗಳೇನು?

ಪ್ರ ಸಾ.— ಆ ಮಕ್ಕಳು ಸ್ವಾಪ್ನ ಪದಾರ್ಥಗಳ ಹಾಗೆ ಮಿಥ್ಯಾ ಹೇಗೆ ಆದಾವು? ಅವು ಇವೆಯಷ್ಟ?

ವಾ ಪ — ಆ ಮಕ್ಕಳು ಮದುವೆ ಆಗುವ ಮುಂಚೆ ಇರಲಿಲ್ಲವೆಂದು ಮಿಥ್ಯಾ ಏಕೆ ಆಗುವದಿಲ್ಲ?

ಪ್ರ ಸಾ.— ಆ ಮಕ್ಕಳು ಮದುವೆ ಆಗುವುದಕ್ಕೆ ಮುಂಚೆ ಇರದೆ ಲಗ್ನಾನಂತರ ಹುಟ್ಟಿ ಈಗ ಇವೆ ಆದುದರಿಂದ ಮೂರು ಕಾಲದಲ್ಲಿ ಇಲ್ಲವಂದು ಹೇಳುವುದಕ್ಕೆ ಬರುವುದಿಲ್ಲ. ಆದುದರಿಂದ ಅವರ ವಿಷಯವಾಗಿ ಮಿಥ್ಯಾತ್ವವು ( ಯಾವಾಗಲೂ ಇರದುದು ) ಕೂಡುವುದಿಲ್ಲ

ವಾ ವ —' ನ ತತ್ರ ರಥಾ ನ ರಥಯೋಗಾ. .....ಅಥ ರಥಾನ್' ಈ ಶ್ರುತಿಯು ಸ್ವಾಪ್ನ ಪದಾರ್ಥಗಳು, ಸ್ವಪ್ನಾವಸ್ಥೆಯ ಮುಂಚೆ ಇದ್ದಿಲ್ಲ, ಅಥ=ಆ ಮೇಲೆ, ಸ್ವಪ್ನಕಾಲದಲ್ಲಿ ಹುಟ್ಟಿವೆ ಎಂದು ತಿಳಿಸಿ ಕೊಡುವುದರಿಂದ ಸ್ವಾಪ್ನ ಪದಾರ್ಥಗಳಿಗೆ ಮಿಥ್ಯಾತ್ವವು ( ಮೂರು ಕಾಲದಲ್ಲಿ ಇಲ್ಲದುದು ) ಕೂಡುವುದಿಲ್ಲವಷ್ಟೆ?

ಪ್ರ ಸಾ — ಉತ್ತರವಿಲ್ಲ.

ವಾ. ವ—' ಅಥ ರಥಾನ್ ರಥಯೋಗಾನ್ ಪಥಃ ಸೃಜತೆ ಅಥ ಮುದಃ . ಸ ಹಿ ಕರ್ತಾ '' ಈ ಶ್ರುತಿಯ ಅರ್ಥವೇನು ?

ಪ್ರ ಸಾ—ಪರಮಾತ್ಮನು ಸ್ವಪ್ನ ಕಾಲದಲ್ಲಿ ರಥಾದಿಗಳ ಸೃಷ್ಟಿ ಮಾಡುತ್ತಾನೆಂದು ಅರ್ಥವು

ವಾ. ವ.—" ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ'' ಈ ಶ್ರುತಿಯ ಅರ್ಥವೇನು ?

ಪ್ರ ಸಾ—ಜನರು ನಿದ್ರಿಸುತ್ತಿರುವಾಗ ( ನಿದ್ದೆ ಹೋದಾಗ್ಗೆ ) ಪರಮಾತ್ಮನು ಜನರು ಅಪೇಕ್ಷಿಸಿದ ಪುತ್ರಾದಿಗಳನ್ನು ನಿರ್ಮಾಣ ಮಾಡುತ್ತಾನೆಂದು ಅರ್ಥವು

ವಾ ವ—ಈ ಶ್ರುತಿಯು ಸ್ವಪ್ನ ಪದಾರ್ಥಗಳ ಸೃಷ್ಟಿ ಮಾಡುವವನು ಯಾರೆಂದು ಹೇಳಿತು ?

ಪ್ರ ಸಾ.—ಈಶ್ವರನು ಸ್ವಪ್ನ ಪದಾರ್ಥಗಳನ್ನು ಸೃಷ್ಟಿಸುವವನು ಎಂದು ಹೇಳಿತು

ವಾ. ವ—" ವಿಕರಣತ್ವಾನ್ನೇತಿಚೇತ್ತದುಕ್ತಂ'' ( ಬ್ರ ಸೂ. ೨-೧-೩೧ ) ಈ ಸೂತ್ರ ಭಾಷ್ಯದ ಭಾಮತೀ ವ್ಯಾಖ್ಯಾನವನ್ನು ನೋಡಿರುವಿರೋ ?

ಪ್ರ. ಸಾ—ನೋಡಿದ್ದೇನೆ

ವಾ ವ—ಅದರಲ್ಲಿ ಏನು ಹೇಳಿದೆ ?

ಪ್ರ, ಸಾ.—† ಬಾಹ್ಯಕಾಷ್ಠಾದಿಗಳ ಅಪೇಕ್ಷೆಯಿಲ್ಲದೆ, ದೇಹದಲ್ಲಿರುವ ಒಳ ಕಾರಣದಿಂದೆಯೇ ( ವಾಸನಾದಿಂದೆಯೇ ) ರಥಾದಿಗಳ ಸೃಷ್ಟಿ ಕಾಣುತ್ತದೆ ಆ ಸೃಷ್ಟಿ ಇಲ್ಲವೆಂದು ಅದರ ವಿಷಯವಾಗಿ ಅಪಲಾಪ ಮಾಡಲು ಬರುವುದಿಲ್ಲವೆಂದು ಹೇಳಿದೆ

ವಾ. ವ.—"ಅಥ ರಥಾನ್ '' ಈ ಉಪನಿಷತ್ತಿನ ಶಂಕರಭಾಷ್ಯವನ್ನು ನೋಡಿರುವಿರೊ ?

ಪ್ರ ಸಾ—ನಿಶ್ಚಯವೂ ಪಾರ ಹೇಳುವ ನಮ್ಮನ್ನು ' ನೋಡಿರುವಿರೋ ' ಎಂದು ಏಕೆ ವಿಚಾರಿಸುವಿರಿ ? ನೋಡಿಯೇ ಇದ್ದೇವೆ

ವಾ ವ—ಅಲ್ಲಿ ರಥಾದಿಗಳ ಉಪಾದಾನ ಕಾರಣವು ಯಾವುದೆಂದು ಹೇಳಿದೆ ?

ಪ್ರ ಸಾ—' ಅಥ ವೇಶಾಂತಾದೀನ್ ಸೃಜತೇ ವಾಸನಾಮಾತ್ರರೂಪಾನ್ '' ( ಶಂ ಭಾ ) ' ವಾಸನಾಮಯೀ ಸೃಷ್ಟಿಃ ( ಆನಂ ) ಇತ್ಯಾದಿ ವಾಕ್ಯಗಳಲ್ಲಿ ರಥಾದಿಗಳು, ಮನೋವೃತ್ತಿರೂಪ ವಾಸನಾಪರಿಣತ ವಾದುವುಗಳು ( ವಾಸನಾ ಉಪಾದಾನ ಕಾರಣವು) ಎಂದು ಹೇಳಿದೆ

---

† ತದನಪೇಕ್ಷಾಂತರ ( ಬಾಹ್ಯಕಾರಣಾನಪೇಕ್ಷಾಂತರ ) ಕರಣಮಾತ್ರಸಾಧ್ಯಾ ದೃಷ್ಟಾ ಸ್ವಪ್ನೇ ರಥಾದಿಸೃಷ್ಟಿರಶಕ್ಯಾಪಹ್ನೋತುಂ| ( ಭಾಮತೀ )

ವಾ ವ —ಬಾಹ್ಯ ರಥಾದಿಗಳಿಗೆ ಕಾಷ್ಠಾದಿಗಳು ಹೇಗೆ ಉಪಾದಾನ ಕಾರಣ ವಾಗಿವೆಯೋ ಹಾಗೆಯೇ ಸ್ವಪ್ನದಲ್ಲಿ ಕಂಡು ಬರುವ ರಥಾದಿಗಳಿಗೆ ಮನೋವೃತ್ತಿರೂಪವಾಸನಾ ( ಸಂಸ್ಕಾರವು ) ಉಪಾದಾನ ಕಾರಣ ವಾಗಿದೆ ಮತ್ತು ಪರಮಾತ್ಮನು ನಿಮಿತ್ತಕಾರಣನೆಂದು ಭಾಷ್ಯಾದಿ ಗ್ರಂಥಗಳಿಂದ ಸಿದ್ಧವಾದ ಮೇಲೆ, ಸ್ವಪ್ನದಲ್ಲಿ ರಥಾದಿಗಳ ಸೃಷ್ಟಿ ಮಾಡುವವನಿಲ್ಲ, ಉಪಾದಾನ ಕಾರಣವು ( ರಥಾಕಾರವಾಗಿ ಪರಿಣತ ವಾಗುವ ಕಾರಣವು ) ಇಲ್ಲವೆಂದು ಹೇಗೆ ಹೇಳುತ್ತೀರಿ ?

ಪ್ರ. ಸಾ.— ಉತ್ತರವಿಲ್ಲ

ವಾ. ವ.—ಸ್ವಪ್ನದಲ್ಲಿ ನಿರ್ಮಾಣಮಾಡಿದ ಪದಾರ್ಥಗಳ ಉಪಾದಾನಕಾರಣ ವಾಗಿರುವ ಸಂಸ್ಕಾರವು ಎಲ್ಲಿರುತ್ತದೆ ?

ಪ್ರ ಸಾ —ಮನಸ್ಸಿನಲ್ಲಿರುತ್ತದೆ

ವಾ ವ.—ಆ ಮನಸ್ಸಿನಲ್ಲಿರುವ ವಾಸನಾದಿಂದ ಪರಿಣತವಾಗಿರುವ ರಥಾದಿ ಗಳು, ಮನಸ್ಸಿಗೆ ಆಧಾರವಾದ ದೇಹದಲ್ಲಿರಲು ಯೋಗ್ಯವಾಗಿವೆ ಯಷ್ಟೆ ? ( ವಾಸನಾಪರಿಣತವಾಗಿರುವ ರಥಾದಿಗಳು ಇರುವುದಕ್ಕೆ ದೇಹವು ಯೋಗ್ಯವಾದ ದೇಶವಾಗುತ್ತದೆಯಲ್ಲವೆ ) ?

ಪ್ರ ಸಾ —ವಾಸನಾಪರಿಣತವಾದ ರಥಾದಿಗಳು ಇರಲು ದೇಹವು ಯೋಗ್ಯವಾದ ದೇಶವಾಗುವದು

ವಾ ವ.—ಸ್ವಪ್ನಾವಸ್ಥೆಯಲ್ಲಿ ಪರಮಾತ್ಮನು ರಥಾದಿಗಳನ್ನು ಹೇಗೆ ಉತ್ಪನ್ನ ಮಾಡುತ್ತಾನೆಯೋ ಹಾಗೆಯೇ ವಸಂತಕಾಲ, ರಾತ್ರಿ, ಮುಂತಾದ ಪದಾರ್ಥಗಳನ್ನು ಉತ್ಪನ್ನ ಮಾಡಬಹುದಷ್ಟೆ ? ( ಮಾಡಿಯಾನಲ್ಲವೆ ) ?

ಪ್ರ. ಸಾ.—ಸರ್ವಪದಾರ್ಥಗಳ ಸೃಷ್ಟಿಮಾಡುವ ಪರಮಾತ್ಮನು, ವಸಂತಕಾಲ, ರಾತ್ರಿ ಮುಂತಾದುವುಗಳನ್ನು ನಿರ್ಮಾಣ ಮಾಡಬಲ್ಲನು.

ವಾ. ವ —ನಾವು ಗ್ರೀಷ್ಮಕಾಲದಲ್ಲಿ ಹಗಲು ಮಲಗಿರಲು, ಪರಮಾತ್ಮನಿಂದ ನಿರ್ಮಿತವಾಗಿರುವ ವಸಂತಕಾಲ, ರಾತ್ರಿ ಇವುಗಳನ್ನು ನೋಡಲು ಬಾಧಕವಿಲ್ಲವಷ್ಟೆ ?

ಪ್ರ ಸಾ.— ಸ್ವಪ್ನದಲ್ಲಿ ನಿರ್ಮಿತವಾದ ವಸಂತಕಾಲವೂ, ರಾತ್ರಿಯೂ ಕಂಡು ಬರಲು ಬಾಧಕವಿಲ್ಲ

---

ವಾ. ವ.—ಮೈ ಲಾರ್ಡ "ಮಾಯಾಮಾತ್ರಂ" ಈ ಸೂತ್ರದ ವ್ಯಾಖ್ಯಾನದಲ್ಲಿ ಶಂಕರಾಚಾರ್ಯರು ಸ್ವಾಪ್ನ ಪದಾರ್ಥಗಳು ಮಿಥ್ಯಯಾದುವು ಗಳೆಂದು ತೋರಿಸಲಿಕ್ಕೆ ಹೇಳಿದ ಆರು ಕಾರಣಗಳು ಅಯುಕ್ತವೂ ಸ್ವವ್ಯಾಹತವು (ತಾವು ಒಪ್ಪಿದ ಮಾತಿಗೆ ವಿರುದ್ಧವಾದುವು) ಆಗಿವೆ.

( ೧ ) ಈ ಬೃಹದಾರಣ್ಯೋಪನಿಷದ್ಭಾಷ್ಯದಲ್ಲಿ "ವಾಸನಾಮಾತ್ರ ರೂಪಾನ್" 'ವಾಸನಾಮಯೀ ಸೃಷ್ಟಿ' ಈ ವಾಕ್ಯಗಳಿಂದ ಸ್ವಾಪ್ನ ಪದಾರ್ಥಗಳಿಗೆ, ಸಂಸ್ಕಾರವು (ವಾಸನಾ) ಉಪಾದಾನ ಕಾರಣವೆಂದು ತಾವೇ ಹೇಳಿ, 'ಮಾಯಾಮಾತ್ರಂ ತು' ಈ ಸೂತ್ರದ ಭಾಷ್ಯದಲ್ಲಿ ಸ್ವಾಪ್ನ ರಥಾದಿ ಪದಾರ್ಥಗಳ ಉಪಾದಾನ ಕಾರಣಗಳು ( ರಥಾದಿ ರೂಪವಾಗಿ ಪರಿಣತವಾಗುವ ಕಾರಣಗಳು ) ಇಲ್ಲವೆಂದು ಸ್ವಾಪ್ನ ರಥಾದಿ ಪದಾರ್ಥಗಳು ಮಿಥ್ಯಾ ( ಸುಳ್ಳು ) ಎಂದು ಹೇಳುವುದು ಅಯುಕ್ತವೂ ಸ್ವವ್ಯಾಹತವೂ ಆಗಿದೆ ಹಾಗಯೇ ಶಂಕರಭಾಷ್ಯಕ್ಕೆ ವ್ಯಾಖ್ಯಾನ ಮಾಡಿದ ಹಾಗೂ ಅದ್ವೈತಿಗಳಲ್ಲಿ ದೊಡ್ಡ ಪಂಡಿತರೆಂದು ಹೇಳಿಸಿಕೊಳ್ಳುವ ಯಾವ ಭಾಮತೀಕಾರರುಂಟೊ ಅವರು ಬ್ರ ಸೂ ೨-೧-೩೧ದ ವ್ಯಾಖ್ಯಾನದಲ್ಲಿ 'ಅಂತರಕರಣಮಾತ್ರಸಾಧ್ಯಾ ದೃಷ್ಟಾ ಸ್ವಪ್ನೇ ರಥಾದಿ ಸೃಷ್ಟಿಃ ಅಶಕ್ಯಾ ಅಪನ್ಹೋತುಂ' ಈ ವಾಕ್ಯದಲ್ಲಿ ಸ್ವಾಪ್ನ ಪದಾರ್ಥಗಳಿಗೆ ದೇಹದಲ್ಲಿರುವ ಮನಸ್ಸಿನಲ್ಲಿ ಪರಿಣತವಾದ ವಾಸನಾರೂಪ ಕಾರಣಗಳಿಂದ ರಥಾದಿಗಳು ಉತ್ಪನ್ನವಾಗುತ್ತವೆ ಎಂದು ಹೇಳಿರುವುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯಾ ಆದವುಗಳು ಎಂಬ ವಿಷಯವಾಗಿ ಸ್ವಾಪ್ನ ಪದಾರ್ಥಗಳಿಗೆ ಉಪಾದಾನ ಕಾರಣ ಇಲ್ಲ ಎಂದು ಹೇಳಿದ ಮೊದಲನೆಯ ಕಾರಣವು ಯುಕ್ತವಲ್ಲ

( ೨ ) ಹಾಗೆಯೇ ಸ್ವಾಪ್ನ ರಥಾದಿಗಳಿಗೆ, ದೇಹದಲ್ಲಿರುವ ಮನೋಜನ್ಯವಾದ ವಾಸನಾ ( ಸಂಸ್ಕಾರವೇ ) ಕಾರಣವೆಂದು ಹೇಳಿರುವುದರಿಂದ ದೇಹದಲ್ಲಿರುವ ಮನಸ್ಸಿನ ವಾಸನೆಯಿಂದ ಪರಿಣತವಾದ ರಥಾದಿಗಳು ಇರುವುದಕ್ಕೆ ಬೇಕಾದಷ್ಟು ಸ್ಥಳವು ದೇಹದಲ್ಲಿರಲು ಯಾವ ಬಾಧಕವೂ ಇಲ್ಲ ಆದುದರಿಂದ "ಸ್ವಾಪ್ನ ರಥಾದಿ ಪದಾರ್ಥಗಳಿಗೆ ಯೋಗ್ಯವಾದ ( ಇರುವುದಕ್ಕೆ ಸಾಕಾಗುವಷ್ಟು ) ಸ್ಥಳವು ದೇಹದಲ್ಲಿ ಇಲ್ಲದುದರಿಂದ ದೇಹದಲ್ಲಿ ಕಂಡು ಬರುವ ರಥಾದಿಗಳು ಮಿಥ್ಯಾ ಎಂದು ಹೇಳಿದ ಎರಡನೆಯ ಕಾರಣವೂ ಯುಕ್ತವಲ್ಲ

( ೩ ) ದೇಹದಲ್ಲಿ ಸ್ವಾಪ್ನ ರಥಾದಿಗಳ ಸೃಷ್ಟಿಯನ್ನು ಪರಮಾತ್ಮನು ಹೇಗೆ ಮಾಡುತ್ತಾನೆಯೋ ಹಾಗೆಯೇ ರಾತ್ರಿಯು, ಗ್ರೀಷ್ಮ ಋತುವಿನ ಸೃಷ್ಟಿ ಮಾಡುತ್ತಾನೆ ಆದುದರಿಂದ ಸ್ವಪ್ನದಲ್ಲಿ ಹಗಲಲ್ಲಿ ರಾತ್ರಿಯೂ, ವಸಂತ ಋತುವಿನಲ್ಲಿ ಗ್ರೀಷ್ಮಋತುವೂ ಕಾಣಲು ಬಾಧಕವಿಲ್ಲ ಆದುದರಿಂದ ರಾತ್ರಿಯಲ್ಲಿ ಮಲಗಿದ ಮನುಷ್ಯನು ಸ್ವಪ್ನದಲ್ಲಿ ಹಗಲನ್ನು ನೋಡುತ್ತಾನೆ, ವಸಂತ ಋತುವಿನಲ್ಲಿ ಮಲಗಿದ ಮನುಷ್ಯನು ಸ್ವಪ್ನದಲ್ಲಿ ಗ್ರೀಷ್ಮಋತುವನ್ನು ನೋಡುತ್ತಾನೆ, ಆ ಕಾಲದಲ್ಲಿ ಹಗಲು ಇರುವುದಿಲ್ಲ, ಗ್ರೀಷ್ಮಋತುವು ಇರುವುದಿಲ್ಲ, ಆದುದರಿಂದ ಸ್ವಪ್ನದಲ್ಲಿ ಕಂಡು ಬರುವ ಕಾಲವು ಇಲ್ಲವೆಂದು ಅದು ಸುಳ್ಳಾದುದೆಂದು ಹೇಳಿದ ಮೂರನೆಯ ಕಾರಣವೂ ಯುಕ್ತವಲ್ಲ

( ೪ ) 'ಸಹಿಕರ್ತಾ' ಇತ್ಯಾದಿ ಶ್ರುತಿಗಳಲ್ಲಿ ಈಶ್ವರನೇ ಸ್ವಾಪ್ನ ಪದಾರ್ಥಗಳ ಕರ್ತೃ ( ಕಾರಣನು ) ಎಂದು ಹೇಳಿದ್ದುದರಿಂದ (ಲೂ) ಮತ್ತು

' ಸರ್ವೋಪೇತಾ ಚ ತದ್ದರ್ಶನಾತ್ '( ಬ್ರ ಸೂ. ೨-೧-೩೦) ಈ ಸೂತ್ರದಲ್ಲಿ 'ಸರ್ವಕರ್ಮಾ' 'ಏತಸ್ಯ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ' ಇತ್ಯಾದಿ ಪ್ರಮಾಣಗಳ ಉಪನ್ಯಾಸ ಮಾಡಿ ಈಶ್ವರನಿಗ ವಿಚಿತ್ರವಾದ ಸಾಮರ್ಥ್ಯವುಂಟು ಎಂದು ಶಂಕರಾಚಾರ್ಯರು ಒಪ್ಪಿರುವುದರಿಂದ ಒಂದು ನಿಮಿಷದಲ್ಲಿಯೆ ಸ್ವಾಪ್ನ ಪದಾರ್ಥಗಳ ನಿರ್ಮಾಣ ಮಾಡುವ ಸಮರ್ಥನಾದ ಪುರುಷನುಂಟೆಂದು ಸಿದ್ಧವಾಗುತ್ತಿದ್ದರೂ, '' ಒಂದು ನಿಮಿಷದಲ್ಲಿಯೇ ಸ್ವಾಪ್ನ ಪದಾರ್ಥಗಳ ಸೃಷ್ಟಿ ಮಾಡುವ ಪುರುಷನು ಇಲ್ಲದುದರಿಂದ ಆ ಪದಾರ್ಥಗಳು ಸುಳ್ಳು '' ಎಂದು ಹೇಳಿದ ನಾಲ್ಕನೇಯ ಕಾರಣವೂ ಯುಕ್ತವಾದುದಲ್ಲ

( ೫ ) ಸ್ವಾಪ್ನ ಪದಾರ್ಥಗಳ ಜ್ಞಾನವುಂಟಾಗುವದು ಸರ್ವರಿಗೆ ಅನುಭವ ಸಿದ್ಧವಾದುದು. ಕಾರಣವನ್ನು ಬಿಟ್ಟು ಕಾರ್ಯವು ಹುಟ್ಟುವುದು ಅಸಂಭಾವಿತವಾದುದರಿಂದ ಆ ಜ್ಞಾನಕ್ಕೆ ಕಾರಣವುಂಟೆಂದು ಸರ್ವರು ಒಪ್ಪಬೇಕಾದುದು ಆ ಕಾರಣವಾವುದು ? ಎಂದು ವಿಚಾರ ಮಾಡಿದರೆ ಸ್ವಪ್ನಕಾಲದಲ್ಲಿ ಮನಸ್ಸು ಉಪರತವಾಗಿರುವುದಿಲ್ಲವಾದುದರಿಂದ ಮನಸ್ಸು ಕಾರಣವೆಂದು ಹೇಳಬೇಕು ಅಥವಾ ಬೇರೆ ಯಾವುದಾದರೊಂದು ಕಾರಣವನ್ನು ಹೇಳಲೇ ಬೇಕಾಗಿರುವುದು. ಆದುದರಿಂದ ''ಸ್ವಾಪ್ನ ಪದಾರ್ಥಗಳ ಜ್ಞಾನಕ್ಕೆ ಕಾರಣವಿಲ್ಲ ಆದುದರಿಂದ ಅವು ಸುಳ್ಳು'' ಎಂದು ಹೇಳಿದ ಐದನೆ ಕಾರಣವೂ ಯುಕ್ತವಲ್ಲ.

(೬) ' ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ, ಅಥ ರಥಾನ್ ರಥಯೋಗಾನ್ ಪಥಃ ಸೃಜತೇ'' ಈ ಶ್ರುತಿಯು ಯಾವ ಸ್ಥಳದಲ್ಲಿ ಮುಂಚೆ ರಥಾದಿಗಳು ಇರಲಿಲ್ಲವೋ, ಅಥ=ಆಮೇಲೆ ಈಶ್ವರನು ರಥಾದಿಗಳನ್ನು ಸೃಷ್ಟಿಸುತ್ತಾನೆ ಎಂದು ಹೇಳುತ್ತದೆ. ಆದುದರಿಂದ ರಥಾದಿಗಳು ಪೂರ್ವದಲ್ಲಿ ಇರಲಿಲ್ಲ ( ಪ್ರಾಗಭಾವ ಪ್ರತಿಯೋಗಿ ) ಎಂದೇ ಸಿದ್ಧವಾಗುತ್ತದೆ ಆದರೆ ಯಾವಾಗಲೂ ಇರಲಿಲ್ಲ ( ಅತ್ಯಂತಾಭಾವ ಪ್ರತಿಯೋಗಿ ) ಎಂದು ಸಿದ್ಧವಾಗುವುದಿಲ್ಲ

ಮದುವೆಯಾಗುವುದಕ್ಕೆ ಪೂರ್ವದಲ್ಲಿ ಮಕ್ಕಳು ಇರಲಿಲ್ಲ, ಅನಂತರ ಹುಟ್ಟಿದರು ಎಂದು ಹೇಳಿದರೆ ಆ ಮಕ್ಕಳು ಮದುವೆಗಿಂತ ಮುಂಚೆ ಇರಲಿಲ್ಲವೆಂದೇ ಸಿದ್ಧವಾಗುತ್ತದಲ್ಲದೆ ಮಿಥ್ಯಾ ( ಮೂರು ಕಾಲದಲ್ಲಿ ಇರದವರು ) ಎಂದು ಸಿದ್ಧವಾಗುವುದಿಲ್ಲ.

' ಪೂರ್ವದಲ್ಲಿರಲಿಲ್ಲ ಆಮೇಲೆ ಉತ್ಪನ್ನವಾಯಿತು, ಇಷ್ಟು ಹೇಳುವ ಮಾತ್ರಕ್ಕೆಯೇ ಆ ಪದಾರ್ಥವು ಸುಳ್ಳಾಗುವುದಾದರೆ, ಪೂರ್ವದಲ್ಲಿ ಬಿ. ಎ. ಆಗಿರಲಿಲ್ಲ, ಈಗ ಬಿ. ಎ ಆಗಿದ್ದಾನೆ, ಪೂರ್ವದಲ್ಲಿ ಮನೆ ಇರಲಿಲ್ಲ ಈಗ ಮನೆ ಕಟ್ಟಿದೆ, ಹೀಗೆಂದು ಹೇಳಿದರೆ ಬಿ ಎ. ಸುಳ್ಳು, ಮನೆ ಸುಳ್ಳು ಎಂದು ಒಪ್ಪಬೇಕಾದೀತು ಆದುದರಿಂದ ಈ ಶ್ರುತಿಯು ಪೂರ್ವದಲ್ಲಿ ರಥಾದಿಗಳು ಇರಲಿಲ್ಲ ಅನಂತರ ಉತ್ಪನ್ನವಾದುವು ಎಂದು ಹೇಳುತ್ತಿರುವುದರಿಂದ, ಸ್ವಾಪ್ನ ಪದಾರ್ಥಗಳು ಯಾವಾಗಲೂ ಇರದವು ಮಿಥ್ಯಾ ) ಎಂದು ಸಿದ್ಧವಾಗುವುದಿಲ್ಲ ಆದುದರಿಂದ ಸ್ವಾಪ್ನ ರಥಾದಿ

ಗಳಿಗೆ " ನ ತತ್ರ ರಥಾಃ' ಈ ಶ್ರುತಿಯಿಂದ ಬಾಧಜ್ಞಾನ ( ಸ್ವಾಪ್ನ ರಥಾದಿಗಳು ಯಾವಾಗಲೂ ಇರಲಿಲ್ಲ ಎಂಬ ಜ್ಞಾನ) ಉಂಟಾಗುವುದಿಲ್ಲ, ಆದುದರಿಂದ " ಇದಂ ರಜತಂ' ಈ ಜ್ಞಾನಕ್ಕೆ ' ನೇದಂ ರಜತಂ' ಎಂಬ ಬಾಧಜ್ಞಾನವು ಬರುವುದರಿಂದ ಹೇಗೆ ಆ ಬೆಳ್ಳಿಯನ್ನು ಒಪ್ಪಕೂಡದೋ ಹಾಗೆಯೇ 'ನ ತತ್ರ ರಥಾಃ ನ ರಥಯೋಗಾಃ' ಈ ಶ್ರುತಿಯಿಂದ ಸ್ವಾಪ್ನ ರಥಾದಿಗಳು ತ್ರಿಕಾಲದಲ್ಲಿಯೂ ಇಲ್ಲ ಎಂಬ ಬಾಧಜ್ಞಾನ ಉತ್ಪನ್ನವಾಗುವುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯಾ ಎಂದು ಒಪ್ಪಬೇಕು" ಹೀಗೆಂದು ಹೇಳಿದ ಆರನೆಯ ಕಾರಣವೂ ಯುಕ್ತವಲ್ಲ ಆದುದರಿಂದ ಶಂಕರಾಚಾರ್ಯರು ಮಾಡಿದ ಸೂತ್ರಾರ್ಥವು ಸರಿಯಾದುದಲ್ಲ ಇದನ್ನು ಕೋರ್ಟಿನವರು ಲಕ್ಷ್ಯದಲ್ಲಿರಿಸಬೇಕೆಂದು ಪ್ರಾರ್ಥನೆ.

---

## ವಾದಿಯ ವಕೀಲರ ಆರ್ಗ್ಯುಮೆಂಟ್ ( ಹೇಳಿಕೆ ).

ವಾದಿಯು ಅರ್ಜಿಯಲ್ಲಿ ಬನ್ನವಿಸಿಕೊಂಡಂತೆ ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಯಜ್ಞಾದಿಕ್ರಿಯೆ, ದೇವತಾ, ವೇದ ಗಂಗಾದಿ ತೀರ್ಥಗಳು, ಸ್ವರ್ಗಾದಿ ಪರಲೋಕಗಳು, ಮತ್ತು ಈ ಲೋಕವು, ಇತ್ಯಾದಿ ಸಮಸ್ತ ಜಗತ್ತು ಸತ್ಯವೆನ್ನುವ ವಿಷಯವಾಗಿ ಆಧಾರವೆಂದು ಹೇಳಿದ ಶ್ರುತಿ, ಬ್ರಹ್ಮಸೂತ್ರ, ಗೀತಾ, ಈ ಪ್ರಸ್ಥಾನ ತ್ರಯವು, ಮತ್ತು ಪ್ರತ್ಯಕ್ಷ, ಅನುಮಾನ, ಈ ಎಲ್ಲಾ ಪ್ರಮಾಣಗಳು ಬ್ರಾಹ್ಮಣಾದಿ ಸರ್ವ ಜಗತ್ತಿನ ಪಾರಮಾರ್ಥಿಕ ಸತ್ಯತ್ವವನ್ನು ಬೋಧಿಸುತ್ತವೆ.

(೧) 'ವಿಶ್ವಂ ಸತ್ಯಂ' ( ಋ ) ಈ ವಾಕ್ಯವು ಬ್ರಹ್ಮಾತಿರಿಕ್ತವಾದ ಜಗತ್ತಿನ ಸತ್ಯತ್ವವನ್ನು ಹೇಳುತ್ತದೆ ಅದ್ವೈತಿಗಳಲ್ಲಿ ಪಂಡಿತರೆಂದು ಹೆಸರಾದ ವಿದ್ಯಾರಣ್ಯಸ್ವಾಮಿಗಳಾದರೂ ಈ ವೇದದ ವ್ಯಾಖ್ಯಾನಾವಸರದಲ್ಲಿ 'ಸತ್ಯಂ' ಎಂಬ ಪದಕ್ಕೆ 'ಅನಾರೋಪಿತಂ ವಿದ್ಯಮಾನಮೇವ' ಎಂದು ಅರ್ಥ ಮಾಡಿರುವುದರಿಂದ ಜಗತ್ತು ಪಾರಮಾರ್ಥಿಕ ಸತ್ಯವು ಸುಳ್ಳು ( ಭ್ರಮೆಯಿಂದ ತೋರುವದು ) ಅಲ್ಲ ಎಂಬರ್ಥವನ್ನು ಈ ಶ್ರುತಿಯು ಹೇಳುತ್ತದೆಂಬುದು ಪ್ರತಿವಾದಿಗೆ ಕೂಡ ಸಮ್ಮತವಾದುದೆಂದು ಸಿದ್ಧವಾಗುತ್ತದೆ

(೨) 'ತದೇತತ್ ಸತ್ಯಂ' ( ಮುಂ ) ಈ ವೇದವು ಬ್ರಹ್ಮಾತಿರಿಕ್ತವಾದ ಕರ್ಮಾದಿ ಸಮಸ್ತ ಜಗತ್ತು ಸತ್ಯವಾದುದು ಎಂದು ಸ್ಪಷ್ಟವಾಗಿ ತಿಳಿಸುತ್ತದೆ.

'ತದೇತತ್ ಸತ್ಯಂ' ಈ ವಾಕ್ಯವು ಮುಂಡಕ ಉಪನಿಷತ್ತಿನಲ್ಲಿ ಬ್ರಹ್ಮನ, ವಿಷಯದಲ್ಲಿಯೂ ಮತ್ತು ಜಗತ್ತಿನ ವಿಷಯದಲ್ಲಿಯೂ, ಎರಡುಕಡೆ ಪ್ರಸಕ್ತವಾಗಿದೆ—ತತ್ ಏತತ್=ಆ ( ಪೂರ್ವೋಕ್ತಗುಣ ವಿಶಿಷ್ಟವಾದ ) ಈ ಬ್ರಹ್ಮವು, ಸತ್ಯಂ=ಅವಿತಥಂ ಸುಳ್ಳಾದುದು ಅಲ್ಲ, ನಿಜವಾದುದೇ ಹೀಗೆಂದು ಶಂಕರಾಚಾರ್ಯರು ಅರ್ಥವನ್ನು ಹೇಳಿ ಜಗತ್ತಿನ ವಿಷಯದಲ್ಲಿ ಅರ್ಥ ಮಾಡುವಾಗ್ಗೆ,

ತತ್, ಏತತ್=ಕರ್ಮಾದಿ ಜಗತ್ತು, ಸತ್ಯಂ=ಅವಿತಥಂ=ಸುಳ್ಳಾದುದಲ್ಲ, ನಿಜವಾದುದು ಎಂದು ಹೇಳಿದ್ದಾರೆ ಆದರೂ ತಮ್ಮ ಮತದ ಆಗ್ರಹದಿಂದ 'ಜಗತ್ತು ಆಪೇಕ್ಷಿಕ ಸತ್ಯವಾದುದು ( ತಾತ್ಕಾಲಿಕ ಸತ್ಯವಾದುದು ) ಎಂದು ಕೈಯಿಂದ ಹೊಸದಾಗಿ ' ಆಪೇಕ್ಷಿಕ ' ಎಂಬ ಪದವನ್ನು ಸೇರಿಸಿ ಅರ್ಥವನ್ನು ಮಾಡಿದ್ದಾರೆ. ಶಂಕರಾಚಾರ್ಯರು ತಮ್ಮ ಮತದ ಆಗ್ರಹದಿಂದ ತಮಗೆ ಬೇಕಾದ ಪದಗಳನ್ನು ಹೊಸದಾಗಿ ಸೇರಿಸಿಕೊಂಡು ಯಾವುದಾದರೂ ಅರ್ಥವನ್ನು ಹೇಳಿಕೊಳ್ಳಲಿ ವೇದವಂತೂ ಬ್ರಹ್ಮನಿಗೆ ' ತದೇತತ್ ಸತ್ಯಂ ' ಈ ವಾಕ್ಯದಿಂದ ಯಾವತರವ ಸತ್ಯತ್ವವನ್ನು ಹೇಳುತ್ತದೆಯೋ ತದೇತತ್ ಸತ್ಯಂ' ಈ ವಾಕ್ಯದಿಂದ ಅದೇ ತರದ ಸತ್ಯತ್ವವನ್ನು ಜಗತ್ತಿಗೆ ಬೋಧಿಸುತ್ತದೆಂಬ ವಿಷಯದಲ್ಲಿ ವಿವಾದವಿಲ್ಲ ಆದುದರಿಂದ ಈ ವಾಕ್ಯವು ಬ್ರಹ್ಮನ ಸತ್ಯತ್ವ ವಿಷಯದಲ್ಲಿ ಹೇಗೆ ನಿರ್ವಿವಾದ ಆಧಾರವಾಗಿದೆಯೋ ಹಾಗೆಯೇ ಜಗತ್ತಿನ ಸತ್ಯತ್ವದ ವಿಷಯದಲ್ಲಿಯೂ ಆಧಾರವಾಗಿದೆ

(೩) "ಯಾಥಾತಥ್ಯತೋಽರ್ಥಾನ್ ವ್ಯದಧಾತ್ ಶಾಶ್ವತೀಭ್ಯಃ ಸಮಾಭ್ಯಃ" ಈ ಈಶಾವಾಸ್ಯ ಶ್ರುತಿಯೂ ಯಥಾತಥ್ಯದಿಂದ ಕೂಡಿದ ( ಸತ್ಯವಾದ ) ಜಗತ್ತಿನ ಸೃಷ್ಟಿಯನ್ನು ಪರಮಾತ್ಮನು ಮಾಡುತ್ತಾನೆ ಎಂದು ಜಗತ್ತಿನ ಸತ್ಯತ್ವವನ್ನು ತಿಳಿಸುತ್ತದೆ.

(೪) ' ಯಚ್ಚಿಕೇತ ಸತ್ಯಮಿತ್ತನ್ನಮೋಘಂ ' ( ಋ ೮-೧-೧೦ ) ಈ ಋಗ್ವೇದ ವಾಕ್ಯವು ಯಾವ ಜಗತ್ತು ಪರಮಾತ್ಮನಿಂದ ಸೃಷ್ಟವಾಗಿದೆಯೋ ಆ ಜಗತ್ತು ' ಸತ್ಯಮಿತ್ =ಸತ್ಯವಾಗುದೇ, ಸುಳ್ಳಲ್ಲ ಹೀಗೆ ಜಗತ್ತಿನ ಮಿಥ್ಯಾತ್ವವನ್ನು ನಿಷೇಧಿಸಿ ಸತ್ಯತ್ವವನ್ನೇ ಹೇಳುತ್ತದೆ ಆದುದರಿಂದ ಈ ವಾಕ್ಯದಿಂದಲೂ ಕೂಡ ಜಗತ್ತು ಪಾರಮಾರ್ಥಿಕ ಸತ್ಯವೆಂದೇ ಸಿದ್ಧವಾಗುತ್ತದೆ.

(೫) ' ಅಸತ್ಯಮಪ್ರತಿಷ್ಠಂ ತೆ ಜಗದಾಹುರನೀಶ್ವರಂ ' ( ಗೀ ೧೬-೮ ) ಈ ಗೀತಾ ವಾಕ್ಯವು, ಜಗತ್ತನ್ನು ಅಸತ್ಯವೆಂದು ತಿಳಿಯುವ ಜನರು ಅಸುರ ಸ್ವಭಾವವುಳ್ಳವರು, ಅವರಿಗೆ ಅಧೋಗತಿ ( ನಿತ್ಯ ನರಕವು ) ಆಗುತ್ತದೆ, ಎಂದು ಜಗತ್ತನ್ನು ಅಸತ್ಯವೆಂದು ತಿಳಿಯುವವರ ನಿಂದೆ ಮಾಡಿರುವುದರಿಂದ ಸತ್ಯವೆಂದೇ ಸಿದ್ಧವಾಗುತ್ತದೆ.

(೬) ' ಅಥಾತೋ ಬ್ರಹ್ಮಜಿಜ್ಞಾಸಾ, ' ಜನ್ಮಾದ್ಯಸ್ಯ ಯತಃ ' ಈ ಸೂತ್ರಗಳನ್ನು ಮೊದಲು ಮಾಡಿಕೊಂಡು ಅನಾವೃತ್ತಿಃ ಶಬ್ದಾತ್, ಅನಾವೃತ್ತಿಃ ಶಬ್ದಾತ್ಃ ಈ ಕೊನೆಯ ಸೂತ್ರದವರೆಗಿರುವ ಸಮಸ್ತ ಸೂತ್ರಗಳು ಕೆಳಗೆ ನಿರೂಪಿಸಿದಂತೆ ಪ್ರತಿಪಾದಿಸುತ್ತವೆ. ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುವ ಪರಮಾತ್ಮನು ಆನಂದಾದಿ ಗುಣಗಳಿಂದ ಪರಿಪೂರ್ಣನು ಆ ಪರಮಾತ್ಮನನ್ನು ಶ್ರವಣ,ಮನನ, ಧ್ಯಾನದಿಂದ ಜಗತ್ಕರ್ತೃವೆಂದೂ, ಸುವರ್ಣದಂತೆ ಬಣ್ಣವುಳ್ಳವನೆಂದೂ, ಚತುರ್ಮುಖನಿಗೆ ಕಾರಣನೂ, ನಿಯಾಮಕನೂ ಎಂದೂ ತಿಳಿದು ಆ ಪರಮಾತ್ಮನ ಅಪ

ರೋಕ್ಷಜ್ಞಾನವನ್ನು ಸಂಪಾದಿಸಿ ಪ್ರಕೃತಿ ಬಂಧದಿಂದ ಮುಕ್ತನಾಗಿ, ತನ್ನ ಸ್ವರೂಪಾನಂದ ಅನುಭವವನ್ನು ಹೊಂದುತ್ತ, 'ಏತತ್ ಸಾಮುಗಾಯನ್ನಾಸ್ತೇ' ಈ ಶ್ರುತಿಯಲ್ಲಿ ಹೇಳಿದಂತೆ ಈಶ್ವರನನ್ನು ಸಾಮುಗಾಯನದಿಂದ ಸ್ತೋತ್ರಮಾಡುತ್ತಿರಬೇಕೆಂದೂ ಮತ್ತು ಜಗತ್ತು ಪ್ರಮಾಣ ಪ್ರಮಿತವಾಗಿರುವುದರಿಂದ ಅದನ್ನು ಸುಳ್ಳೆಂದು ತಿಳಿಯಕೂಡದೆಂದೂ "ನಾಭಾವ ಉಪಲಬ್ಧೇಃ" ಇತ್ಯಾದಿ ಸೂತ್ರಗಳಿಂದ ಜಗನ್ಮಿಥ್ಯಾ' ಎಂಬವರ ಮತವನ್ನು ಖಂಡಿಸಿ ಜಗತ್ತು ಸತ್ಯವಾದುದು ಎಂದು ನಿರೂಪಿಸುವುದರಿಂದಲೂ, ಇವುಗಳಿಂದ ಜಗತ್ತು ಸತ್ಯವಾದುದೆಂದೇ ಸಿದ್ಧವಾಗುತ್ತದೆ

(೭) ಹೆಚ್ಚಿಗೆ ಹೇಳುವದೇನು ? ವೇದ, ಸೂತ್ರ, ಗೀತಾ ಈ ಪ್ರಸ್ಥಾನ ತ್ರಯ, ಪ್ರತ್ಯಕ್ಷ, ಅನುಮಾನ ಇವೆಲ್ಲವೂ ಪ್ರಮಾಣಗಳಾಗಿರುವುದರಿಂದ ವೇದಾದಿಗಳಲ್ಲಿ ಉಕ್ತವಾದ ಸಮಸ್ತ ವಸ್ತುಗಳಿಗೆ ಸತ್ಯತ್ವವನ್ನು ಒಪ್ಪಿಕೊಳ್ಳಬೇಕು ಕಾರಣವೇನಂದರೆ—ಪ್ರಮಾಣ ಎಂಬ ಪದದಲ್ಲಿ ಪ್ರ, ಮಾ, ಲ್ಯುಟ್ (ಅನ=ಅಣ) ಹೀಗೆ ಮೂರು ಭಾಗಗಳಿವೆ. 'ಪ್ರ' ಎಂದರೆ ನಿಜವಾದ ವಸ್ತುವಿನ, ಮಾ= ಜ್ಞಾನಕ್ಕೆ, ಲ್ಯುಟ್=ಕಾರಣ (ನಿಜವಾದ ವಸ್ತುವಿನ ಜ್ಞಾನವನ್ನು ಹುಟ್ಟಿಸುವುದು= ವೇದಾದಿಗಳಿಂದ ತಿಳಿದು ಬರುವ ಸಮಸ್ತ ವಸ್ತುಗಳು ಸತ್ಯವಾದುವು) ಹೀಗೆ ಪ್ರಮಾಣ ಎಂಬ ಪದಕ್ಕೆ ಅರ್ಥವಾಗುತ್ತದೆ ಆದುದರಿಂದ ಪ್ರಮಾಣಗಳಾದ ವೇದಾದಿಗಳಿಂದ ತಿಳಿದು ಬರುವ ವಸ್ತುಗಳು ಸತ್ಯವಾದುವು ಎಂದೇ ಸಿದ್ಧವಾಗುವುದು ಆದುದರಿಂದ 'ಬ್ರಾಹ್ಮಣೋಽಸ್ಯ ಮುಖಮಾಸೀತ್,' 'ಯಜ್ಞೇನ ಯಜ್ಞಮಯಜಂತ ದೇವಾಃ' 'ಇಮಂ ಮೇ ಗಂಗೇ ಯಮುನೇ ಸರಸ್ವತಿ ಇತ್ಯಾದಿ, ವೇದ, ಗೀತಾ, ಸೂತ್ರಗಳಿಂದ ತಿಳಿದು ಬರುವ ಬ್ರಾಹ್ಮಣಾದಿ ಸಮಸ್ತ ಜಗತ್ತು ಪಾರಮಾರ್ಥಿಕ ಸತ್ಯವಾದುದು, ಸುಳ್ಳಲ್ಲ, ಹೀಗೆಂದು ಸಿದ್ಧವಾಗುವುದು. ಇದನ್ನು ಧರ್ಮರಾಜರು ವಿಚಾರಿಸಬೇಕೆಂದು ಪ್ರಾರ್ಥನೆ.

---

## ಪ್ರತಿವಾದಿಯ ವಕೀಲನ ಆರ್ಗ್ಯುಮೆಂಟು.

ಬ್ರಾಹ್ಮಣಾದಿ ಸಮಸ್ತ ಜಗತ್ತು ಮಿಥ್ಯೆಯಾದುದು (ಮೂರು ಕಾಲದಲ್ಲಿಯೂ ಇಲ್ಲದಿರುವುದು) ಇದಕ್ಕೆ ಕಾರಣಗಳು:—

೧ 'ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' (ಛಾಂ) ಎಂಬೀ ವೇದವು 'ವಾಚಾರಂಭಣ ಮಾತ್ರಂ' ಈ ಪದದಿಂದಲೂ, 'ನಾಮಧೇಯ ಮಾತ್ರಂ' ಈ ಪದದಿಂದಲೂ, ಕಾರ್ಯಭೂತವಾದ ಘಟಾದಿಗಳ ಮಿಥ್ಯಾತ್ವವನ್ನೂ, ಕಾರಣೀ ಭೂತವಾದ ಮೃತ್ತಿಕೆಗೆ ಸತ್ಯತ್ವವನ್ನೂ ಹೇಳಿ ಘಟಾದಿಗಳ ದೃಷ್ಟಾಂತದಿಂದ ಕಾರ್ಯಭೂತವಾದ ಜಗತ್ತಿಗೆ ಮಿಥ್ಯಾತ್ವವನ್ನೂ, ಕಾರಣೀ ಭೂತ ಬ್ರಹ್ಮನಿಗೆ ಸತ್ಯತ್ವವನ್ನೂ ಹೇಳುತ್ತದೆ. ಆದುದರಿಂದ ಬ್ರಹ್ಮಾತಿರಿಕ್ತವಾದ ಕಾರ್ಯಭೂತ ಜಗತ್ತು ಸುಳ್ಳು, ಬ್ರಹ್ಮನೊಬ್ಬನೇ ಸತ್ಯ ಹೀಗೆಂದು ಸಿದ್ಧವಾಗು

ತ್ತದೆ ಯದ್ಯಪಿ ಈ ವೇದದಲ್ಲಿ ವಾಚಾರಂಭಣಂ ನಾಮಧೇಯಂ ಎಂಬಿಷ್ಟೇ ಪದಗಳುಂಟು. ಈ ಪದಗಳ ಅರ್ಥವು ಮಿಥ್ಯಾ ಎಂದು ಆಗದೆ ಇದ್ದರೂ ಇತರ ವಾಕ್ಯಗಳ ಅನುಸಾರವಾಗಿ ' ಮಾತ್ರಂ, ' ' ಮಾತ್ರಂ ' ಎಂಬ ಪದವನ್ನು ಎರಡು ಕಡೆ ಹಚ್ಚಿ ಕೊಂಡು 'ವಾಚಾರಂಭಣಮಾತ್ರಂ'=ಕೇವಲ ಶಬ್ದದಿಂದ ಪ್ರತಿಪಾದ್ಯವು; ವಸ್ತು (ಅರ್ಥ) ವಿಲ್ಲ ನಾಮಧೇಯಮಾತ್ರಂ=ಹೆಸರುಮಾತ್ರ—ವಸ್ತುವಿಲ್ಲ ಹೀಗೆ ಅರ್ಥವಾಗಿ ಕಾರ್ಯವಾದ ಜಗತ್ತು ಮಿಥ್ಯ ಎಂದು ಸಿದ್ಧವಾಗುತ್ತದೆ,

( ೨ ) " ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ " ( ಛಾಂದೋಗ್ಯ ) ಈ ಶ್ರುತಿಯಾದರೂ ' ತತ್ ಏವ '=ಆ ಬ್ರಹ್ಮವೇ, ಸತ್ಯಂ=ಸತ್ಯವಾದುದು ಎರಡನೆಯ ವಸ್ತು ಸತ್ಯವಾದುದಲ್ಲ. ಹೀಗೆ ಬ್ರಹ್ಮವೊಂದೇ ಸತ್ಯವು, ಎರಡನೆಯದಾದ ವಸ್ತು ( ಜಗತ್ತು ) ಸತ್ಯವಲ್ಲ ಎಂದು ತಿಳಿಸುತ್ತದೆ ಯದ್ಯಪಿ ಈ ವಾಕ್ಯವು ತತ್ ಸತ್ಯಂ ' ಬ್ರಹ್ಮವು ಸತ್ಯವಾದುದು ಎಂದಿಷ್ಟೇ ತಿಳಿಸುತ್ತದೆಯಾದರೂ ಶಂಕರಾಚಾರ್ಯರು ನಿರೂಪಿಸಿದಂತೆ ಇತರ ವಾಕ್ಯಾನುಸಾರವಾಗಿ ' ತತ್ 'ಎಂಬ ಪದದ ಮುಂದೆ ' ಏವ ' ಎಂಬ ಪದವನ್ನು ಸೇರಿಸಿಕೊಳ್ಳಲು ' ತತ್ ಏವ ' ಬ್ರಹ್ಮವೊಂದೇ ಸತ್ಯವೆಂದು ಎರಡನೇಯಾವುದೂ ಸತ್ಯವಲ್ಲ ಎಂದು ಅರ್ಥವಾಗಿ ಜಗತ್ತು ಮಿಥ್ಯೆ ಎಂದು ತಿಳಿಸುತ್ತದೆ

(೩) " ಇದಂ ಸರ್ವಂ ಯದಯಮಾತ್ಮಾ " (ಬೃ). ಈ ವೇದವು " ಇದಂ ಸರ್ವಂ "–ಇದಲ್ಲವು, ಅಯಮಾತ್ಮಾ= ಈ ಬ್ರಹ್ಮನಲ್ಲಿ ಕಲ್ಪಿತವಾದುದು ಎಂದು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತದೆ

(೪) " ಬ್ರಹ್ಮೈವೇದಂ ಸರ್ವಂ " (ಮುಂ) ಈ ವೇದವು 'ಇದಂ ಸರ್ವಂ=' ಇದೆಲ್ಲವು, ಬ್ರಹ್ಮೈವ=ಬ್ರಹ್ಮವೇ=ಬ್ರಹ್ಮನಲ್ಲಿ ಕಲ್ಪಿತವಾದುದು, ಎಂದು ಜಗತ್ತಿಗೆ ಮಿಥ್ಯಾತ್ವವನ್ನು ಹೇಳುತ್ತದೆ

(೫) ' ಆತ್ಮೈವೇದಂ ಸರ್ವಂ ' ( ಛಾಂ ) ಈ ವೇದವೂ ಕೂಡ ಇದಂ ಸರ್ವಂ=ಇದೆಲ್ಲವೂ, ಆತ್ಮೈವ=ಆತ್ಮನಲ್ಲಿ ಕಲ್ಪಿತವಾದುದು, ಎಂದು ಜಗತ್ತಿನ ಮಿಥ್ಯಾತ್ವವನ್ನು ಹೇಳುತ್ತದೆ,

(೬) ಬೃಹ. ೪-೪ ೧೯ ಮತ್ತು ಕಾಠಕ ೧೧ ಇವೆರಡು ಉಪನಿಷತ್ತಿನಲ್ಲಿರುವ " ನೇಹ ನಾನಾಸ್ತಿ ಕಿಂಚನ " ಎಂಬ ವಾಕ್ಯವು, ' ನಾನಾ ಕಿಂಚನ=ಈ ನಾನಾ ಪ್ರಕಾರವಾದ ಯಾವ ಜಗತ್ತು' ಇಹ=ಬ್ರಹ್ಮನಲ್ಲಿ, ನಾಸ್ತಿ=ಇಲ್ಲ ಹೀಗೆ ಜಗತ್ತಿನ ನಿಷೇಧ ಮಾಡುವುದರಿಂದ ಜಗತ್ತು ಮಿಥ್ಯಯೆಂದು ಸಿದ್ಧವಾಗುತ್ತದೆ

(೭) ಬೃಹದಾರಣ್ಯಕೋಪನಿಷತ್ತಿನ, ' ಯತ್ರ ಹಿ ದ್ವೈತ ಮಿವ ಭವತಿ ' ಈ ವೇದವು ' ಯತ್ರ=ಯಾವ ಅವಿದ್ಯಾವಸ್ಥೆಯಲ್ಲಿ ( ಅಜ್ಞಾನಕಾಲದಲ್ಲಿ ), ದ್ವೈತ ಮಿವ=ಮಿಥ್ಯಾಭೂತ ದ್ವೈತವು, ಭವತಿ=ಇರುತ್ತದೆ ಆ ಅವಸ್ಥೆಯಲ್ಲಿ ಒಬ್ಬನು ಮತ್ತೊಂದನ್ನು ನೋಡುತ್ತಾನೆ ಒಬ್ಬನು ಶಬ್ದವನ್ನು ಶ್ರವಣ ಮಾಡುತ್ತಾನೆ

ಇತ್ಯಾದಿ. 'ಯತ್ರತ್ವಸ್ಯ ಸರ್ವಂ ಆತ್ಮೈವಾಭೂತ್ ತತ್ ಕೇನ ಕಂಪಶ್ಯೇತ್'= ಯಾವ ಜ್ಞಾನಾವಸ್ಥೆಯಲ್ಲಿ ಆ ಜ್ಞಾನಿಗೆ ಸರ್ವಂ=ಸಮಸ್ತವೂ, ಆತ್ಮೈವಾಭೂತ್=ಆತ್ಮವೇ ಆಗಿ ಹೋಗುವುದು; ಆತ್ಮಾತಿರಿಕ್ತವಾದುದಾವುದೂ ಇಲ್ಲದೆ ಹೋಗುವುದು ತತ್=ಆ ಜ್ಞಾನಾವಸ್ಥೆಯಲ್ಲಿ, ಯಾರು ಯಾರನ್ನು ತಿಳಿಯುವರು, ಯಾರು ಶಬ್ದವನ್ನು ಕೇಳುವವರು! ಯಾರು ಗಂಧದ ಜ್ಞಾನವನ್ನು ಮಾಡಿ ಕೊಳ್ಳುವವರು 'ಯೇನ ಇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್' ವಿಜ್ಞಾತಾರಮರೇ ಕೇನ ವಿಜಾನೀಯಾತ್'' ಯೇನ=ಯಃ ಯಾವ ಜೀವನು ಸರ್ವ ಜಗತ್ತನ್ನು ತಿಳಿಯುತ್ತಾನೆಯೊ ಅವನನ್ನು ಯಾರು ತಿಳಿಯುವರು? (ಯಾರೂ ಯಾರನ್ನು ತಿಳಿಯುವದಿಲ್ಲ) ಹೀಗೆಂದು ಈ ವಾಕ್ಯವು ಜ್ಞಾನಾವಸ್ಥೆಯಲ್ಲಿ ಆತ್ಮಾತಿರಿಕ್ತವಾದ ಸರ್ವ ಜಗತ್ತಿನ ಅಭಾವವನ್ನು ಹೇಳುತ್ತದೆ ಆದುದರಿಂದ ಈ ಶ್ರುತಿಯಾದರೂ ಜಗತ್ತಿನ ಮಿಥ್ಯಾತ್ವವನ್ನು (ಮೂರು ಕಾಲದಲ್ಲಿಯೂ ಇಲ್ಲದಿರುವುದನ್ನು) ಸಿದ್ಧ ಮಾಡುತ್ತದೆ

(೮) 'ಅಥಾತ ಆದೇಶಃ ನೇತಿ ನೇತಿ' (ಬೃ.) ಈ ಶ್ರುತಿಯು ಮೂರ್ತಾಮೂರ್ತಾತ್ಮಕ ಸಮಸ್ತ ಪ್ರಪಂಚವನ್ನು 'ನೇತಿ ನೇತಿ' ಎಂದು ನಿಷೇಧಿಸುವುದರಿಂದ ಸಮಸ್ತ ಪ್ರಪಂಚವು ಮಿಥ್ಯೆಯಾದುದು

(೯) 'ಸರ್ವಂ ಖಲ್ವಿದಂ ಬ್ರಹ್ಮ'' (ಛಾಂ) ಈ ಶ್ರುತಿಯು, 'ಇದಂ ಸರ್ವಂ'=ಈ ಎಲ್ಲಾ ಜಗತ್ತು, ಬ್ರಹ್ಮ=ಬ್ರಹ್ಮನಲ್ಲಿ ಕಲ್ಪಿತ (ಮಿಥ್ಯಾ) ವಾದುದು ಎಂದು ಹೇಳುತ್ತದೆ

(೧೦) ಸೂತ್ರಕಾರರಾದ ಬಾದರಾಯಣರಾದರೂ, 'ತದನನ್ಯತ್ವಮಾರಂಭಣಶಬ್ದಾದಿಭ್ಯಃ' (ಬ್ರ ಸೂ ೨-೧-೧೪) ಎಂಬ ಸೂತ್ರದಲ್ಲಿ 'ವಾಚಾರಂಭಣಂ' ಇತ್ಯಾದಿ ಶ್ರುತಿಗಳಿಂದ ಜಗತ್ತು ಕಲ್ಪಿತವಾದುದು ಎಂದು ಸಿದ್ಧವಾಗುವುದರಿಂದ ಜಗತ್ತು ಬ್ರಹ್ಮನಲ್ಲಿ ಕಲ್ಪಿತ (ಮಿಥ್ಯಾ) ವಾದುದು ಎಂದು ಜಗತ್ತಿಗೆ ಮಿಥ್ಯಾತ್ವವನ್ನು ಹೇಳಿದ್ದಾರೆ ಆದುದರಿಂದ ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಸ್ನಾನ, ಸಂಧ್ಯಾ, ಯಜ್ಞ, ವೇದ, ದೇವತೆಗಳು, ತೀರ್ಥಗಳು, ಸ್ವರ್ಗಾದಿ ಪರಲೋಕಗಳು, ಈ ಲೋಕವು ಇತ್ಯಾದಿ ಸಮಸ್ತ ಜಗತ್ತು ಮಿಥ್ಯಾ(ಸುಳ್ಳು)ಆದುದು ಜಗತ್ತಿನ ಸತ್ಯತ್ವ ವಿಷಯದಲ್ಲಿ ವಾದಿಯು ಹೇಳಿದ 'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿ, ಪ್ರತ್ಯಕ್ಷ ಅನುಮಾನ, ಸೂತ್ರ, ಗೀತಾ, ಈ ಎಲ್ಲ ಪ್ರಮಾಣಗಳು ಈ ಜಗತ್ತು ಸತ್ಯವಾದುದು ಎಂದು ತಿಳಿಸುತ್ತಿದ್ದರೂ ಮೇಲೆ ನಿರೂಪಿಸಿದ ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವ 'ವಾಚಾರಂಭಣಂ' ಮುಂತಾದ ಶ್ರುತಿಗಳಿಗೆ ವಿರುದ್ಧವಾಗುವುದರಿಂದ 'ವಿಶ್ವಂ ಸತ್ಯಂ' ಇತ್ಯಾದಿ ಶ್ರುತಿಗಳಿಂದ ತೋರುವ ಜಗತ್ತಿನ ಸತ್ಯತ್ವವು ವ್ಯಾವಹಾರಿಕ ಸತ್ಯತ್ವ (ಸುಳ್ಳಾದ ನಿಜವು) ವೆಂದು ತಿಳಿಯಬೇಕು; ಪಾರಮಾರ್ಥಿಕ ಸತ್ಯತ್ವ (ನಿಜವಾದ ನಿಜವು) ಅಲ್ಲ ಆದುದರಿಂದ 'ವಿಶ್ವಂ ಸತ್ಯಂ' ಇತ್ಯಾದಿ ಪ್ರಮಾಣಗಳಿಂದ ಜಗತ್ತಿನ ಪಾರಮಾರ್ಥಿಕ ಸತ

ತ್ವವು ಸಿದ್ಧವಾಗುವುದಿಲ್ಲ ಆದುದರಿಂದ ಬ್ರಾಹ್ಮಣವರ್ಣಾದಿ ಜಗತ್ತು ಪಾರಮಾರ್ಥಿಕ ಸತ್ಯವಾದುದಲ್ಲ, ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದಿರುವುದು ) ಎಂದು ಸಿದ್ಧವಾಗುತ್ತದೆ. ಈ ವಿಷಯವಾಗಿ ಕೋರ್ಟಿನವರು ವಿಚಾರ ನಡಿಸಬೇಕೆಂದು ಪ್ರಾರ್ಥನೆ

---

## ವಾದಿಯ ವಕೀಲರ ೧ ಆರ್ಗ್ಯುಮೆಂಟ (ಪುನರ್ನಿರೂಪಣಾ)

ಧರ್ಮರಾಜ ಒಡೆಯರೆ!

( ೧ ) ' ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ' ಇತ್ಯಾದಿ ಶ್ರುತಿಗಳನ್ನು, ಜಗತ್ತು ಮಿಥ್ಯೆ ( ಮೂರು ಕಾಲದಲ್ಲಿಯೂ ಇಲ್ಲದಿರುವುದು ), ಬ್ರಹ್ಮವೊಂದೇ ಸತ್ಯವಾದುದು ಎಂಬ ವಿಷಯದಲ್ಲಿ ಮಿ ಹರಿಹರ ಶರ್ಮರು ಆಧಾರವಾಗಿ ತೆಗೆದುಕೊಳ್ಳುತ್ತಾರೆ ಆದರೆ ಹೀಗೆ ತೆಗೆದುಕೊಳ್ಳುವುದು ಕೆಳಗೆ ಕಾಣಿಸಿದ ಅನೇಕ ಕಾರಣಗಳಿಂದ ಅಯುಕ್ತವಾಗಿದೆ.

( ಅ ) ' ವಾಚಾರಂಭಣಂ ' ಎಂಬ ಶ್ರುತಿಯಲ್ಲಿ ಮಿಥ್ಯೆಯನ್ನು ಬೋಧಿಸುವ ಪದವೇ ಇಲ್ಲ

(ಬ) ' ವಾಚಾರಂಭಣಂ ' ಈ ಪದದ ಮುಂದೆ ' ಮಾತ್ರಂ ' ಎಂಬ ಪದವನ್ನು ಹಾಕಿಕೊಂಡು ' ವಾಚಾರಂಭಣ ಮಾತ್ರಂ' ಶಬ್ದದಿಂದ ಪ್ರತಿಪಾದ್ಯವಾದುದೇ, ವಸ್ತುತಃ ಇಲ್ಲದುದು ( ಮಿಥ್ಯ ) ಹೀಗೆ ವಾಚಾರಂಭಣಂ ಎಂಬ ಪದದ ಅರ್ಥವಾಗುತ್ತದೆ ಹಾಗೆಯೇ ' ನಾಮಧೇಯಂ ' ಈ ಪದದ ಮುಂದೆಯೂ ' ಮಾತ್ರಂ ' ಎಂಬ ಪದವನ್ನು ಸೇರಿಸಿಕೊಂಡು ' ಹೆಸರು ಮಾತ್ರವುಂಟು ಆದರೆ ವಸ್ತುವೇ ಇಲ್ಲ' ' ಹೀಗೆ ನಾಮಧೇಯಂ ' ಎಂಬ ಪದದ ಅರ್ಥವಾಗುತ್ತದೆ ಎಂದು ಹೇಳುವುದೂ ಯುಕ್ತವಾದುದಲ್ಲ. ವೇದದ ಪದಗಳ ಮುಂದುಗಡೆ ತಮಗೆ ಬೇಕಾದ ಪದವನ್ನು ಹೊಸದಾಗಿ ಸೇರಿಸಿಕೊಂಡು ಮಾಡಿದ ಅರ್ಥವು ವೇದಾರ್ಥವಾಗುವುದಾದರೆ ' ಸತ್ಯಂ ಜ್ಞಾನಮನಂತಂ ಬ್ರಹ್ಮ ' ಈ ಶ್ರುತಿಯಲ್ಲಿಯೂ ' ಸತ್ಯಂ ' ಇತ್ಯಾದಿ ಪದಗಳಿಗೆ ' ನ, ನ, ನ, ' ಎಂಬುವುಗಳನ್ನು ಸೇರಿಸಿ, ' ಬ್ರಹ್ಮ ನ ಸತ್ಯಂ'= ಬ್ರಹ್ಮನು ಸತ್ಯ ಅಲ್ಲ, ' ಬ್ರಹ್ಮ ನ ಜ್ಞಾನಂ '=ಬ್ರಹ್ಮನು ಜ್ಞಾನರೂಪನಲ್ಲ ' ಬ್ರಹ್ಮ ನ ಅನಂತಂ ' =ಬ್ರಹ್ಮನು ಅಪರಿಚ್ಛಿನ್ನನಲ್ಲ ಹೀಗೆ ಮಾಡಿದ ಅರ್ಥವೂ ಶ್ರುತ್ಯರ್ಥವಾಗಬೇಕಾದೀತು ಆದುದರಿಂದ ವೇದದಲ್ಲಿ ಇಲ್ಲದ ಪದವನ್ನು ಹೊಸದಾಗಿ ಸೇರಿಸಿಕೊಂಡು ಅದರಿಂದ ತಿಳಿದು ಬರುವ ಅರ್ಥವು ಶ್ರುತ್ಯರ್ಥವೆಂದು ಒಪ್ಪಕೂಡದೆಂಬುದು ಪ್ರತಿವಾದಿಗೂ ಸಮ್ಮತವಿದೆ. ಆದುದರಿಂದ ಈ ಶ್ರುತಿಯು ಕಾರ್ಯರೂಪವಾದ ಘಟಾದಿ ಪದಾರ್ಥಗಳಿಗೆ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ.

( ಕ ) ಮೃತ್ತಿಕಾ ರೂಪವಾದ ಕಾರಣಕ್ಕೆ ಸತ್ಯತ್ವವನ್ನು ಬೋಧಿಸುವ 'ಸತ್ಯಂ' ಎಂಬ ಪದವು ವೇದದಲ್ಲಿ ಇದ್ದರೂ 'ಮೃತ್ತಿಕಾ ಇದು ಬ್ರಹ್ಮಾತಿರಿಕ್ತವಾದುದರಿಂದ ಅದ್ವೈತಿಗಳ ಮತಾನುಸಾರವಾಗಿ ಅದು ಮಿಥ್ಯೆಯೇ ಆದುದು ಆದುದರಿಂದ ಆ ಪದಕ್ಕೆ ಮೃತ್ತಿಕೆಯ ಸತ್ಯತ್ವವನ್ನು ಬೋಧಿಸುವ ತಾತ್ಪರ್ಯವಿಲ್ಲ ಎಂದು ಅದ್ವೈತಿಗಳು ಒಪ್ಪಿಕೊಳ್ಳುತ್ತಾರೆ ಆದುದರಿಂದ ಮೃತ್ತಿಕೆಯ ಕಾರ್ಯರೂಪವಾದ ಘಟಾದಿ ಪದಾರ್ಥಗಳಿಗೆ ಮಿಥ್ಯಾತ್ವವನ್ನು, ಅಥವಾ ಮೃತ್ತಿಕಾರೂಪ ಕಾರಣಕ್ಕೆ ಸತ್ಯತ್ವವನ್ನೂ ಈ ವೇದವು ತಿಳಿಸಿಕೊಡುವುದಿಲ್ಲ ಅದ್ವೈತಮ ತಾನು ಸಾರವಾಗಿ ಮೃತ್ತಿಕೆಯೂ ಕಾರ್ಯವು, ಘಟವು ಕಾರ್ಯವೂ ಆದುದರಿಂದ ಮೃತ್ತಿಕೆ ಸತ್ಯವಾದುದು, ಘಟವು ಮಿಥ್ಯೆಯಾದುದು ಎಂದು ಹೇಳುವುದು ಕೂಡುವುದಿಲ್ಲ

( ಖ ) ಮೃತ್ತಿಕಾರೂಪ ಕಾರಣವು ಸತ್ಯವಾದುದು, ಮೃತ್ತಿಕಾ ಕಾರ್ಯರೂಪ ಘಟಾದಿಗಳು ಮಿಥ್ಯೆಯಾದುವು, ಹೀಗೆಂದು ಶ್ರುತಿಯು ಬೋಧಿಸುತ್ತದೆ ಎಂದು ಒಪ್ಪಿದರೂ ಬ್ರಹ್ಮಾತಿರಿಕ್ತವಾದ ಮೃತ್ತಿಕೆ ಸತ್ಯವಾದುದರಿಂದ ಬ್ರಹ್ಮವೊಂದೇ ನಿಜವೆಂದು, ಸಮಸ್ತ ಜಗತ್ತು ಮಿಥ್ಯೆಯೆಂದು ಅರ್ಥವು ಸಿದ್ಧವಾಗದು ಆದುದರಿಂದ ವಾಚಾರಂಭಣಂ ಈ ಶ್ರುತಿಯು ಜಗನ್ಮಿಥ್ಯಾ ಎಂಬುದಕ್ಕೆ ಆಧಾರವಾಗದು

(೨) 'ತತ್ ಸತ್ಯಂ' ಈ ವಾಕ್ಯದಲ್ಲಿ ಮಿಥ್ಯಾತ್ವ ಬೋಧಕವಾದ ಪದವೇ ಇಲ್ಲ ಈ ವಾಕ್ಯವು ತತ್=ಬ್ರಹ್ಮ, ಸತ್ಯಂ=ಸತ್ಯವಾದುದು ಎಂದಿಷ್ಟೇ ತಿಳಿಸುತ್ತದೆ, ಜಗತ್ತು ಮಿಥ್ಯೆಯಾದುದು ಎಂದು ತಿಳಿಸುವುದಿಲ್ಲ. ತತ್ ಎಂಬ ಪದಕ್ಕೆ 'ಏವ' ಎಂಬ ಪದವನ್ನು ಸೇರಿಸಿಕೊಂಡು 'ತತ್ ಏವ' ಆ ಬ್ರಹ್ಮವೊಂದೇ ಸತ್ಯವಾದುದು, ಎರಡನೇಯ ವಸ್ತುವಾವುದು ಸತ್ಯವಲ್ಲ ಹೀಗೆ ಅರ್ಥ ಮಾಡಬೇಕೆಂದು ಶಂಕರಾಚಾರ್ಯರು ಹೇಳಿದುದು ಸರಿಯಲ್ಲ ಮೊದಲು ಹೇಳಿದಂತೆ ಪದಗಳನ್ನು ಹೊಸದಾಗಿ ಸೇರಿಸಿಕೊಂಡು ಮಾಡಿದ ಅರ್ಥವು ಶ್ರುತ್ಯರ್ಥವಾದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಈ ಶ್ರುತಿಯಲ್ಲಿಯೂ 'ನ' 'ನ' 'ನ' ಎಂಬ ಪದಗಳನ್ನು ಸೇರಿಸಿಕೊಂಡು 'ಬ್ರಹ್ಮ ನ ಸತ್ಯಂ' ( ಬ್ರಹ್ಮನು ಸತ್ಯನಲ್ಲ ) 'ಬ್ರಹ್ಮ ನ ಜ್ಞಾನಂ' ( ಬ್ರಹ್ಮನು ಜ್ಞಾನರೂಪನಲ್ಲ ) 'ಬ್ರಹ್ಮ ನ ಅನಂತಂ' ( ಬ್ರಹ್ಮನು ಅನಂತನಲ್ಲ ) ಎಂದು ಅರ್ಥವು ಶ್ರುತ್ಯರ್ಥವಾಗಬೇಕಾದೀತು ಹೀಗಿದ್ದರೂ ಶಂಕರಾಚಾರ್ಯರು ತಮ್ಮ ಮತವನ್ನು ಸಾಧಿಸುವ ಆಗ್ರಹದಿಂದ ಯಾವುದಾದರೊಂದು ಪದವನ್ನು ಹೊಸದಾಗಿ ಹಾಕಿಕೊಂಡು ಹೇಗಾದರೂ ಅರ್ಥವನ್ನು ಮಾಡಿಕೊಳ್ಳಲಿ ಆ ಅರ್ಥವು ಶ್ರುತ್ಯರ್ಥವಾಗುವುದಿಲ್ಲ ಇಷ್ಟೇ ಅಲ್ಲದೆ ಜಗತ್ತಿಗೆ ಮಿಥ್ಯಾತ್ವವನ್ನು ಬೋಧಿಸುವ ಒಂದು ವಾಕ್ಯವಾದರು ವೇದದಲ್ಲಿ ಇಲ್ಲ

ಆದುದರಿಂದ "ಇತರ ವಾಕ್ಯಗಳು ಜಗತ್ತಿನ ಮಿಥ್ಯಾತ್ವವನ್ನು ಹೇಳುತ್ತಿರುವುದರಿಂದ ಆ ವಾಕ್ಯಗಳಿಗನುಸಾರವಾಗಿ 'ತತ್ ಸತ್ಯಂ' ಈ ಶ್ರುತಿಗೆ 'ಏವ' ಪದವನ್ನು ಸೇರಿಸಿಕೊಳ್ಳಬೇಕು" ಹೀಗೆಯೇ ವಾಚಾರಂಭಣಂ ಎಂಬ ವಾಕ್ಯ

ದಲ್ಲಿ ' ಮಾತ್ರಂ, ' ' ಮಾತ್ರಂ ' ಎಂಬ ಪದವನ್ನು ಸೇರಿಸಿಕೊಂಡು ಅರ್ಥವನ್ನು ಮಾಡಿಕೊಳ್ಳಬೇಕೆಂ'ಬುದು ಸರಿಯಾದುದಲ್ಲ

( ೩ ) ' ಇದಂ ಸರ್ವಂ ಯದಯಮಾತ್ಮಾ ' ಈ ವಾಕ್ಯದಲ್ಲಿ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವ ಪದವಿಲ್ಲ ' ಆತ್ಮಾ ' ಎಂಬ ಪದವು ಮುಖ್ಯವೃತ್ತಿಯಿಂದ ಜಗನ್ಮಿಥ್ಯಾತ್ವವನ್ನು ಬೋಧಿಸುವುದಿಲ್ಲ ಲಕ್ಷಣಾವೃತ್ತಿ ( ಅಮುಖ್ಯ ವೃತ್ತಿ ) ಯನ್ನೇ ಅಂಗೀಕರಿಸಬೇಕಾದರೆ, ' ಆತ್ಮಾ ' ಎಂಬದಕ್ಕೆ ಆತ್ಮಾಧೀನ ಅಥವಾ ' ಆತ್ಮಾಶ್ರಿತ ' ಎಂದು ಅರ್ಥವನ್ನೇಕೆ ಮಾಡಕೂಡದು ? ಇದಲ್ಲದೆ ' ಯೋನ್ಯತ್ರಾತ್ಮನೋ ಬ್ರಹ್ಮವೇದ ' ಈ ಪೂರ್ವದಲ್ಲಿರುವ ವಾಕ್ಯದಲ್ಲಿ ಬ್ರಹ್ಮನಿಂದ ಭಿನ್ನವಾದ ವಸ್ತುವಿನಲ್ಲಿ ಬ್ರಹ್ಮಕ್ಷತ್ರಾದಿಗಳಿಗೆ ಆಶ್ರಿತವಾಗಿವೆ ಎಂದು ತಿಳಿದುಕೊಂಡವನ ನಿಂದೆಯನ್ನು ' ಪರಾದಾತ್ ' ಎಂಬ ಪದದಿಂದ ಮಾಡಿದೆ. ಆದುದರಿಂದ ಬ್ರಾಹ್ಮಣ ಕ್ಷತ್ರಿಯಾದಿ ಸಮಸ್ತ ಪದಾರ್ಥಗಳು ಪರಮಾತ್ಮನನ್ನೇ ಆಶ್ರಯಿಸಿವೆ ಎಂಬ ಅಭಿಪ್ರಾಯವು ಪೂರ್ವವಾಕ್ಯದಲ್ಲಿದೆಯಾದುದರಿಂದ ' ಯದಯಮಾತ್ಮಾ ' ಈ ಉತ್ತರ ವಾಕ್ಯದಲ್ಲಿರುವ ' ಯತ್ ' ಈ ಶಬ್ದವನ್ನು ಸಪ್ತಮ್ಯಂತವೆಂದು ತಿಳಿದು ಬ್ರಾಹ್ಮಣಾದಿ ಸಮಸ್ತ ಜಗತ್ತು ಯಾವ ಪುರುಷನಲ್ಲಿ ಆಶ್ರಿತವಾಗಿದೆಯೋ ಆತನು ಪರಮಾತ್ಮನು ' ಎಂದು ಅರ್ಥಮಾಡಬೇಕು

ಅದ್ವೈತಿಗಳು ಹೇಳಿದ ಅರ್ಥವು ಈ ರೀತಿಯಾಗಿ ಪೂರ್ವವಾಕ್ಯದಿಂದ ವಿರುದ್ಧವಾಗುತ್ತದೆ. ಮತ್ತು 'ಯದಯಂ' ಇದರಲ್ಲಿಯ ' ಯತ್ ' ಎಂಬ ಪದವು ವ್ಯರ್ಥವಾಗುತ್ತದೆ ದ್ವೈತ ಸಿದ್ಧಾಂತಾನುಸಾರವಾಗಿ ಬ್ರಾಹ್ಮಣಾದಿ ಜಗತ್ತು ' ಯತ್=ಯಾವಾತನಲ್ಲಿ ಆಶ್ರಿತವಾಗಿದೆಯೋ ಆತನೇ ಆ ಪರಮಾತ್ಮನೆಂದು ಅರ್ಥವನ್ನು ಹೇಳಿದರೆ ಪೂರ್ವ ವಾಕ್ಯಕ್ಕೆ ಅನುಕೂಲವಾಗುವುದು, ' ಯತ್ ' ಪದಕ್ಕೆ ಸಾರ್ಥಕ್ಯವೂ, ಸರ್ವ ವೈದಿಕ ಪದಗಳಿಗೆ ಮುಖ್ಯಾರ್ಥವನ್ನು ಸ್ವೀಕರಿಸಿದುದು ಆಗುವುದು ಆದುದರಿಂದ ' ಇದಂ ಸರ್ವಂ ಯದಯಮಾತ್ಮಾ ' ಈ ವಾಕ್ಯವು ಜಗನ್ಮಿಥ್ಯಾತ್ವಬೋಧಕವಾಗುವುದಿಲ್ಲ

( ೪ ) ೩—' ಬ್ರಹ್ಮೈವೇದಂ ವಿಶ್ವಂ ' ಈ ಶ್ರುತಿಯಲ್ಲಿ ಜಗನ್ಮಿಥ್ಯಾತ್ವ ಬೋಧಕವಾದ ಪದವಿಲ್ಲ

( ೫ ) ' ಬ್ರಹ್ಮೈವೇದಂ ಪುರಸ್ತಾತ್ ಬ್ರಹ್ಮಪಶ್ಚಾತ್ ಬ್ರಹ್ಮದಕ್ಷಿಣತ ' ಇತ್ಯಾದಿ ಪೂರ್ವವಾಕ್ಯಗಳಿಂದ ಬ್ರಹ್ಮನು ಮುಂಭಾಗದಲ್ಲಿಯೂ, ಹಿಂಭಾಗದಲ್ಲಿಯೂ ಇರುತ್ತಾನೆಂದು ಬ್ರಹ್ಮನ ಅಸ್ತಿತ್ವವನ್ನು ಆಯಾ ಸ್ಥಳದಲ್ಲಿ ಹೇಳಿ ಮುಂದಿನ ' ಬ್ರಹ್ಮೈವೇದಂ ವಿಶ್ವಂ ' ಎಂಬ ವಾಕ್ಯವು ಬ್ರಹ್ಮನು ವಿಶ್ವಂ=ಜಗದ್ವ್ಯಾಪ್ತನೆಂದು ' ಸರ್ವಂ ಸಮಾಪ್ನೋಷಿ ತತೋ ಸರ್ವಃ ' ಎಂಬ ಗೀತಾವಾಕ್ಯಾನುಸಾರವಾಗಿ ಜಗತ್ತಿನಲ್ಲಿ ಬ್ರಹ್ಮನ ವ್ಯಾಪ್ತಿಯನ್ನು ಹೇಳುತ್ತದೆ

( ೬ ) ' ವಿಶ್ವವು ಬ್ರಹ್ಮವೆ ' ಹೀಗೆಂದು ಹೇಳಿದರೂ ಜಗತ್ತು ಬ್ರಹ್ಮನಿಂದ ಅಭಿನ್ನವಾದುದೆಂದೇ ಸಿದ್ಧವಾಗುತ್ತದೆ. ಜಗತ್ತು ಮಿಥ್ಯೆಯಾದುದು ಎಂದು ಸಿದ್ಧವಾಗುವುದಿಲ್ಲ

( d ) ಸುಳ್ಳಾದ ಜಗತ್ತು ಸತ್ಯವಾದ ಬ್ರಹ್ಮಸ್ವರೂಪವಾಗಲಾರದಾದುದ ರಿಂದ ಜಗತ್ತು ಬ್ರಹ್ಮ ಸ್ವರೂಪವೆಂದರೆ ಬ್ರಹ್ಮನಲ್ಲಿ ಕಲ್ಪಿತವಾದುದು ಎಂದು ಹೀಗೆಯೇ ಅರ್ಥಮಾಡಬೇಕೆಂದು ಹೇಳುವುದೂ ಕೂಡುವುದಿಲ್ಲ. ಏಕೆಂದರೆ ಜಗತ್ತು ಮಿಥ್ಯೆ ಎಂದು ಸಿದ್ಧವಾಗದೆ ಆ ಜಗತ್ತು ಸತ್ಯಭೂತ ಬ್ರಹ್ಮಸ್ವರೂಪ ವಾಗುವುದಿಲ್ಲ ಎಂದು ಹೇಳುವುದು ಕೂಡುವುದಿಲ್ಲ ಜಗತ್ತು ಸತ್ಯಭೂತವಾದ ಬ್ರಹ್ಮಸ್ವರೂಪವಲ್ಲವೆಂದು ಸಿದ್ಧವಾದ ಹೊರತು ಅದು ( ಜಗತ್ತು ) ಮಿಥ್ಯೆ ಎಂದು ಸಿದ್ಧವಾಗಲಾರದು ಹೀಗೆ ಅನ್ಯೋನ್ಯಾಶ್ರಯ ದೋಷವುಂಟಾಗುವುದು. ಆದುದರಿಂದ ಈ ವಾಕ್ಯದಿಂದ ಜಗತ್ತು ಮಿಥ್ಯೆಯಾದುದೆಂದು ಸಿದ್ಧವಾಗದು

(೫) ಈ ಉಪನಿಷತ್ತಿನಲ್ಲಿಯೇ 'ತದೇತತ್ ಸತ್ಯಂ' ಈ ವಾಕ್ಯವು ಯಾವ ಪ್ರಕಾರವಾಗಿ ಬ್ರಹ್ಮನ ಪಾರಮಾರ್ಥಿಕ ಸತ್ಯತ್ವವನ್ನು ಬೋಧಿಸುವುದೋ ಅದೇ ಪ್ರಕಾರವಾಗಿ ಎರಡನೆಯದಾದ 'ತದೇತತ್ ಸತ್ಯಂ' ಎಂಬೀ ವಾಕ್ಯವು ಕರ್ಮಾದಿ ರೂಪ ಜಗತ್ತಿನ ಸತ್ಯತ್ವವನ್ನು ಬೋಧಿಸುತ್ತದೆ ಹೀಗೆಂದು ಶಂಕರಾಚಾರ್ಯ ರಾದರೂ ಕರ್ಮಾದಿ ಜಗತ್ತು ಸತ್ಯಂ=ಅವಿತಥಂ=ಸುಳ್ಳಾದುದಲ್ಲ, ಎಂದು ತಮ್ಮ ಭಾಷ್ಯದಲ್ಲಿ ಅರ್ಥವನ್ನು ಮಾಡಿ ತಮ್ಮ ಮತದ ಆಗ್ರಹದಿಂದಲೇ ಬ್ರಹ್ಮನಿಗೆ ಸತ್ಯ ತ್ವವನ್ನು ಹೇಳುವಾಗ್ಗೆ ಜಗತ್ತಿನ ಸತ್ಯತ್ವವು ಆಪೇಕ್ಷಿಕವೆಂದು ಹೇಳಿದ್ದಾರೆ ಶಂಕರಾಚಾರ್ಯರು ಏನೇ ಹೇಳಿಕೊಳ್ಳಲಿ ನಮ್ಮ ವೇದಮಾತೆಯು 'ತದೇತತ್ ಸತ್ಯಂ' ಈ ವಾಕ್ಯದಿಂದ ಬ್ರಹ್ಮನ ಸತ್ಯತ್ವವನ್ನು ಹೇಗೆ ಬೋಧಿಸುವಳೋ ಹಾಗೆಯೇ 'ತದೇತತ್ ಸತ್ಯಂ' ಈ ವಾಕ್ಯದಿಂದ ಜಗತ್ತಿನ ಸತ್ಯತ್ವವನ್ನು ಹೇಳುವುದ ರಿಂದ 'ಬ್ರಹ್ಮೈವೇದಂ ಸರ್ವಂ' ಈ ವಾಕ್ಯವೂ ಕೂಡ ಜಗತ್ತಿನ ಮಿಥ್ಯಾ ತ್ವವನ್ನು ಬೋಧಿಸುವುದಿಲ್ಲ

೫ ( a ) 'ಆತ್ಮೈವೇದಂ ಸರ್ವಂ' ಈ ವಾಕ್ಯದಲ್ಲಿ ಜಗತ್ತಿನ ಮಿಥ್ಯಾ ತ್ವವನ್ನು ಬೋಧಿಸುವ ಪದವಿಲ್ಲ

( b ) ಆತ್ಮ ಶಬ್ದಕ್ಕೆ ಮುಖ್ಯವೃತ್ತಿಯಿಂದಾಗುವ ಅರ್ಥವನ್ನು ಬಿಟ್ಟು ಅಮುಖ್ಯವೃತ್ತಿಯಿಂದಾಗುವ ಅರ್ಥವನ್ನು ಹೇಳಬೇಕಾದರೆ 'ಆತ್ಮಾ' ಈ ಶಬ್ದಕ್ಕೆ ಅಮುಖ್ಯವೃತ್ತಿಯಿಂದಾದ 'ಆತ್ಮನಲ್ಲಿ ಕಲ್ಪಿತ ಎಂಬರ್ಥವನ್ನೇ ಏಕೆ ತೆಗದುಕೊಳ್ಳಬೇಕು 'ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ' ( ಗೀ ) ಇತ್ಯಾದಿ ವಾಕ್ಯಾನುಸಾರವಾಗಿ ಆತ್ಮಾ, ಸರ್ವಂ=ಸರ್ವವ್ಯಾಪ್ತನೆಂಬ ಅರ್ಥ ವನ್ನೇಕೆ ಅಂಗೀಕರಿಸಕೂಡದು ಈ ಅರ್ಥವು 'ಆತ್ಮೈವಾಧಸ್ತಾತ್, ಆತ್ಮಾ ಉಪ ರಿಷ್ಟಾತ್' ಇತ್ಯಾದಿ ಪೂರ್ವವಾಕ್ಯಗಳಿಗೂ ಮತ್ತು ಇತರ ವಾಕ್ಯಗಳಿಗೂ ಅನು ಕೂಲವಾಗಿ, ಅವಿರುದ್ಧವಾಗಿರುತ್ತವೆ

ಆತ್ಮ ಶಬ್ದದ ಅರ್ಥವನ್ನು ಆತ್ಮನಲ್ಲಿ ಕಲ್ಪಿತವಾದುದು ಎಂದು ಮಾಡು ವುದು ಪೂರ್ವವಾಕ್ಯಗಳಿಗೂ ಸತ್ಯಬೋಧಕವಾದ ಅನೇಕವಾದ ಇತರ ವಾಕ್ಯ ಗಳಿಗೂ ವಿರುದ್ಧವಾಗಿದೆ. ಮತ್ತು ಜಗತ್ತು ಕಲ್ಪಿತವಾದುದು ಎಂಬರ್ಥಕ್ಕೆ ಅನು ಕೂಲವಾದ ಪ್ರಮಾಣಗಳ ಇಲ್ಲದಿರುವುದರಿಂದ ಆ ಅರ್ಥವು ಸರಿಯಾದುದಲ್ಲ

( c ) ಮತ್ತು ಈ ಮಂತ್ರದ ತರುವಾಯದಲ್ಲಿರುವ ' ಸರ್ವೇಷು ಲೋಕೇಷು ಕಾಮಚಾರೋಭವತಿ,' ' ಏವಂ ಪಶ್ಯನ್ ಏವಂ ಮನ್ವಾನಃ,' ಇತ್ಯಾದಿ ವಾಕ್ಯಗಳಲ್ಲಿ ' ಪರಲೋಕವು ಉಂಟು, ಅಲ್ಲಿ ಜ್ಞಾನಿಗಳು ಸಂಚರಿಸುತ್ತಾರೆ ಹೀಗೆ ಪರಲೋಕ, ಜ್ಞಾನ, ಸಂಚಾರ ಇತ್ಯಾದಿ ಅನೇಕ ಜಗತ್ತು ಉಂಟು ಎಂದು ಹೇಳಿರುವುದರಿಂದ ಇವುಗಳಿಗೆ ಪೂರ್ವದಲ್ಲಿರುವ ' ಆತ್ಮೈವೇದಂ ಸರ್ವಂ' ಈ ವಾಕ್ಯದ ಅರ್ಥವನ್ನು ಜಗತ್ತು ಮಿಥ್ಯೆಯಾದುದು ಎಂದು ಹೇಳುವುದು ' ನನ್ನ ತಾಯಿ ಬಂಜೆ ' ಎಂಬ ವಾಕ್ಯದಂತೆ ಸ್ವವ್ಯಾಹತ ( ವಿರುದ್ಧ ) ವಾಗುವುದು ಆದುದರಿಂದ ಈ ವಾಕ್ಯದ ಅರ್ಥವು ಜಗತ್ತು ಮಿಥ್ಯೆಯಾದುದೆಂದು ಆಗುವುದಿಲ್ಲ.

( d ) ಪೂರ್ವವಾಕ್ಯದಲ್ಲಿ ಆತ್ಮನನ್ನು ಉದ್ದೇಶಿಸಿ ಉತ್ತರ ದಕ್ಷಿಣ ಭಾಗಗಳಲ್ಲಿರುವನೆಂದು ವಿಧಾನಮಾಡಿರುವದರಿಂದ ಈ ವಾಕ್ಯವಾದರೂ ಆತ್ಮನನ್ನು ಉದ್ದೇಶಿಸಿ ಆತನು ಸರ್ವವ್ಯಾಪ್ತನೆಂದೇ ವಿಧಿಸುತ್ತದೆ, ಹೀಗೆಂದು ಹೇಳುವುದು ಆವಶ್ಯಕವಾದುದರಿಂದ ' ಸರ್ವ ಆತ್ಮಾ ' ಹೀಗೆ ಸರ್ವವನ್ನೂ ಉದ್ದೇಶಿಸಿ ಆತ್ಮಾ ಎಂದರೆ ಆತ್ಮನಲ್ಲಿ ಕಲ್ಪಿತವೆಂದು ವಿಧಾನಮಾಡುವುದು ಕೂಡುವುದಿಲ್ಲ. ಆದುದರಿಂದ 'ಆತ್ಮೈವೇದಂ' ಈ ವಾಕ್ಯವು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ. ಪ್ರತ್ಯುತ ' ಇದಂ ಜಗತ್ ವರಿಷ್ಠಂ ವರತಮಂ ' ಹೀಗೆ ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ಜಗತ್ತಿನ ಉತ್ತಮೋತ್ತಮತ್ವವನ್ನು ಹೇಳಿರುವದರಿಂದ ಜಗತ್ತು ಸತ್ಯವೆಂದೇ ಸಿದ್ಧವಾಗುತ್ತದೆ ಜಗತ್ತು ಸುಳ್ಳಾದರೆ ಅದಕ್ಕೆ ಉತ್ತಮೋತ್ತಮತ್ವವು ಕೂಡುವುದು ಹೇಗೆ? ಈ ಅನೇಕ ಕಾರಣಗಳಿಂದ ಈ ವಾಕ್ಯವು ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವುದಿಲ್ಲ

( e ) ಕಾಠಕ ಮತ್ತು ಬೃಹದಾರಣ್ಯದಲ್ಲಿರುವ ' ನೇಹನಾನಾಸ್ತಿ ಕಿಂಚನ ' ಈ ವಾಕ್ಯದಲ್ಲಿಯೂ ಜಗತ್ತಿನ ಮಿಥ್ಯಾತ್ವ ಬೋಧಕವಾದ ಪದವಿಲ್ಲ

ಕಾಠಕ ವಾಕ್ಯದ ಪೂರ್ವದಲ್ಲಿರುವ ೫೦ ನೇಯ ಮಂತ್ರದಲ್ಲಿ ಪರಮಾತ್ಮನು ಪೂರ್ವದಲ್ಲಿದ್ದ ಜಗತ್ತಿಗೂ, ಮತ್ತು ಮುಂದೆ ಆಗುವ ಜಗತ್ತಿಗೂ ನಿಯಾಮಕನು ಎಂದರೆ ಸ್ವಾಮಿ, ಎಂದು ಜಗತ್ತಿಗೆ ಸತ್ಯತ್ವವನ್ನು ಹೇಳಿದೆ ' ಯತಶ್ಚೋದೇತಿ ಸೂರ್ಯೋಽಸ್ತಂ ಯತ್ರ ಚ ಗಚ್ಛತಿ ' ಈ ೯ ನೆಯ ಮಂತ್ರದ ಅರ್ಥವು, ಸೂರ್ಯನ ಉದಯವೂ, ಅಸ್ತವೂ ಯಾವ ಪರಮಾತ್ಮನ ಪ್ರೇರಣೆಯಿಂದಾಗುತ್ತದೆಯೋ ಆ ಪರಮಾತ್ಮನ ಆಶ್ರಯದಿಂದ ದೇವತೆಗಳು ಇರುತ್ತಾರೆ ಆ ಪರಮಾತ್ಮನನ್ನು ಅತಿ ಕ್ರಮಿಸುವವರು ಯಾರೂ ಇಲ್ಲ ' ಎಂದು ಇರುವುದರಿಂದ ಈ ಪೂರ್ವವಾಕ್ಯದಿಂದ ಸೂರ್ಯಾದಿ ಜಗತ್ತು ಸತ್ಯವಾದುದೆಂದೆ ಸಿದ್ಧವಾಗುತ್ತದೆ.

' ನೇಹನಾನಾಸ್ತಿ ಕಿಂಚನ ' ಈ ವಾಕ್ಯದಿಂದ ಜಗತ್ತಿನ ನಿಷೇಧವನ್ನು ಮಾಡುವುದಕ್ಕಾಗಿ ಈ ವಾಕ್ಯಗಳು ಜಗತ್ತನ್ನು ಅನುವಾದ ಮಾಡುತ್ತಾವೆ ಎಂದು ಹೇಳುವುದು ಯುಕ್ತವಲ್ಲ ಏಕೆಂದರೆ ಪೂರ್ವದಲ್ಲಿ ಯಾವುದಾದರೊಂದು ಪ್ರಮಾಣದಿಂದ ಪದಾರ್ಥದ ಪ್ರಸಕ್ತಿಯಾಗಿದ್ದರೆ ಅದನ್ನು ಅನುವಾದಮಾಡಿ ಬೇರೆ

ಪ್ರಮಾಣಗಳಿಂದ ಅದನ್ನು ನಿಷೇಧಿಸಬೇಕು ಪ್ರಸ್ತುತ, ಇತರ ಪ್ರಮಾಣಗಳಿಂದ ಸ್ವರ್ಗಾದಿ ಜಗತ್ತಿನ ಪ್ರಸಕ್ತಿಯೇ ಇಲ್ಲದೆ ವೇದವು ತಾನೇ ಜನರಿಗೆ ಸ್ವರ್ಗಾದಿ ಲೋಕಗಳು ಇವೆ ಎಂದು ಭ್ರಮವನ್ನು ಹುಟ್ಟಿಸಿ ತಾನೇ ಅದನ್ನು ನಿರಾಕರಿಸುತ್ತದೆಂದು ಹೇಳುವುದು 'ಪ್ರಕ್ಷಾಲನಾದ್ಧಿ ಪಂಕಸ್ಯ ದೂರಾದ ಸ್ಪರ್ಶನಂ ವರಂ' (ಬೇಕೆಂದು ಕೆಸರು ಮಾಡಿಕೊಂಡು ತೊಳೆದುಕೊಳ್ಳುವುದಕ್ಕಿಂತ ಅದನ್ನು ಮುಟ್ಟದಿರುವುದೇ ಲೇಸು) ಎಂಬ ನ್ಯಾಯಕ್ಕ ವಿರುದ್ಧವಾದುದು ಆದುದರಿಂದ ವೇದವು ತಾನೇ ಸ್ವರ್ಗಾದಿ ಲೋಕಗಳ ಭ್ರಮವನ್ನು ಹುಟ್ಟಿಸಿ, ಆ ಮೇಲೆ ನಿಷೇಧಿಸುವುದು ಎಂದು ಹೇಳುವುದು ಯುಕ್ತವಲ್ಲ

'ನೇಹನಾನಾಸ್ತಿ ಕಿಂಚನ' ಈ ವಾಕ್ಯಾನಂತರದಲ್ಲಿ ೧೨ನೆಯ ಮತ್ತು ೧೩ನೆಯ ಮಂತ್ರಗಳಲ್ಲಿ 'ಈಶಾನೋಭೂತಭವ್ಯಸ್ಯ' ಹೀಗೆ ಪರಮಾತ್ಮನು ಭೂತ ಭವಿಷ್ಯತ್ ಜಗತ್ತಿನ ಸ್ವಾಮಿ ಎಂದು ಪುನಃ ಪುನಃ ಹೇಳಿದೆ ನಿಷೇಧಿಸಿದ ಮೇಲೆ ಪುನಃ ಉಂಟೆಂದು ಹೇಳುವುದು ಸಂಭವವಿಸುವುದಿಲ್ಲ ಆದುದರಿಂದ ಈ ಶ್ರುತಿಯು ನಿಷೇಧಾರ್ಥವಾಗಿ ಅನುವಾದಿಸುತ್ತದೆ. ಮತ್ತು ಅದಕ್ಕೆ ಆ ವಿಷಯದಲ್ಲಿ ತಾತ್ಪರ್ಯವಿಲ್ಲ ಹೀಗೆನ್ನುವುದು ಕೂಡುವುದೇ ಇಲ್ಲ ಆದುದರಿಂದ ಈ ಶ್ರುತಿಯಲ್ಲಿ ಉಕ್ತವಾದ ಜಗತ್ತು ಸತ್ಯವೆಂದೇ ತಿಳಿಯಬೇಕು

'ನೇಹನಾನಾಸ್ತಿ ಕಿಂಚನ' ಕಾಠಕ ಮತ್ತು ಬೃಹದಾರಣ್ಯಗಳ ವಾಕ್ಯದ ಪೂರ್ವದಲ್ಲಿ 'ಮನಸೈವೇದ ಮಾಪ್ತವ್ಯಂ ಮನಸೈವಾನು ದ್ರಷ್ಟವ್ಯಂ' ಈ ವಾಕ್ಯಗಳಿವೆ ಈ ವಾಕ್ಯಗಳು, ಜೀವನು ಪರಮಾತ್ಮನನ್ನು ಮನಸಿನಿಂದ ತಿಳಿದುಕೊಳ್ಳುತ್ತಾನೆ, ಎಂದು ಜೀವಜ್ಞಾತಾ, ಪರಮಾತ್ಮನು ಜ್ಞೇಯನು ಮನಸು ಕರಣ, ಹೀಗೆಂದು ತಿಳಿಸಿಕೊಡುತ್ತವೆ ಮತ್ತು ಜೀವನಿಗೂ ಪರಮಾತ್ಮನಿಗೂ, ಜ್ಞಾತೃ, ಜ್ಞೇಯಭಾವವಿರುವುದರಿಂದ ಅವರಲ್ಲಿ ಭೇದವು ಸಿದ್ಧವಾಗುತ್ತದೆ ಹೀಗೆಂದು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ಅನೇಕ ಸ್ಥಳಗಳಲ್ಲಿ ಒಪ್ಪಿದ್ದಾರೆ ಆದುದರಿಂದ ಜೀವ ಪರಮಾತ್ಮರಲ್ಲಿರುವ ಭೇದ, ಜ್ಞಾನ, ಕರಣ (ಮನಸು) ಇತ್ಯಾದಿ ಜಗತ್ತು ಸತ್ಯವಾದುದು ಎಂದು 'ಮನಸೈವೇತಿ' ಎಂಬ ವಾಕ್ಯದಿಂದ ಸಿದ್ಧವಾಗುತ್ತದೆ. ಆದುದರಿಂದ 'ನೇಹನಾನಾಸ್ತಿ ಕಿಂಚನ' ಈ ಶ್ರುತಿಗೆ ಜಗತ್ತು ಮಿಥ್ಯೆಯಾದುದು ಎಂದು ಅರ್ಥ ಮಾಡದೆ 'ಯದೇವೇಹ ತದಮುತ್ರ ಯದಮುತ್ರ ತದನ್ವಿಹ! ಮೃತ್ಯೋಃ ಸಮೃತ್ಯುಮಾಪ್ನೋತಿಯ ಇಹ ನಾನೇವಪಶ್ಯತಿ' (೧೦)=ಯಾವ ಪರಮಾತ್ಮನು ಈ ಲೋಕದಲ್ಲಿರುತ್ತಾನೆಯೋ ಅದೇ ಪರಮಾತ್ಮನು ಪರಲೋಕದಲ್ಲಿಯೂ ಇರುತ್ತಾನೆ ಯಾವ ಪರಮಾತ್ಮನು ಪರಲೋಕದಲ್ಲಿರುತ್ತಾನೆಯೋ ಆತನೇ ಈ ಲೋಕದಲ್ಲಿಯೂ ಇರುತ್ತಾನೆ ಆ ಪರಮಾತ್ಮನ ರೂಪದಲ್ಲಿ ಭೇದವಿಲ್ಲ, ಆತನ ರೂಪದಲ್ಲಿ ಯಾರು ಭೇದವನ್ನು ತಿಳಿಯುತ್ತಾರೆಯೋ ಅವರು ಮೃತ್ಯುವನ್ನು ಹೊಂದುತ್ತಾರೆ. ಹೀಗೆಂದು ಪೂರ್ವವಾಕ್ಯದಲ್ಲಿ ಹೇಳಿರುವುದರಿಂದ 'ಮನಸೈವೇದಮಾಪ್ತವ್ಯಂ ನೇಹನಾನಾಸ್ತಿ ಕಿಂಚನ'

ಈ ವಾಕ್ಯಕ್ಕೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಇರುವ ಪರಮಾತ್ಮನ ಜ್ಞಾನವನ್ನು ಶುದ್ಧ ಮನಸ್ಸಿನಿಂದ ಸಂಪಾದಿಸಬೇಕು ಎಂದರೆ ನಿಯಾಮಕನಾದ ಪರಮಾತ್ಮನ ರೂಪಗಳಲ್ಲಿ ಭೇದವನ್ನು ಎಣಿಸಬಾರದು (ಈ ಲೋಕದಲ್ಲಿರುವ ಪರಮಾತ್ಮನು ಬೇರೆ ಪರಲೋಕದಲ್ಲಿರುವ ಪರಮಾತ್ಮನು ಬೇರೆ, ನನಗೆ ನಿಯಾಮಕನಾದ ಪರಮಾತ್ಮನು ಬೇರೆ, ನಿನಗೆ ನಿಯಾಮಕನಾದ ಪರಮಾತ್ಮನು ಬೇರೆ ಎಂದು ತಿಳಿಯಕೂಡದು) ಇಹ=ಈ ಪರಮಾತ್ಮನಲ್ಲಿ, ಕಿಂಚನ ನಾನಾ=ಪರಮಾತ್ಮನ ಅಂತರ್ಯಾಮಿ ರೂಪಾದಿಗಳಲ್ಲಿ ಭೇದವಿಲ್ಲ, ಯಾರು ಈ ಅಂತರ್ಯಾಮಿ ರೂಪಗಳಲ್ಲಿ ಭೇದವನ್ನು ಎಣಿಸುತ್ತಾರೆಯೋ ಅವರು ನರಕಾದಿ ಅನರ್ಥಗಳನ್ನು ಹೊಂದುತ್ತಾರೆ'' ಎಂದು ಅರ್ಥ ಮಾಡಬೇಕು 'ನೇಹ ನಾನಾಸ್ತಿ ಕಿಂಚನ' ಈ ಬೃಹದಾರಣ್ಯಕದ ೧೯ ನೆಯ ವಾಕ್ಯಕ್ಕೆ ಪೂರ್ವದಲ್ಲಿರುವ ಈಶಾನೋ ಭೂತಭವ್ಯಸ್ಯ' ಎಂಬ ೧೫ ನೆಯ ಮಂತ್ರದಲ್ಲಿ ಪರಮಾತ್ಮನು ಭೂತಭವ್ಯ ಜಗತ್ತಿನ ಸ್ವಾಮಿ ಎಂದು ಹೇಳಿ ಜಗತ್ತಿನ ಸತ್ಯತ್ವವನ್ನು ಹೇಳಿರುತ್ತಾರೆ

೧೬ ನಯ ಮಂತ್ರದಲ್ಲಿಯೂ ಕೂಡ, ಪ್ರಕಾಶಮಾನವಾದ ಪದಾರ್ಥಗಳಿಗೆ ಪ್ರಕಾಶವನ್ನು ಕೊಡುವವನು ಎಂದು ದೇವತೆಗಳು ಪರಮಾತ್ಮನ ಉಪಾಸನೆಯನ್ನು ಮಾಡುತ್ತಾರೆಂದ. ಮತ್ತು ೧೭ ನೆಯ ಮಂತ್ರದಲ್ಲಿ, ಪ್ರಾಣ, ಚಕ್ಷುರಾದಿಗಳು, ಆಕಾಶ ಮುಂತಾದುವುಗಳು ಯಾವ ಪರಮಾತ್ಮನನ್ನು ಆಶ್ರಯಿಸಿರುವುವೊ ಆ ಪರಮಾತ್ಮನು ಸರ್ವಾಶ್ರಯನಾಗಿದ್ದಾನೆ ಎಂದು ತಿಳಿಯುವ ಜನರು ಮೋಕ್ಷವನ್ನು ಹೊಂದುತ್ತಾರೆ. ಅದೇ ಪ್ರಕಾರವಾಗಿ ೧೮ ನೆಯ ಮಂತ್ರದಲ್ಲಿ ಪರಮಾತ್ಮನು ಪ್ರಾಣ, ಚಕ್ಷುಸ್, ಶ್ರೋತ್ರ ಮುಂತಾದವುಗಳಿಗೆ ಚೇಷ್ಟಾ (ವ್ಯಾಪಾರಗಳನ್ನು ನಡೆಸುವ ಶಕ್ತಿ), ದರ್ಶನ (ನೋಡುವ ಶಕ್ತಿ) ಮೊದಲಾದುವುಗಳನ್ನು ಕೊಡುವವನು ಆ ಪರಮಾತ್ಮನನ್ನು ಮನಸಿನಿಂದಯೇ ತಿಳಿಯಬೇಕು ಈ ಪ್ರಕಾರವಾಗಿ ದೇವಾದಿ ಲೋಕಗಳು, ಪ್ರಾಣಗಳು, ಚಕ್ಷುಸ್, ಆಕಾಶ, ಮನಸು, ಜ್ಞಾತೃ, ಜ್ಞೇಯ, ಉಪಾಸನಾ, ಮುಂತಾದ ಎಲ್ಲ ಜಗತ್ತು ಉಂಟೆಂದು ಹೇಳಿದೆ

ಮುಂದೆ ೨೨ ನಯ ಮಂತ್ರದಲ್ಲಿ 'ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ' ಮೊದಲಾದ ವಾಕ್ಯಗಳಿಂದ ಎಲ್ಲಾ ಜಗತ್ತನ್ನು ಒಪ್ಪಿಕೊಂಡು, ಪರಮಾತ್ಮನು ಆ ಜಗತ್ತಿಗ ಒಡಯನೂ, ನಿಯಾಮಕನೂ, ಅಧಿಪತಿಯೂ ಆಗಿದ್ದಾನೆಂದು ಹೇಳಿದೆ 'ಬಂಜೆಯ ಮಗನೇ ಇಲ್ಲದಿರುವಾಗ ಚೈತ್ರನು ಆತನಿಗೆ ನಿಯಾಮಕನು, ಆಶ್ರಯನು ಆಗಿದ್ದಾನೆಂದು ಹೇಳುವುದು ಹೇಗೆ ಸರಿಯಾಗದೋ ಹಾಗೆಯೇ ಜಗತ್ತು ಇಲ್ಲವಾದರೆ ಆ ಜಗತ್ತಿಗೆ ನಿಯಾಮಕನೂ, ಆಶ್ರಯನೂ, ಇತ್ಯಾದಿ ಹೇಳುವುದು ಯುಕ್ತವಾಗುವುದಿಲ್ಲ ಆದುದರಿಂದ 'ನೇಹ ನಾನಾಸ್ತಿ ಕಿಂಚನ' ಈ ಬೃಹದಾರಣ್ಯಕ ವಾಕ್ಯದ ಪೂರ್ವೋತ್ತರದ ವಾಕ್ಯಗಳು ಕೂಡ ಜಗತ್ತು ಸತ್ಯವಾದುದೆಂದು ಹೇಳ ಕೊಡುತ್ತಿವೆ ಇದಲ್ಲದೆ 'ನೇಹ ನಾನಾಸ್ತಿ ಕಿಂಚನ' ಎಂಬ ವಾಕ್ಯದ ಪೂರ್ವದಲ್ಲಿರುವ 'ಮನಸೈವಾನುದ್ರಷ್ಟವ್ಯಂ' ಎಂಬುದೂ ಜೀವ ಪರ

ಮಾತ್ಮರ ಭೇದವು, ಜ್ಞಾನ, ಜ್ಞಾತೃ, ಕರಣ ( ಮನಸು ) ಮುಂತಾದ ಜಗತ್ತು ಸತ್ಯವಾದುದೆಂದೇ ಹೇಳುತ್ತದೆ 'ನೇಹ ನಾನಾಸ್ತಿ' ಈ ವಾಕ್ಯದ 'ಮೃತ್ಯೋಃ ಸ ಮೃತ್ಯುಮಾಪ್ನೋತಿ' ಎಂಬ ಉತ್ತರದ ಭಾಗವಾದರೂ 'ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ' ಎಂದು ಹೇಳುತ್ತದೆ ಮೃತ್ಯು ಮುಂತಾದ ಜಗತ್ತು ಸುಳ್ಳು (ತ್ರಿಕಾಲದಲ್ಲಿಯೂ ಇಲ್ಲದಿರುವುದು) ಎಂದಾದರೆ ಮೃತ್ಯುವಿನಿಂದ ಮೃತ್ಯುವನ್ನು ಹೊಂದುತ್ತಾನೆ ಎಂದು ಹೇಳುವುದು ಹೇಗೆ ಯುಕ್ತವಾಗುವುದು? ಆದುದರಿಂದ ಈ ವಾಕ್ಯವು ಮೃತ್ಯು ಮೊದಲಾದ ಜಗತ್ತು ಉಂಟೆಂದು ತಿಳಿಸಿಕೊಡುತ್ತದೆ ಆದುದರಿಂದ ಮಧ್ಯದಲ್ಲಿರುವ 'ನೇಹ ನಾನಾಸ್ತಿ ಕಿಂಚನ' ಎಂಬೀ ವಾಕ್ಯವು ಜಗತ್ತು ಮಿಥ್ಯೆಯಾದುದೆಂದು ತಿಳಿಸುವದಿಲ್ಲ, ಪ್ರತ್ಯುತ ಜಗತ್ತು ಸತ್ಯವಾದುದೆಂದೇ ಹೇಳುವುದು

'ಯತ್ರ ಹಿ ದ್ವೈತಮಿವ ಭವತಿ' ಈ ವಾಕ್ಯದಲ್ಲಿ 'ಇವ' ಎಂಬುದನ್ನು ಪ್ರಯೋಗಿಸಿರುವುದರಿಂದ ಇದು ದ್ವೈತ ಪ್ರಪಂಚದ ಪಾರಮಾರ್ಥಿಕ ಸತ್ಯತ್ವವನ್ನು ತಿಳಿಸಿಕೊಡುತ್ತದೆಂದು ಶಂಕರಾಚಾರ್ಯರೂ, ಟೀಕಾಕಾರರಾದ ಆನಂದಗಿರಿಗಳೂ, ಸುರೇಶ್ವರಾಚಾರ್ಯರೂ, ಅಂಗೀಕಾರಮಾಡಿರುವುದರಿಂದ ಈ ಶ್ರುತಿಯು ಜಗನ್ಮಿಥ್ಯಾತ್ವವನ್ನು ಹೇಳುತ್ತದೆಂಬುದು ಅದ್ವೈತಿಗಳ ಮಾತಿಗೆಯೇ ವಿರುದ್ಧವಾಗುತ್ತದೆ

'ಯತ್ರ ಹಿ ದ್ವೈತಮಿವ ಭವತಿ' ಈ ವಾಕ್ಯವು ಜಗತ್ತಿನ ಸತ್ಯತ್ವವನ್ನು ಹೇಳುತ್ತಿದ್ದರೂ, 'ವಾಚಾರಂಭಣಂ,' 'ಏಕಮೇವಾದ್ವಿತೀಯಂ' 'ಆತ್ಮೈವೇದಂ ಸರ್ವಂ' ಈ ವಾಕ್ಯಗಳು ಜಗನ್ಮಿಥ್ಯಾತ್ವವನ್ನು ಹೇಳುತ್ತಿವೆಯಾದುದರಿಂದ, ಜಗತ್ತು ಮಿಥ್ಯೆ ಯಾದುದೆಂದೇ ತಿಳಿಯಬೇಕು ಎಂದು ಶಂಕರಾಚಾರ್ಯರು ತಮ್ಮ ಗ್ರಂಥದಲ್ಲಿ ಹೇಳಿದುದು ಸರಿಯಲ್ಲ ಏಕೆಂದರೆ 'ವಾಚಾರಂಭಣಂ,' 'ಆತ್ಮೈವೇದಂ ಸರ್ವಂ' ಈ ಶ್ರುತಿಗಳಲ್ಲಿ ಮಿಥ್ಯಾತ್ವ ಬೋಧಕವಾದ ಪದವೇ ಇಲ್ಲವೆಂದು ಮೊದಲೇ ಹೇಳಿದೆ. 'ಏಕಮೇವಾದ್ವಿತೀಯಂ' ಎಂಬ ವಾಕ್ಯದಲ್ಲಿಯೂ ಕೂಡ ಜಗತ್ತಿನ ಮಿಥಾತ್ವವನ್ನು ತಿಳಿಸುವ ಪದವೇ ಇಲ್ಲ ಇದಲ್ಲದೆ ಶಂಕರಾಚಾರ್ಯರು ಈ ಶ್ರುತಿಯ ಅರ್ಥವು ಜಗತ್ತು ಮಿಥ್ಯೆಯಾದುದು ಎಂದು ತಮ್ಮ ಉಪನಿಷತ್ತಿನ ವ್ಯಾಖ್ಯಾನದಲ್ಲಿ ಹೇಳಿಲ್ಲ 'ಏಕಮೇವ=ಸೃಷ್ಟಿ ಆಗುವ ಪೂರ್ವದಲ್ಲಿ ತನ್ನಿಂದ ಸೃಷ್ಟವಾದ ಪದಾರ್ಥಗಳಿಂದ ರಹಿತನು ( ಸೃಷ್ಟಿಗಿಂತ ಪೂರ್ವದಲ್ಲಿ ಪರಮಾತ್ಮನಿಂದ ಸೃಷ್ಟವಾದ ಪದಾರ್ಥಗಳು ಇರಲಿಲ್ಲ ), 'ಅದ್ವಿತೀಯಂ'=ಸಹಕಾರಿಯಾಗಿರುವ ಎರಡನೆಯ ವಸ್ತುವಿನಿಂದ ರಹಿತನು ( ಪರಮಾತ್ಮನಿಗೆ ಸಹಕಾರಿಯಾದ ಎರಡನೆಯ ವಸ್ತುವಿಲ್ಲ ) ಎಂದು ಶಂಕರಾಚಾರ್ಯರು ಈ ಶ್ರುತಿಯ ಅರ್ಥವನ್ನು ಹೇಳಿರುವುದರಿಂದ ಈ ಶ್ರುತಿಯು ಜಗತ್ತಿನ ಮಿಥ್ಯಾತ್ವವನ್ನು ಹೇಳುವುದಿಲ್ಲ

'ಯತ್ರ ವಾ ಅಸ್ಯ ಸರ್ವಂ ಆತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್'... ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್ ವಿಜ್ಞಾತಾರಮರೇ

ಕೇನ ವಿಜಾನೀಯಾತ್ ' ಈ ವಾಕ್ಯವು ಸ್ವರಸತಃ ( ಸುಲಲಿತವಾಗಿ ) ಜೀವೇಶ್ವರ
ಭೇದವನ್ನು ತಿಳಿಸಿ ಕೊಡುತ್ತದೆಂದು ಬ್ರಹ್ಮವಿದ್ಯಾಭರಣಕಾರನು, ಮತ್ತು ಅಪ್ಪಯ್ಯ
ದೀಕ್ಷಿತನು ತಮ್ಮ ತಮ್ಮ ಗ್ರಂಥಗಳಲ್ಲ ಹೇಳಿದ್ದಾರೆ ' ವಿಜ್ಞಾತಾರಂ ' ಎಂಬ
ಪದವು ಮೋಕ್ಷದಲ್ಲಿಯಾದರೂ ಜ್ಞಾನ ಕರ್ತೃತ್ವವನ್ನು ತಿಳಿಸುತ್ತದೆಂದು
**ಶಂಕರಾಚಾರ್ಯರು** ಹೇಳಿ ತಮ್ಮ ಮತದ ಅಭಿಮಾನದಿಂದ ಅದು ಸಂಸಾರ
ಕಾಲದ ಕರ್ತೃತ್ವವನ್ನು ತಿಳಿಸಿ ಕೊಡುತ್ತದೆಂದು ಹೇಳಿದ್ದಾರೆ. ' ಯೇನೇದಂ '
ಎಂಬ ವಾಕ್ಯವು ಸ್ವರಸತಃ ಭೇದವನ್ನು ಬೋಧಿಸುತ್ತದೆ ನಾವು ( ಅದ್ವೈತಿಗಳು )
ಹೇಳುವ ಅರ್ಥವು ಅಸ್ವರಸವಾಗಿರುತ್ತದೆ, ನಾವು ಮಾಡುವ ವಾಕ್ಯಯೋಜನೆಯು
ಕ್ಲಿಷ್ಟವಾಗಿದೆ, ಆದರೂ ಪೂರ್ವದಲ್ಲಿ ಅಭೇದವು ಪ್ರಸಕ್ತವಾಗಿರುವುದರಿಂದ ಸ್ವರ
ಸತ ಪ್ರಾಪ್ತವಾದ ಭೇದರೂಪ ಅರ್ಥವನ್ನು ಬಿಟ್ಟು ಅಸ್ವರಸವಾದ ಅರ್ಥವನ್ನೇ
ಸ್ವೀಕರಿಸಬೇಕು ಮತ್ತು ವಾಕ್ಯಯೋಜನೆಯ ಕ್ಲೇಶವನ್ನೂ ಸಹಿಸಬೇಕೆಂದು
ಅದ್ವೈತಿಗಳು ಒಪ್ಪಿರುವುದರಿಂದ, ಪೂರ್ವವಾಕ್ಯದಲ್ಲಿ ಅಭೇದವು ಪ್ರಸಕ್ತವಾ
ಗದೇ ಇರುವುದರಿಂದಲೂ ಈ ಶ್ರುತಿಯು ಜಗತ್ತಿನ ಮಿಥ್ಯಾತ್ವವನ್ನು ಜೀವೇಶ್ವರ
ಅಭೇದವನ್ನು ಬೋಧಿಸುವುದಿಲ್ಲ.

ಜಗತ್ತು ಪ್ರಮಾಣಗಳಿಂದ ಉಪಲಬ್ಧವಾಗುತ್ತಿರಲು ಜಗತ್ತು ಇಲ್ಲವೆಂದು
ನಿರೂಪಿಸುವುದು ಅಶಕ್ಯವೆಂಬ ದೂಷಣೆ ಸ್ಪಷ್ಟವಾಗಿ ಇರುವುದರಿಂದ ಸೂತ್ರಕಾರರು
ಜಗತ್ತು ಮಿಥ್ಯೆಯಾದುದೆಂದು ಹೇಳುವ ಬೌದ್ಧ ಮತವನ್ನು ಖಂಡಿಸಲಿಲ್ಲವೆಂದು
ಹೇಳಿ ಜಗತ್ತಿಗ ಮಿಥ್ಯಾತ್ವವನ್ನು ಪುನಃ ತಾವೇ ಹೇಳುವುದು ಸ್ವವ್ಯಾಹತವು

ದ್ವಿತೀಯ ( ಎರಡನೆಯ ) ವಾದ ವಸ್ತು ಇದ್ದರಷ್ಟೆ ಒಬ್ಬನು ಬೇರೆ ಕರಣ
ಗಳಿಂದ ಮತ್ತೊಂದು ವಸ್ತುವನ್ನು ನೋಡುತ್ತಾನೆಂಬುದು ಯುಕ್ತವಾಗುವುದು!
ಅದ್ವೈತ ಮತದ ಪ್ರಕಾರ ಜ್ಞಾನಾತಿರಿಕ್ತ (ಆತ್ಮಾತಿರಿಕ್ತ) ವಾದ ವಸ್ತುವೊಂದೂ
ಇಲ್ಲವೆಂದು ಅಂಗೀಕರಿಸಿದರೆ ಯಾವ ಇಂದ್ರಿಯಗಳಿಂದ ಯಾವ ರೂಪಗಳನ್ನು
ನೋಡಿಯಾನು! ಯಾವ ಪರಮಾತ್ಮನಿಂದ ಜೀವನು ಎಲ್ಲವನ್ನು ತಿಳಿದುಕೊಳ್ಳುತ್ತಾ
ನೆಯೋ ಆ ಪರಮಾತ್ಮನನ್ನು ಜೀವನು ಹೇಗೆ ತಿಳಿದಾನು! ತನ್ನನ್ನು ತಾನೇ ತಿಳಿದು
ಕೊಳ್ಳುವುದು ಹೇಗೆ? ಅದುದರಿಂದ ಮೋಕ್ಷಾವಸ್ಥೆಯಲ್ಲಿ ತನ್ನ ಜ್ಞಾನವೂ, ಪರ
ಮಾತ್ಮನ ಜ್ಞಾನವೂ, ಗಂಧಾದಿ ವಿಷಯಗಳ ಜ್ಞಾನವೂ ಆವಶ್ಯಕವಾಗಿರುತ್ತದೆಂದು
'ಜಕ್ಷನ್ ಕ್ರೀಡನ್ ರಮಮಾಣಃ' ಇತ್ಯಾದಿ ಶ್ರುತಿಯಲ್ಲಿ ಹೇಳಿರುತ್ತದೆ ಆದಕಾರಣ
ಮೋಕ್ಷಾವಸ್ಥೆಯಲ್ಲಿ ಎಲ್ಲವೂ ಆತ್ಮರೂಪವೇ ( ಆತ್ಮಾತಿರಿಕ್ತವಲ್ಲ ) ಎಂದು ಹೇಳ
ಕೂಡದು. ಈ ಪ್ರಕಾರವಾಗಿ ಈ ಶ್ರುತಿಯು ಮೋಕ್ಷಾವಸ್ಥೆಯಲ್ಲಿ ಜ್ಞಾತೃ,
ಜ್ಞೇಯಾದಿ ಪ್ರಪಂಚವು ಉಂಟೆಂದು ಬೋಧಿಸುತ್ತದೆಂಬುದನ್ನು ಕೋರ್ಟಿನವರು
ಲಕ್ಷಿಸಬೇಕೆಂದು ಪ್ರಾರ್ಥನೆ.

( ಅ ) 'ನೇತಿ ನೇತಿ' ಈ ವಾಕ್ಯವು ಮೂರ್ತಾಮೂರ್ತಾತ್ಮಕ ಸಮಸ್ತ
ಜಗತ್ತಿನಿಂದ ಪರಮಾತ್ಮನು ಬೇರೆಯಾಗಿದ್ದಾನೆಂದು ತಿಳಿಸುತ್ತದೆ. ( ಬ್ರಹ್ಮನು

ತಮಗೆ ಭೂಷಣವೂ, ಸುಕೃತ್ ( ಅನುಕೂಲವೂ) ಆದುವೇ ಎಂದು ಅದ್ವೈತಿಗಳು ಹೇಳುತ್ತಾರೆ. ಇಂತಹ ಅನುಪಪನ್ನ (ದುಷ್ಟ) ಮತವನ್ನು ಸ್ವೀಕರಿಸುವುದು ಹೇಗೆ ಯೋಗ್ಯವಾಗುವುದು ?

ಇವೇ ಮೊದಲಾದ ಕಾರಣಗಳಿಂದ 'ತದನನ್ಯತ್ವಂ' ಈ ಪ್ರತಿಜ್ಞಾಭಾಗವು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುತ್ತದೆಂದು ಹೇಳುವುದು ಆಯುಕ್ತವು

( h ) 'ಆರಂಭಣಂ' ಈ ಪದವು 'ವಾಚಾರಂಭಣಂ' ಎಂಬ ಪದದ ಉತ್ತರ ಭಾಗವಾಗಿರುವುದರಿಂದ ಉತ್ತರ ಭಾಗವನ್ನು ಹಿಡಿದು ಶ್ರುತಿಯನ್ನು ಉದಾಹರಣೆಯಾಗಿ ತೋರಿಸುವ ಸಂಪ್ರದಾಯವು ಎಲ್ಲಿಯೂ ಇಲ್ಲದಿರುವುದರಿಂದ 'ಆರಂಭಣ ಶಬ್ದಾದಿಭ್ಯಃ' ಈ ಹೇತು ಭಾಗದಲ್ಲಿರುವ ಆರಂಭಣ ಶಬ್ದದಿಂದ ವಾಚಾರಂಭಣಂ ವಿಕಾರೋ ನಾಮಧೇಯಂ' ಎಂಬ ಶ್ರುತಿಯನ್ನು ಸೂತ್ರವು ತಿಳಿಸಿಕೊಡುತ್ತದೆಂದು ಹೇಳುವುದು ಅಸಂಗತವಾಗುತ್ತದೆ.

ಈ ಮುಂಚೆ ಹೇಳಿದ ಪ್ರಕಾರವಾಗಿ ಜಗತ್ತು ಮಿಥ್ಯೆಯಾದುದು ಎಂಬ ವಿಷಯದಲ್ಲಿ ಶ್ರುತಿ, ಸೂತ್ರ, ಗೀತಾ ,ಪ್ರತ್ಯಕ್ಷ, ಅನುಮಾನ ಇವುಗಳಲ್ಲಿ ಒಂದಾದರೂ ಪ್ರಮಾಣವಿಲ್ಲದಿರುವುದರಿಂದ ಜಗತ್ತು ಪಾರಮಾರ್ಥಿಕ ಸತ್ಯವಾದುದು ಎಂಬ ವಿಷಯದಲ್ಲಿ ಶ್ರುತಿ, ಸೂತ್ರ, ಗೀತಾ, ಪ್ರತ್ಯಕ್ಷ ಅನುಮಾನ ಈ ಎಲ್ಲಾ ಪ್ರಮಾಣಗಳು ಇರುವುದರಿಂದ ಜಗತ್ತು ಪಾರಮಾರ್ಥಿಕ ಸತ್ಯವಾದುದು, ಸುಳ್ಳಾದುದಲ್ಲ ಎಂಬುದನ್ನು ಧರ್ಮರಾಜರು ಮನಸಿನಲಿ ತರಬೇಕೆಂದು ಪ್ರಾರ್ಥನೆ

---

## ಭ್ರಮದ ವಿಷಯದಲ್ಲಿ ವಾದಿಯ ವಕೀಲನ ಆರ್ಗ್ಯುಮೆಂಟು.

ಪ್ರತಿವಾದಿಯ (ಅದ್ವೈತಿಯ) ಮತದ ಪ್ರಕಾರ ಬ್ರಹ್ಮನಲ್ಲಿ ಜಗತ್ತಿನ ಭ್ರಮ ಕೂಡುವುದಿಲ್ಲವಾದುದರಿಂದ ಬ್ರಾಹ್ಮಣವರ್ಣಾದಿ ಜಗತ್ತು ಕಲ್ಪಿತವಾದುದು ಎಂದು ಹೇಳುವುದು ಯುಕ್ತವಲ್ಲ ಕಾರಣಗಳು —

ಭ್ರಮ ಬರಬೇಕಾದರೆ ಅಧಿಷ್ಠಾನವೂ, ಆಶ್ರಯವೂ ( ಭ್ರಮಹೊಂದುವ ಮನುಷ್ಯನು ) ಇರಬೇಕು. ಅಧಿಷ್ಠಾನದಲ್ಲಿ ಸಾಮಾನ್ಯಧರ್ಮ, ವಿಶೇಷಧರ್ಮ, ಆರೋಪಿತವಾಗಬೇಕಾದ ವಸ್ತುವಿನ ಸಾದೃಶ್ಯ (ಹೋಲಿಕೆ) ಇರಬೇಕು ಭ್ರಾಂತನಾಗುವ ಮನುಷ್ಯನಿಗೆ ಅಧಿಷ್ಠಾನದಲ್ಲಿಯ ಸಾಮಾನ್ಯ ಧರ್ಮದ ಜ್ಞಾನ, ವಿಶೇಷ ಧರ್ಮದ ಅಜ್ಞಾನ, ಆರೋಪಿತವಾಗುವ ವಸ್ತುವಿನ ಸಾದೃಶ್ಯ ಜ್ಞಾನ ಇರಬೇಕು ಆ ಜ್ಞಾನಕ್ಕೆ ಕಾರಣೀಭೂತವಾದ ದೇಹೇಂದ್ರಿಯಾದಿಗಳೂ ಬೇಕು. ಉದಾಹರಣೆ — ರಜ್ಜುವಿನಲ್ಲಿ ಸರ್ಪದ ಭ್ರಮವಾಗುವುದಕ್ಕೆ ಕಾರಣವಾಗಿರುವ 'ಇದಂತ್ವ' ರೂಪ ( ಮುಂದುಗಡೆ ಇರುವಿಕೆ ) ಸಾಮಾನ್ಯ ಧರ್ಮ, ಮತ್ತು

ಜಗದ್ರೂಪಿ ಅಲ್ಲವೆಂದು ತಿಳಿಸುತ್ತದ ಆದರೆ ಜಗತ್ತು ಇಲ್ಲವೇದು ತಿಳಿಸುವದಿಲ್ಲ ಪಟ ಇಲ್ಲವೆಂದರೆ ಪಟಕ್ಕೆ ಮಿಥ್ಯಾತ್ವವು ಬರುತ್ತದೆ ಆದರೆ ಘಟವು ಪಟ ರೂಪ ಅಲ್ಲವೆಂದು ಹೇಳಿದರೆ ಪಟಕ್ಕೆ ಮಿಥ್ಯಾತ್ವವು ಬರುವುದಿಲ್ಲ ಘಟವು ಬೇರೆ, ಪಟವು ಬೇರೆ ಎಂಬ ಭೇದವು ಹೇಗೆ ಸಿದ್ಧಿಸುವುದೋ ಹಾಗೆಯೇ ಬ್ರಹ್ಮನು ಮೂರ್ತನಲ್ಲ, ಅಮೂರ್ತನಲ್ಲ ಎಂದು ಹೇಳಿದರೆ ಬ್ರಹ್ಮನಿಗೂ, ಮೂರ್ತಾಮೂರ್ತ ಪದಾರ್ಥ ಗಳಿಗೂ ಭೇದವೇ ಸಿದ್ಧವಾಗುತ್ತದೆ. ಮೂರ್ತಾಮೂರ್ತಾತ್ಮಕವಾದ ಪ್ರಪಂಚವೇ ಮಿಥ್ಯೆಯಾದುದು ಎಂದು ಸಿದ್ಧವಾಗುವುದಿಲ್ಲ

ಈ ವಾಕ್ಯದಲ್ಲಿ ಜಗತ್ತು ಮಿಥ್ಯೆಯಾದುದೆಂದು ತಿಳಿಸಿಕೊಡುವ ಪದವೇ ಇಲ್ಲದುದರಿಂದ ಈ ವಾಕ್ಯದ ಆಧಾರದಿಂದ ಜಗತ್ತು ಮಿಥ್ಯಯಾದುದು ಎಂದು ಹೇಳುವುದು ಯುಕ್ತವಾಗುವುದಿಲ್ಲ

(೯) 'ಸರ್ವಂ ಖಲ್ವಿದಂ ಬ್ರಹ್ಮ' ಈ ಶ್ರುತಿಯಲ್ಲಿ ಜಗತ್ತಿನ ಮಿಥ್ಯಾತ್ವವನ್ನು ಬೋಧಿಸುವ ಪದವಿಲ್ಲ ಬ್ರಹ್ಮ ಎಂಬ ಪದಕ್ಕೆ 'ಬ್ರಹ್ಮನಲ್ಲಿ ಕಲ್ಪಿತ' ಎಂಬರ್ಥವು ಮುಖ್ಯವೃತ್ತಿಯಿಂದ ಆಗುವುದಿಲ್ಲ. ಲಕ್ಷಣಾವೃತ್ತಿಯಿಂದ (Secondary meaning) ಮಾಡಿದರೆ ಆಗಬಹದು. ಬ್ರಹ್ಮ ಶಬ್ದದ ಮುಖ್ಯಾರ್ಥ ವನ್ನು ಬಿಟ್ಟಮೇಲೆ ಇತರ ಪ್ರಮಾಣಗಳಿಗೆ ಅವಿರುದ್ಧಾರ್ಥವನ್ನೇ ತೆಗೆದು ಕೊಳ್ಳ ಬೇಕು ಶಂಕರಾಚಾರ್ಯರು ಈ ವಾಕ್ಯದ ಮುಂದಿನದಾದ ಸರ್ವಕಾಮಃ ಸರ್ವಗಂಧಃ' ಎಂಬ ವಾಕ್ಯದ ವ್ಯಾಖ್ಯಾನವನ್ನು ಮಾಡುವಾಗ್ಗೆ "ಕಾಮೋಸ್ಮಿ ಭರತರ್ಷಭ" ಎಂಬ ಗೀತಾವಾಕ್ಯಾನುಸಾರ 'ಪರಮಾತ್ಮನು ಸರ್ವಕಾಮ ರೂಪನು' ಹೀಗೆಂದು ಅರ್ಥವನ್ನೇಕ ಹೇಳಕೂಡದು ? ಎಂದು ಶಂಕಿಸಿ ಕಾಮವು ಪರತಂತ್ರವಾದುದು, ಜನ್ಯವಾದುದು, ಈ ಕಾಮಕ್ಕೂ ಪರಮಾತ್ಮನಿಗೂ ಅಭೇದ ವನ್ನು ಹೇಳಿದರೆ ಪರಮಾತ್ಮನ ಸ್ವಾತಂತ್ರ್ಯವೂ, ಅನಾದಿತ್ವವೂ ನಷ್ಟವಾಗು ವುದು ಎಂದು 'ಸರ್ವಕಾಮ' ಪದಕ್ಕೆ 'ಸರ್ವಕಾಮಗಳಸ್ವಾಮಿ ಎಂದು ಅರ್ಥ ವನ್ನು ಹೇಳಿದ್ದಾರೆ. 'ಕಾಮೋಸ್ಮಿ' ಎಂಬೀ ಗೀತಾ ವಾಕ್ಯಕ್ಕಾದರೂ ಕೃಷ್ಣ ಪರ ಮಾತ್ಮನು ಕಾಮರೂಪನೆಂದು ಅರ್ಥ ಮಾಡದೆಯೆ, ಕಾಮಕ್ಕೆ ಈಶ್ವರ—ಪಾರ ತಂತ್ರ್ಯವನ್ನೇ ಹೇಳಬೇಕು (ಕೃಷ್ಣ ಪರಮಾತ್ಮನು ಕಾಮಕ್ಕೆ ಸ್ವಾಮಿಯಾಗಿ ದ್ದಾನೆ ಹೀಗೆಂದೇ ಅರ್ಥವನ್ನು ಹೇಳಬೇಕು) ಎಂದು ಹೇಳಿದ್ದಾರೆ ಮತ್ತು 'ಸರ್ವಸ್ಯವಶೀ ಏಷ ಸರ್ವೇಶ್ವರಃ ಸರ್ವಸ್ಯಾಧಿಪತಿಃ ಸರ್ವಸ್ಯೇಶಾನಃ ಏಷ ಭೂತಾದಿಪತಿಃ ಏಷಭೂತಪಾಲಃ' ಇತ್ಯಾದ್ಯನೇಕ ವೇದವಾಕ್ಯಗಳಿಗೂ ಸರ್ವ ಜಗತ್ತು ಬ್ರಹ್ಮನ ಅಧೀನದಲ್ಲಿದೆ, ಬ್ರಹ್ಮನು ಜಗತ್ತಿನ ಸ್ವಾಮಿಯಾಗಿದ್ದಾನ ಎಂದು ಅರ್ಥವನ್ನು ಹೇಳಿದ್ದಾರೆ. ಮತ್ತು ಬೃ ೨-೫-೧ ಮಂತ್ರದ ವ್ಯಾಖ್ಯಾನದಲ್ಲಿ ಅದ್ವೈತಿಗಳೂ 'ಇದಂ ಸರ್ವಂ'=ಇದು ಸರ್ವಾಪ್ತಿಸಾಧನವಾದುದು (ಎಲ್ಲವನ್ನೂ ದೊರಕಿಸಿ ಕೊಡುವುದಕ್ಕೆ ಕಾರಣವಾದುದು) ಹೀಗೆಂದು ಸರ್ವ ಪದಕ್ಕ ಅರ್ಥ ಮಾಡಿದ್ದಾರೆ. ಇದೇ ಪ್ರಕಾರವಾಗಿ 'ಸರ್ವಂ ಖಲ್ವಿದಂ ಬ್ರಹ್ಮ' ಈ ವಾಕ್ಯಕ್ಕಾ

ದರೂ ಈ ಎಲ್ಲಾ ಜಗತ್ತು ಬ್ರಹ್ಮ=ಬ್ರಹ್ಮನ ಅಧೀನವಾಗಿದೆ, ಅಥವಾ ಇದಂ ಬ್ರಹ್ಮ= ಈ ಬ್ರಹ್ಮನು, ಸರ್ವಂ=ಸರ್ವ ಜಗತ್ತಿಗೆ ನಿಯಾಮಕನು ಆಗಿದ್ದಾನೆ. ಅಥವಾ ಇದಂ ಬ್ರಹ್ಮ=ಈ ಬ್ರಹ್ಮನು ಸರ್ವಂ ಸರ್ವಪ್ರಾಪ್ತಿಗೆ ಸಾಧನ ಆಗಿದ್ದಾನೆ ಎಂದು ಅರ್ಥವನ್ನು ಹೇಳುವುದೇ ಸಮರ್ಪಕವಾಗಿದೆ ಆದುದರಿಂದ 'ಬ್ರಹ್ಮೈವೇದಂ ಸರ್ವಂ' 'ಸರ್ವಂ ಯುದಯಮಾತ್ಮಾ' 'ಆತ್ಮೈವೇದಂ ಸರ್ವಂ' ಇತ್ಯಾದಿ ವಾಕ್ಯಗಳಂತೆಯೇ ಈ ವಾಕ್ಯವಾದರೂ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವುದಿಲ್ಲ

(೧೦) (a) 'ವಾಚಾರಂಭಣಂ' ಇತ್ಯಾದಿ ಶ್ರುತಿಗಳಿಂದ ಜಗತ್ತಿನ ಮಿಥ್ಯಾತ್ವವು ಸಿದ್ಧಿಸುವದಿಲ್ಲವಾದುದರಿಂದ ಆ ಶ್ರುತಿಯ ಆಧಾರದಿಂದ ಜಗತ್ತು ಮಿಥ್ಯೆಯಾದುದು, ಎಂದು 'ತದನನ್ಯತ್ವಮಾರಂಭಣ ಶಬ್ದಾದಿಭ್ಯಃ' ಎಂಬ ಸೂತ್ರವು ಹೇಳುತ್ತದೆಂದು ಶಂಕರಾಚಾರ್ಯರು ವ್ಯಾಖ್ಯಾನ ಮಾಡಿದುದು ಯುಕ್ತವಲ್ಲ

(b) 'ತದನನ್ಯತ್ವಮಾರಂಭಣ ಶಬ್ದಾದಿಭ್ಯಃ' ಈ ಸೂತ್ರದಲ್ಲಿ ಜಗತ್ತಿನ ಮಿಥ್ಯಾತ್ವವನ್ನು ತಿಳಿಸುವ ಪದವೇ ಇಲ್ಲ

(c) ಈ ಸೂತ್ರದಲ್ಲಿ ಜಗತ್ತನ್ನು ತಿಳಿಸುವ ಪದವೇ ಇಲ್ಲ 'ತತ್' ಪದದಿಂದ 'ಜಗತ್ತನ್ನು ತೆಗೆದುಕೊಳ್ಳಬೇಕು ಎಂಬ ವಿಷಯದಲ್ಲಿ ಆಧಾರವು ಇಲ್ಲ. ಆದುದರಿಂದ ಈ ಸೂತ್ರವು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುತ್ತದೆಂದು ಹೇಳುವುದು ಯುಕ್ತವಲ್ಲ

(d) 'ತದನನ್ಯತ್ವಂ' ಈ ಪದದಲ್ಲಿರುವ 'ತತ್' ಎಂಬ ಪದದಿಂದ ಬ್ರಹ್ಮನನ್ನೇ ತೆಗೆದುಕೊಳ್ಳಬೇಕೆಂಬ ವಿಷಯದಲ್ಲಿಯೂ ಆಧಾರವಿಲ್ಲ ಇತರ ಪ್ರಮಾಣಾನುಸಾರವಾಗಿ 'ತತ್' ಪದದಿಂದ 'ಪ್ರಕೃತಿ' ಎಂಬುದನ್ನು ಸ್ವೀಕರಿಸಿ ಜಗತ್ತು ಪ್ರಕೃತಿಯಿಂದ ಅಭಿನ್ನವಾದುದು ಹೀಗೆಂದು ಅರ್ಥವನ್ನೇಕೆ ಮಾಡಕೂಡದು? ಆದುದರಿಂದ 'ತತ್' ಪದದಿಂದ ಬ್ರಹ್ಮ ಎಂದೇ ಅರ್ಥಮಾಡುವದು ಯುಕ್ತವಲ್ಲ

(e) 'ತತ್' ಪದದಿಂದ 'ಬ್ರಹ್ಮ'ನನ್ನು ತೆಗೆದುಕೊಂಡರೂ 'ಅನನ್ಯತ್ವ' ಈ ಪದವು ಜಗತ್ತಿನಲ್ಲಿ ತತ್ ಪದದಿಂದ ಬೋಧ್ಯನಾದ ಯಾವ ಬ್ರಹ್ಮನೋ ಆ ಬ್ರಹ್ಮನ ಅಭೇದವನ್ನ=ಭೇದಾಭಾವವನ್ನೇ ತಿಳಿಸಿಕೊಡುತ್ತದೆ ಹೊರತು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುವುದಿಲ್ಲ

(f) ಭೇದಾಭೇದಗಳು ವಿರುದ್ಧವಾಗಿವೆ ಆದುದರಿಂದ ಜಗತ್ತು ಬ್ರಹ್ಮನಿಂದ ಭಿನ್ನವೆಂದಾದರೂ ಆಗಬೇಕು ಇಲ್ಲವೆ ಅಭಿನ್ನವೆಂದಾದರೂ ಆಗಬೇಕು, ಜಗತ್ತು ಬ್ರಹ್ಮನಿಂದ ಭಿನ್ನವೂ ಅಲ್ಲ ಅಭಿನ್ನವು ಅಲ್ಲ ಎಂಬ ಅದ್ವೈತಿಗಳು ಹೇಳುವುದು ಕೂಡುವುದಿಲ್ಲ

(g) ತಮ್ಮ (ಅದ್ವೈತ) ಮತವು ಮಾಯಾಕಲ್ಪಿತವಾದುದರಿಂದ ಎಷ್ಟೆಷ್ಟು ಅನುಪಪತ್ತಿಗಳು (ದೋಷಗಳು) ಉಂಟಾದರೂ ಆ ಅನುಪಪತ್ತಿಗಳು

ತಮಗೆ ಭೂಷಣವೂ, ಸುಹೃತ್ ( ಅನುಕೂಲವೂ) ಆದುವೇ ಎಂದು ಅದ್ವೈತಿಗಳು ಹೇಳುತ್ತಾರೆ. ಇಂತಹ ಅನುಪಪನ್ನ (ದುಷ್ಟ) ಮತವನ್ನು ಸ್ವೀಕರಿಸುವುದು ಹೇಗೆ ಯೋಗ್ಯವಾಗುವುದು?

ಇವೇ ಮೊದಲಾದ ಕಾರಣಗಳಿಂದ ' ತದನನ್ಯತ್ವಂ ' ಈ ಪ್ರತಿಜ್ಞಾಭಾಗವು ಜಗತ್ತಿನ ಮಿಥ್ಯಾತ್ವವನ್ನು ತಿಳಿಸಿಕೊಡುತ್ತದೆಂದು ಹೇಳುವುದು ಆಯುಕ್ತವು

( h ) ' ಆರಂಭಣಂ ' ಈ ಪದವು ' ವಾಚಾರಂಭಣಂ ' ಎಂಬ ಪದದ ಉತ್ತರ ಭಾಗವಾಗಿರುವುದರಿಂದ ಉತ್ತರ ಭಾಗವನ್ನು ಹಿಡಿದು ಶ್ರುತಿಯನ್ನು ಉದಾಹರಣೆಯಾಗಿ ತೋರಿಸುವ ಸಂಪ್ರದಾಯವು ಎಲ್ಲಿಯೂ ಇಲ್ಲದಿರುವುದರಿಂದ ' ಆರಂಭಣ ಶಬ್ದಾದಿಭ್ಯಃ ' ಈ ಹೇತು ಭಾಗದಲ್ಲಿರುವ ಆರಂಭಣ ಶಬ್ದದಿಂದ ವಾಚಾರಂಭಣಂ ವಿಕಾರೋ ನಾಮಧೇಯಂ ' ಎಂಬ ಶ್ರುತಿಯನ್ನು ಸೂತ್ರವು ತಿಳಿಸಿಕೊಡುತ್ತದೆಂದು ಹೇಳುವುದು ಅಸಂಗತವಾಗುತ್ತದೆ.

ಈ ಮುಂಚೆ ಹೇಳಿದ ಪ್ರಕಾರವಾಗಿ ಜಗತ್ತು ಮಿಥ್ಯೆಯಾದುದು ಎಂಬ ವಿಷಯದಲ್ಲಿ ಶ್ರುತಿ, ಸೂತ್ರ, ಗೀತಾ ,ಪ್ರತ್ಯಕ್ಷ, ಅನುಮಾನ ಇವುಗಳಲ್ಲಿ ಒಂದಾದರೂ ಪ್ರಮಾಣವಿಲ್ಲದಿರುವುದರಿಂದ ಜಗತ್ತು ಪಾರಮಾರ್ಥಿಕ ಸತ್ಯವಾದುದು ಎಂಬ ವಿಷಯದಲ್ಲಿ ಶ್ರುತಿ, ಸೂತ್ರ, ಗೀತಾ, ಪ್ರತ್ಯಕ್ಷ ಅನುಮಾನ ಈ ಎಲ್ಲಾ ಪ್ರಮಾಣಗಳು ಇರುವುದರಿಂದ ಜಗತ್ತು ಪಾರಮಾರ್ಥಿಕ ಸತ್ಯವಾದುದು, ಸುಳ್ಳಾದುದಲ್ಲ ಎಂಬುದನ್ನು ಧರ್ಮರಾಜರು ಮನಸಿನಲಿ ತರಬೇಕೆಂದು ಪ್ರಾರ್ಥನೆ

---

## ಭ್ರಮದ ವಿಷಯದಲ್ಲಿ ವಾದಿಯ ವಕೀಲನ ಅರ್ಗ್ಯುಮೆಂಟ್.

ಪ್ರತಿವಾದಿಯ (ಅದ್ವೈತಿಯ) ಮತದ ಪ್ರಕಾರ ಬ್ರಹ್ಮನಲ್ಲಿ ಜಗತ್ತಿನ ಭ್ರಮ ಕೂಡುವುದಿಲ್ಲವಾದುದರಿಂದ ಬ್ರಾಹ್ಮಣವರ್ಣಾದಿ ಜಗತ್ತು ಕಲ್ಪಿತವಾದುದು ಎಂದು ಹೇಳುವುದು ಯುಕ್ತವಲ್ಲ ಕಾರಣಗಳು —

ಭ್ರಮ ಬರಬೇಕಾದರೆ ಅಧಿಷ್ಠಾನವೂ, ಆಶ್ರಯವೂ ( ಭ್ರಮಹೊಂದುವ ಮನುಷ್ಯನು ) ಇರಬೇಕು ಅಧಿಷ್ಠಾನದಲ್ಲಿ ಸಾಮಾನ್ಯಧರ್ಮ, ವಿಶೇಷಧರ್ಮ, ಆರೋಪಿತವಾಗಬೇಕಾದ ವಸ್ತುವಿನ ಸಾದೃಶ್ಯ (ಹೋಲಿಕೆ) ಇರಬೇಕು ಭ್ರಾಂತನಾಗುವ ಮನುಷ್ಯನಿಗೆ ಅಧಿಷ್ಠಾನದಲ್ಲಿಯ ಸಾಮಾನ್ಯ ಧರ್ಮದ ಜ್ಞಾನ, ವಿಶೇಷ ಧರ್ಮದ ಅಜ್ಞಾನ, ಆರೋಪಿತವಾಗುವ ವಸ್ತುವಿನ ಸಾದೃಶ್ಯ ಜ್ಞಾನ ಇರಬೇಕು ಆ ಜ್ಞಾನಕ್ಕೆ ಕಾರಣೀ ಭೂತವಾದ ದೇಹೇಂದ್ರಿಯಾದಿಗಳೂ ಬೇಕು. ಉದಾಹರಣೆ — ರಜ್ಜುವಿನಲ್ಲಿ ಸರ್ಪದ ಭ್ರಮವಾಗುವುದಕ್ಕೆ ಕಾರಣವಾಗಿರುವ 'ಇದಂತ್ವ' ರೂಪ ( ಮುಂದುಗಡೆ ಇರುವಿಕೆ ) ಸಾಮಾನ್ಯ ಧರ್ಮ, ಮತ್ತು

ರಜ್ಜುತ್ವರೂಪ ( ಹಗ್ಗದ ಧರ್ಮ ) ವಿಶೇಷ ಧರ್ಮ, ಸರ್ಪದ ಹಾಗೆ ಉದ್ದವಿರುವಿಕೆ ಇವೆಲ್ಲ ಉಂಟು ಹಾಗೆಯೇ ಭ್ರಮುವನ್ನು ಹೊಂದುವ ಮನುಷ್ಯನಿಗೆ 'ಇದಂ' ಎಂಬ ಸಾಮಾನ್ಯ ಧರ್ಮದಿಂದ ಕೂಡಿದ ರಜ್ಜುವಿನ ಜ್ಞಾನವುಂಟು ಇದು ರಜ್ಜು ಎಂಬ ರಜ್ಜುತ್ವದ ( ಹಗ್ಗದ ಧರ್ಮದ ) ಜ್ಞಾನವಿರುವುದಿಲ್ಲ, (ಅಜ್ಞಾನವುಂಟು). ಸರ್ಪದ ಹಾಗೆ ಉದ್ದವಿರೋಣದರ ಜ್ಞಾನವೂ, ಆ ಜ್ಞಾನಕ್ಕೆ ಕಾರಣವಾದ ಇಂದ್ರಿಯಾದಿ ಇವುಗಳು ಇರುವುದರಿಂದ ರಜ್ಜುವಿನಲ್ಲಿ ಸರ್ಪದ ಭ್ರಮು ಉಂಟಾಗುತ್ತದೆ 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಹೀಗೆಂದು ಹೇಳುವ ಅದ್ವೈತಿಗಳ ಮತದ ಪ್ರಕಾರ ಬ್ರಹ್ಮಾತಿರಿಕ್ತವಾದ ದ್ವಿತೀಯ ವಸ್ತುವೇ ಇಲ್ಲದಿರುವುದರಿಂದ ಬ್ರಹ್ಮನಲ್ಲಿ ಬ್ರಹ್ಮನಿಗೆಯೇ ಭ್ರಮೆ ಬರುತ್ತದೆ ( ಬ್ರಹ್ಮನೇ ಭ್ರಮೆಗೆ ಅಧಿಷ್ಠಾನವು ಆಶ್ರಯನು ) ಹೀಗೆಂದು ಒಪ್ಪಬೇಕಾಗುತ್ತದೆ ಬ್ರಹ್ಮನು ನಿರ್ಧರ್ಮಕನು ( ಸಕಲ ಧರ್ಮ ರಹಿತನು) ಆಗಿರುವುದರಿಂದ ಆ ಬ್ರಹ್ಮನಲ್ಲಿ ಅಧಿಷ್ಠಾನವಾಗುವುದಕ್ಕೆ ಕಾರಣವಾದ ಸಾಮಾನ್ಯ ಧರ್ಮ, ವಿಶೇಷಧರ್ಮ, ಆರೋಪಿತವಾಗಬೇಕಾಗಿರುವ ಜಗತ್ತಿನ ಹೋಲಿಕೆ ಇವು ಇಲ್ಲ, ಭ್ರಮೆ ಹೊಂದುವವನಿಗೆ ಕಾರಣೀಭೂತವಾದ ಸಾಮಾನ್ಯ ಧರ್ಮದ ಜ್ಞಾನ, ವಿಶೇಷಧರ್ಮದ ಅಜ್ಞಾನ, ಸಾದೃಶ್ಯಜ್ಞಾನ, ಜ್ಞಾನಕ್ಕೆ ಕಾರಣೀಭೂತವಾದ ದೇಹೇಂದ್ರಿಯಾದಿಗಳು ಇಲ್ಲ. ಆದುದರಿಂದ ಬ್ರಹ್ಮನು ಜಗತ್ತಿನ ಭ್ರಮೆಗೆ ಅಧಿಷ್ಠಾನವೂ ಆಶ್ರಯನು(ಭ್ರಾಂತನು) ಆಗಲಾರನು. ಭ್ರಮೆಯ ಅಧಿಷ್ಠಾನ ಮತ್ತು ಆಶ್ರಯ ( ಭ್ರಮೆ ಹೊಂದುವ ) ಪದಾರ್ಥವೇ ಇಲ್ಲದುದರಿಂದ ಜಗತ್ತಿನ ಭ್ರಮೆಯೇ ಕೂಡುವುದಿಲ್ಲ ಅದ್ವೈತ ಮತದಲ್ಲಿ ಭ್ರಮೆಯೇ ಕೂಡುವುದಿಲ್ಲವೆಂದು ನಾವಷ್ಟೇ ಹೇಳುತ್ತೇವೆಂದಲ್ಲ, ಪೂರ್ವದಲ್ಲಿ ಹೇಳಿದ ಪ್ರಕಾರ ಕಾರಣಗಳು ಕೂಡದೆ ಇರುವುದರಿಂದ ಶಂಕರಾಚಾರ್ಯ, ಭಾಮತೀಕಾರ ಮುಂತಾದ ಅದ್ವೈತಿಗಳೇ ೪-೧ ೩ ಈ ಬ್ರಹ್ಮಸೂತ್ರದ ವ್ಯಾಖ್ಯಾನದಲ್ಲಿ 'ಯುಕ್ತಂ ಹಿ' ಇತ್ಯಾದಿ ವಾಕ್ಯಗಳಿಂದ ಅಂಗೀಕರಿಸಿದ್ದಾರೆ ಆದುದರಿಂದ ಜಗತ್ತಿಗೆ ಭ್ರಮುಕೂಡದೆ ಇರುವುದರಿಂದ ಬ್ರಾಹ್ಮಣವರ್ಣಾದಿ ಎಲ್ಲ ಜಗತ್ತು ರಜ್ಜು ಸರ್ಪದಂತೆ ಭ್ರಮುಮೂಲಕವಾಗಿ ತೋರುವ ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದಿರುವುದು) ಎಂದು ಹೇಳುವುದು ಯುಕ್ತವಲ್ಲ

---

## ಭ್ರಮುದ ವಿಷಯದಲ್ಲಿ ಪ್ರತಿವಾದಿಯ ವಕೀಲನ ಆರ್ಗ್ಯುಮೆಂಟ

ಬ್ರಾಹ್ಮಣ ವರ್ಣಾದಿ ಜಗತ್ತು ಬ್ರಹ್ಮನಲ್ಲಿ ಕಲ್ಪಿತವಾದುದು ( ಭ್ರಮೆಯಿಂದ ತೋರುವುದು ) ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದಿರುವುದು )

ಯದ್ಯಪಿ 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಈ ಅದ್ವೈತಮತದ ಪ್ರಕಾರವಾಗಿ ಬ್ರಹ್ಮನಲ್ಲಿ ಬ್ರಹ್ಮನಿಗೆ ಭ್ರಮುವನ್ನು ಒಪ್ಪಬೇಕಾಗುತ್ತದೆ, ಆ ಭ್ರಮುಕ್ಕೆ ಕಾರಣ

ವಾದ ಅಧಿಷ್ಠಾನವಾಗಬೇಕಾಗಿರುವ ಬ್ರಹ್ಮನಲ್ಲಿ ಸಾಮಾನ್ಯ ಧರ್ಮ, ವಿಶೇಷ ಧರ್ಮ ಆರೋಪಿತವಾಗಬೇಕಾದ ಜಗತ್ತಿನ ಸಾದೃಶ್ಯ ಇವು ನಿಜವಾಗಿ ಇರದೆ ಇದ್ದರೂ ಕಲ್ಪಿತವಾದ ಧರ್ಮಗಳು ಇರುವುದರಿಂದ ಬ್ರಹ್ಮನು ಭ್ರಮಕ್ಕೆ ಅಧಿಷ್ಠಾನನಾಗುತ್ತಾನೆ. ಭ್ರಮವನ್ನು ಹೊಂದುವ ಬ್ರಹ್ಮನಲ್ಲಿ ಭ್ರಮ ಹೊಂದುವುದಕ್ಕೆ ಕಾರಣವಾದ ನಿಜವಾದ ಸಾಮಾನ್ಯ ಧರ್ಮದ ಜ್ಞಾನ, ವಿಶೇಷ ಧರ್ಮದ ಅಜ್ಞಾನ, ದೇಹೇಂದ್ರಿಯಾದಿಗಳು ಇರದೆ ಇದ್ದರೂ ಕಲ್ಪಿತವಾದ ಸಾಮಾನ್ಯ ಧರ್ಮದ ಜ್ಞಾನ, ವಿಶೇಷ ಧರ್ಮದ ಅಜ್ಞಾನ, ದೇಹೇಂದ್ರಿಯಾದಿಗಳು ಇರುವುದರಿಂದ ಬ್ರಹ್ಮನಿಗೆ ಭ್ರಮವು ಕೂಡುತ್ತದೆ. ಆ ಧರ್ಮಾದಿಗಳ ಕಲ್ಪನೆಗೆ (ಭ್ರಮಕ್ಕೆ) ಕಾರಣವಾದ ಭ್ರಮಾದಿಗಳೂ ಪೂರ್ವ ಭ್ರಮದಿಂದ ಕಲ್ಪಿತವಾದುವು ಹೀಗೆ ಭ್ರಮಪರಂಪರೆಯನ್ನು ಅಂಗೀಕರಿಸುವುದು ಬೀಜಾಂಕುರ ಪರಂಪರೆಯಂತೆ ಯೋಗ್ಯವಾಗುತ್ತದೆ

ಭ್ರಮೆ ಮಾಯಿಕವಾದುದೆಂದು ಭ್ರಮಕ್ಕೆ ಅನುಪಪತ್ತಿ (ಕೂಡದಿರುವುದು) ಭೂಷಣವೇ ( ಮಾಯಾಯಾಃ ಅನುಪಪತ್ತಿಃ ಭೂಷಣಮೇವ ) ! ಈ ಕಾರಣ ಜಗತ್ತು ಭ್ರಾಂತಿಕಲ್ಪಿತವಾದುದೇ ಆದುದರಿಂದ ಮಿಥ್ಯೆಯಾದುದು ಇದನ್ನು ಕೋರ್ಟಿನವರು ಲಕ್ಷ್ಯದಲ್ಲಿಡಬೇಕು

---

## ಭ್ರಮದ ವಿಷಯದಲ್ಲಿ ವಾದಿಯ ವಕೀಲನ ೧ ಆರ್ಗುಮೆಂಟು.

ಶಂಕರಾಚಾರ್ಯ, ಭಾಮತೀಕಾರ ಮೊದಲಾದ ಅದ್ವೈತಿಗಳು “ಭ್ರಮವುಂಟಾಗುವುದಕ್ಕೆ ಅಧಿಷ್ಠಾನದಲ್ಲಿ ಸಾಮಾನ್ಯ ಧರ್ಮ, ವಿಶೇಷ ಧರ್ಮ, ಆರೋಪಿತವಾಗುವ ಪದಾರ್ಥದ ಸಾದೃಶ್ಯ, ಹಾಗೆಯೇ ಸಾಮಾನ್ಯ ಧರ್ಮವನ್ನು ತಿಳಿಯುವವನು, ವಿಶೇಷ ಧರ್ಮವನ್ನು ತಿಳಿಯದವನು ಇವೆಲ್ಲವೂ ಬೇಕಾಗುತ್ತವೆ, ಅದ್ವೈತ ಮತದಂತೆ ಅವು ಇಲ್ಲವಾದುದರಿಂದ ಭ್ರಮವೇ ಕೂಡುವುದಿಲ್ಲವಾದ ಕಾರಣ ಬ್ರಹ್ಮನಲ್ಲಿ ಜೀವತ್ವವನ್ನು ಆರೋಪಿಸಲು ಬರುವುದಿಲ್ಲವೆಂದು ಜೀವವು ಜೀವವೇ, ಬ್ರಹ್ಮನು ಬಹ್ಮನೇ, ಜೀವನು ಬೇರೆ, ಬ್ರಹ್ಮನು ಬೇರೆ” ಹೀಗೆಂದು ಶಂಕಿಸಿ, ಪ್ರತಿವಾದಿಯ ವಕೀಲನು ಹೇಳಿದಂತೆ ಅವಿದ್ಯಾಕಲ್ಪಿತ ಸಾಮಾನ್ಯ ಧರ್ಮಾದಿಗಳು ಇರುವುದರಿಂದ ಸಾಂಶ ( ಧರ್ಮಗಳಿಂದ ಕೂಡಿದ ) ಪದಾರ್ಥಗಳಲ್ಲಿ ಭ್ರಮವು ಹೇಗೆ ಉಂಟಾಗುತ್ತದೆಯೋ ಹಾಗೆಯೇ ಅವಿಚಾರ ದಶೆಯಲ್ಲಿ ಬ್ರಹ್ಮನಲ್ಲಿ ಭ್ರಮ ಬಂದಂತೆ ತೋರುತ್ತದೆ. ವಸ್ತುತಃ (ವಿಚಾರಮಾಡಿದರೆ) ಭ್ರಮವಿಲ್ಲ, ಭ್ರಮ ಕಲ್ಪಿತ, ಕರ್ತೃತ್ವ, ಭೋಕ್ತೃತ್ವ ಮುಂತಾದ ಸಂಸಾರವಿಲ್ಲ, ಅದ್ವೈತಮತಾನುಸಾರ ಭ್ರಮವೇ ಕೂಡುವುದಿಲ್ಲ, ಸಂಸಾರ ಕೂಡುವುದಿಲ್ಲ ಎಂಬೀ ವಿಷಯವಾಗಿ ದ್ವೈತವಾದಿಯು ಯಾವ ಯಾವ ದೋಷಗಳನ್ನು ಹೇಳುತ್ತಾನೆಯೋ ಆ ಸಮಸ್ತ ದೋಷಗಳು ಬರುತ್ತವೆ ಆದುದರಿಂದ ಈ ಭ್ರಮವೂ,

ಸಂಸಾರವೂ ಹೇಗೆ ಬಂದಿತು ಎಂಬುದನ್ನು ಹೇಳುವುದಕ್ಕೆ ಬರುವುದಿಲ್ಲ ( ಅನಿರ್ವಚನೀಯ ) ವೆಂಬುದೇ ಯುಕ್ತವಾದುದು ” ಹೀಗೆಂದು ( ಬ್ರ ಸೂ. ೪-೧-೩ )ದ ವ್ಯಾಖ್ಯಾನ ಮಾಡುವಾಗ್ಗೆ ಹೇಳಿದ್ದಾರೆ ಆದುದರಿಂದ ಅದ್ವೈತ ಮತಾನುಸಾರ ಭ್ರಮವೇ ಕೂಡುವುದಿಲ್ಲ. ಇದನ್ನು ಧರ್ಮರಾಜ ಪ್ರಭುವು ಮನಸ್ಸಿನಲ್ಲಿರಿಸಬೇಕು.

ಬೌದ್ಧರು ಅದ್ವೈತಿಗಳಂತೆಯೇ ಭ್ರಮ ಪರಂಪರೆಯನ್ನು ಒಪ್ಪಿರಲು, ಅದ್ವೈತಿಗಳು ಅದರಿಂದ ಅನವಸ್ಥಾದೋಷ ಬರುತ್ತದೆಂದು ಬೌದ್ಧರನ್ನು ದೂಷಿಸಲು, ಬೌದ್ಧರು ಬೀಜಾಂಕುರ ಪರಂಪರೆಯಂತೆ ಭ್ರಮ ಪರಂಪರೆಯನ್ನು ಒಪ್ಪುತ್ತೇವೆಂದು ಹೇಳಲು, ‘ಬೀಜಕ್ಕೆ ಅಂಕುರವು ಕಾರಣ,ಅಂಕುರಕ್ಕೆ ಬೀಜವು ಕಾರಣ ಎಂ ಬುದು ಸ್ಪಷ್ಟವಾಗಿರುವುದರಿಂದ ಅವುಗಳ ಕಾರ್ಯಕಾರಣ ಭಾವವು ಪ್ರಾಮಾಣಿಕವಾದುದು ಆದುದರಿಂದ ಆ ಪ್ರಾಮಾಣಿಕವಾದ ಕಾರ್ಯಕಾರಣ ಭಾವವನ್ನು ಕೂಡಿಸುವುದಕ್ಕಾಗಿ ಬೀಜಾಂಕುರ ಪರಂಪರೆಯನ್ನು ಒಪ್ಪುವುದು ಯೋಗ್ಯವಾದುದು, ವಿಜ್ಞಾನದಲ್ಲಿ ಜಗತ್ತಿನ ಭ್ರಮವು ಅಪ್ರಾಮಾಣಿಕವಾದುದರಿಂದ ಆ ಅಪ್ರಾಮಾಣಿಕ ಭ್ರಮವನ್ನು ಕೂಡಿಸುವುದುಕ್ಕಾಗಿ ಕಲ್ಪಿಸುವ ಭ್ರಮ ಪರಂಪರೆಯು ಅಪ್ರಾಮಾಣಿಕವಾಗುತ್ತದಾದಕಾರಣ ದುಷ್ಟವಾಗುತ್ತದೆ, ಆದುದರಿಂದ ಈ ಪರಂಪರೆಯನ್ನು ಒಪ್ಪುವುದು ಯೋಗ್ಯವಲ್ಲ’ ಹೀಗೆಂದು ತಾವೇ ( ಅದ್ವೈತಿಗಳೇ ) ಬೌದ್ಧರನ್ನು ದೂಷಿಸಿದ್ದಾರೆ. ಈಗ ಬ್ರಹ್ಮನಲ್ಲಿ ಜಗತ್ತಿನ ಭ್ರಮವೇ ಇಲ್ಲ (ಅಪ್ರಾಮಾಣಿಕ) ಎಂದು ಒಪ್ಪಿ, ಆ ಅಪ್ರಾಮಾಣಿಕವಾದ ಜಗತ್ತಿನ ಭ್ರಮವನ್ನು ಕೂಡಿಸುವುದಕ್ಕಾಗಿ ಕಲ್ಪಿಸುವ ಪರಂಪರೆಯು ದುಷ್ಟವಾಗುತ್ತದೆ. ಆದುದರಿಂದ ಅದನ್ನು ಅಂಗೀಕರಿಸುವುದು ಯೋಗ್ಯವಲ್ಲವೆಂಬುದು ಅವರ ( ಅದ್ವೈತಿಗಳ ) ವಾಕ್ಯಗಳಿಂದ ಸಿದ್ಧವಾಗುತ್ತಿರಲು ಪುನಃ ಆ ದುಷ್ಟ ಪರಂಪರೆಯನ್ನು ಒಪ್ಪುವುದು ಎಷ್ಟು ಅಯುಕ್ತವಾಗುತ್ತದೆಂಬುದನ್ನು ಕೋರ್ಟಿನವರು ಲಕ್ಷ್ಯದಲ್ಲಿಡಬೇಕು.

ಭ್ರಮವು ಅವಿದ್ಯಾ ಕಲ್ಪಿತವಾದುದರಿಂದ ಯುಕ್ತಿವಿಷಯವಾಗದುದು ( ಕೂಡಿಸುವುದಕ್ಕೆ ಬಾರದುದು ) ಭೂಷಣವೇ, ಭ್ರಮವು ಪ್ರಾಮಾಣಿಕವಾದರೆ ಬ್ರಹ್ಮವೊಂದು ಸತ್ಯ, ಭ್ರಮವೊಂದು ಸತ್ಯ, ಹೀಗೆ ಎರಡು ಸತ್ಯವಾಗಿ ಅದ್ವೈತ ಮತವು ನಷ್ಟವಾದೀತು ಆದುದರಿಂದ ಬ್ರಹ್ಮಾತಿರಿಕ್ತ ಭ್ರಮವಾಗಲಿ, ಇಲ್ಲವೆ ಅದ್ವೈತ ಮತವಾಗಲಿ ಯಾವುದೊಂದು ಪ್ರಾಮಾಣಿಕವಲ್ಲವೆಂದು ಪ್ರತಿವಾದಿಯು ಒಪ್ಪಿದ್ದಾನೆ. ಆದುದರಿಂದ ಅದ್ವೈತ ಮತಾನುಸಾರ ಬ್ರಾಹ್ಮಣವರ್ಣಾದಿ ಜಗತ್ತಿನ ಭ್ರಮವು ಕೂಡುವದಿಲ್ಲವಾದುದರಿಂದ ಜಗತ್ತು ಕಲ್ಪಿತ ( ಭ್ರಮದಿಂದ ತಿಳಿಯತಕ್ಕದ್ದು ) ಎಂದು ಹೇಳುವುದು ಅಯುಕ್ತವಾಗುತ್ತದೆ.

---

# ಸ್ವಾಪ್ನ ಪದಾರ್ಥಗಳ ವಿಷಯವಾಗಿ ವಾದಿಯ ವಕೀಲರ ಆರ್ಗ್ಯುಮೆಂಟು.

ಸ್ವಾಪ್ನ ಪದಾರ್ಥಗಳು ಸತ್ಯವಾದುವು. ಸುಳ್ಳಲ್ಲ. ಕಾರಣಗಳು —

(೧) ಅಥ ರಥಾನ್ ರಥಯೋಗಾನ್ ಪಥಃ ಸೃಜತೆ ಅಥಾನಂದಾನ್ ಮುದಃ ಪ್ರಮುದಃ ಸೃಜತೇ,'' ಅಥ ವೇಶಾಂತಾಃ ಪುಷ್ಕರಿಣೀಃ ಸ್ರವಂತೀಃ ಸೃಜತೇ ಸ ಹಿ ಕರ್ತಾ ( ಬೃ ೪-೩-೧೦ ) ಈ ಶ್ರುತಿಗಳಲ್ಲಿ 'ಯಾವನು ಸರ್ವ ಜಗತ್ತನ್ನು ನಿರ್ಮಿಸುವನೋ ಅವನೇ ಸ್ವಪ್ನಾವಸ್ಥೆಯಲ್ಲಿ ರಥ, ಕುದುರೆ, ಸಂತೋಷ, ಸರೋವರ, ನದಿ ಮುಂತಾದ ಪದಾರ್ಥಗಳ ಸೃಷ್ಟಿಯನ್ನು ಮಾಡುವನು ' ಎಂದು ಹೇಳಿರುವುದರಿಂದ ಸ್ವಾಪ್ನ ಪದಾರ್ಥಗಳು ಸತ್ಯವಾದುವು ಎಂದು ಸಿದ್ಧವಾಗುತ್ತದೆ ಮಿಥ್ಯಾ ( ಮೂರು ಕಾಲದಲ್ಲಿಯೂ ಇಲ್ಲದಿರುವ ) ಪದಾರ್ಥಗಳನ್ನು ಈಶ್ವರನು ಸೃಷ್ಟಿಸುತ್ತಾನೆಂದು ಹೇಳುವುದು ಕೂಡುವುದಿಲ್ಲ.

(೨) '' ಯ ಏಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ'' (ಕಾಠ) ಈ ಶ್ರುತಿಯೂ ಕೂಡ ಜೀವನು ಸುಪ್ತವಾಗಿರುವಾಗ ಪರಮಾತ್ಮನು, ಆಯಾ ಪುರುಷರ ಈಪ್ಸಿತ ( ಬಯಸಿದ ) ಪುತ್ರಾದಿ ಪದಾರ್ಥಗಳನ್ನು ಉತ್ಪನ್ನ ಮಾಡುತ್ತಾನೆ ಎಂದು ಹೇಳುತ್ತದೆ. ಆದುದರಿಂದ ಈ ಸ್ವಪ್ನ ಪದಾರ್ಥಗಳು ಸತ್ಯವಾದುವುಗಳು ಎಂದು ಸಿದ್ಧವಾಗುತ್ತದೆ.

(೩) 'ಸ್ವಪ್ನೇ' ಸಚ್ಚ ಅಸಚ್ಚ ಪಶ್ಯತಿ ( ಷಟ್‌ಪ್ರಂ ) ಈ ಉಪನಿಷತ್ತಿನಲ್ಲಿಯೂ ಕೂಡ ಜೀವನು ಸ್ವಪ್ನಾವಸ್ಥೆಯಲ್ಲಿ ಸತ್ಯವಾದ ಪದಾರ್ಥಗಳನ್ನು ನೋಡುತ್ತಾನೆಂದು ಹೇಳುತ್ತಿರುವುದರಿಂದ ಸ್ವಾಪ್ನ ಪದಾರ್ಥಗಳು ಸತ್ಯವಾದುವು ಎಂದು ಸಿದ್ಧಿಸುತ್ತದೆ.

(೪) 'ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಭಿಪಶ್ಯತಿ | ಸಮೃದ್ಧಿಂತತ್ರ ಜಾನೀಯಾತ್ ತಸ್ಮಿನ್ ಸ್ವಪ್ನನಿದರ್ಶನೇ, ( ಛಾಂ ) ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ(ಐ) ಈ ಎರಡು ಶ್ರುತಿಗಳೂ ಸ್ವಾಪ್ನ ಪದಾರ್ಥಗಳು ಶುಭಕ್ಕೂ, ಅಶುಭಕ್ಕೂ ಸೂಚಕವಾಗಿರುತ್ತವೆಂದು ಸ್ವಾಪ್ನ ಪದಾರ್ಥಗಳಿಗೆ ಶುಭಾಶುಭ ಸೂಚಕತ್ವವನ್ನು (ಅರ್ಥಕ್ರಿಯಾ ಕಾರಿತ್ವ=ಪದಾರ್ಥಗಳ ಉತ್ಪತ್ತಿಯನ್ನು ಕುರಿತು ಕಾರಣತ್ವವನ್ನು) ಹೇಳುವುದರಿಂದ,' ಮತ್ತು ಸ್ವಾಪ್ನ ಪದಾರ್ಥಾಃ ಸತ್ಯಾಃ ಅರ್ಥಕ್ರಿಯಾಕಾರಿತ್ವಾತ್ ' ಇತ್ಯಾದಿ ಅನುಮಾನದಿಂದಲೂ ಸ್ವಾಪ್ನ ಪದಾರ್ಥಗಳು ಸತ್ಯವಾದುವು ಎಂದು ಸಿದ್ಧವಾಗುತ್ತದೆ.

(೫) ಗಜಃ ಸನ್ ಘಟಃ ಸನ್ ಇತ್ಯಾದಿ ಅಬಾಧಿತವಾದ ಪ್ರತ್ಯಕ್ಷದಿಂದಲೂ ಕೂಡ ಸ್ವಾಪ್ನ ಪದಾರ್ಥಗಳು ಸತ್ಯವೆಂದೇ ಸಿದ್ಧವಾಗುತ್ತದೆ.

ಆದುದರಿಂದ ಸ್ವಾಪ್ನ ಪದಾರ್ಥಗಳು ಸತ್ಯವಾಗಿರುವುದರಿಂದ, ಸ್ವಾಪ್ನ ಪದಾರ್ಥಗಳಂತೆ ಜಗತ್ತು ಸುಳ್ಳಾದುದೆಂಬ ಪ್ರತಿವಾದಿಯ ಹೇಳಿಕೆ ಯುಕ್ತವಲ್ಲ.

---

# ಸ್ವಾಪ್ನ ಪದಾರ್ಥಗಳ ವಿಷಯವಾಗಿ ಪ್ರತಿವಾದಿಯ ವಕೀಲರ ಅರ್ಗ್ಯುಮೆಂಟು.

ಸ್ವಾಪ್ನ ಪದಾರ್ಥಗಳು ಸುಳ್ಳು ( ಮಿಥ್ಯಾ ) ಆದುವುಗಳು, ಸತ್ಯವಲ್ಲ. ಕಾರಣಗಳು:—

( ೧ ) ಸ್ವಾಪ್ನ ಪದಾರ್ಥಗಳಿಗೆ ಉಪಾದಾನ ಕಾರಣವು ( ಸ್ವಾಪ್ನ ಪದಾರ್ಥರೂಪದಿಂದ ಪರಿಣತವಾಗುವ ಪದಾರ್ಥವು ) ಇಲ್ಲ. ಆದುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವು.

(೨) ದೇಹದಲ್ಲಿ ಕಂಡು ಬರುವ ಸ್ವಾಪ್ನ ರಥಾದಿ ಪದಾರ್ಥಗಳಿಗೆ ಸಾಕಾಗುವಷ್ಟು ಇರುವುದಕ್ಕೆ ಸ್ಥಳವು ದೇಹದಲ್ಲಿ ಇಲ್ಲವಾದುದರಿಂದ ಸ್ವಾಪ್ನ ರಥಾದಿಗಳು ಮಿಥ್ಯೆಯಾದುವು

( ೩ ) ಸ್ವಪ್ನಾವಸ್ಥೆಯಲ್ಲಿ ರಾತ್ರಿಕಾಲದಲ್ಲಿ ಕಾಣುವ ಹಗಲೂ, ವಸಂತ ಋತುವಿನಲ್ಲಿ ಕಾಣುವ ಗ್ರೀಷ್ಮ ಋತುವೂ ಇರುವುದಿಲ್ಲ ಆದುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವು

( ೪ ) ಒಂದೇ ಕ್ಷಣದಲ್ಲಿ ವಿಚಿತ್ರವಾದ ನಾನಾವಿಧವಾದ ಸ್ವಾಪ್ನ ಪದಾರ್ಥಗಳನ್ನು ನಿರ್ಮಿಸಲು ಸಮರ್ಥನಾದ ಪುರುಷನು ಇಲ್ಲದಿರುವುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು

( ೫ ) ಸ್ವಪ್ನಾವಸ್ಥೆಯಲ್ಲಿ ಸರ್ವೇಂದ್ರಿಯಗಳು ಉಪರತವಾಗಿರುವುದರಿಂದ ಸ್ವಾಪ್ನ ಪದಾರ್ಥಗಳನ್ನು ತಿಳಿಸಿ ಕೊಡುವ ಇಂದ್ರಿಯಗಳು ಇರುವುದಿಲ್ಲವಾದುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು.

( ೬ ) 'ನೇದಂ ರಜತಂ' ಇದು ಬೆಳ್ಳಿಯಲ್ಲ ಎಂಬ ಬಾಧ ಜ್ಞಾನವು ಬರುವುದರಿಂದ ಶುಕ್ತಿಯಲ್ಲಿ ಭಾಸವಾಗುವ ಬೆಳ್ಳಿ ಹೇಗೆ ಸುಳ್ಳಾಗುವದೋ ಹಾಗೆಯೇ 'ನ ತತ್ರ ರಥಾ ನ ರಥಯೋಗಾಃ, ನ ಪಂಥಾನೋ ಭವಂತಿ, ನ ತತ್ರ ಆನಂದಾಃ ಮುದ ಪ್ರಮುದೋ ಭವಂತಿ' ( ಬೃ ೪-೩-೧೦ ) ಈ ಶ್ರುತಿಯಿಂದ ಸ್ವಾಪ್ನ ಪದಾರ್ಥಗಳು ಇಲ್ಲವೆಂಬ ಬಾಧ ಜ್ಞಾನವು ಬರುವುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು, ಸತ್ಯವಾದುವಲ್ಲವೆಂದು, "ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್" ಈ ಬ್ರಹ್ಮ ಸೂತ್ರದಲ್ಲಿ ಬಾದರಾಯಣಾಚಾರ್ಯರು ಹೇಳಿದ್ದಾರೆ ಆದುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವುಗಳು, ಸತ್ಯವಲ್ಲ.

'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಈ ಸೂತ್ರದಲ್ಲಿ ಸ್ವಾಪ್ನ ಪದಾರ್ಥಗಳಿಗೆ ಎಚ್ಚರವಾದ ಕೂಡಲೆ 'ನೇದಂ ಜಾಗ್ರತ್ ಕಿಂತು ಸ್ವಾಪ್ನಮೇವ' ಹೀಗೆ ಬಾಧಜ್ಞಾನ ಬರುವುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು ಎಂದು ಹೇಳಿದೆಯಾದುದರಿಂದ ಸ್ವಾಪ್ನ ಪದಾರ್ಥಗಳು ಸುಳ್ಳು, ಸತ್ಯವಲ್ಲ.

'ಸ್ವಪ್ನೇ ಸಚ್ಚ ಅಸಚ್ಚ ಪಶ್ಯತಿ' (ಷಟ್.) ಈ ಶ್ರುತಿಯು ಸ್ವಾಪ್ನ ಪದಾರ್ಥಗಳ ಪ್ರಾತಿಭಾಸಿಕಸತ್ಯತ್ವವನ್ನು (ತೋರಿಕೆಯ ನಿಜವನ್ನು) ತಿಳಿಸುವುದರಿಂದ ಈ ಶ್ರುತಿಯಿಂದ ಸ್ವಾಪ್ನ ಪದಾರ್ಥಗಳ ಪಾರಮಾರ್ಥಿಕ ಸತ್ಯತ್ವವು ಸಿದ್ಧವಾಗುವುದಿಲ್ಲ

---

## ಸ್ವಾಪ್ನ ಪದಾರ್ಥಗಳ ವಿಷಯದಲ್ಲಿ ವಾದಿಯ ವಕೀಲರ ರೀ ಅರ್ಗ್ಯುಮೆಂಟ್.

ವಾ ವ.—ಮೈ ಲಾರ್ಡ! ಪ್ರತಿವಾದಿಯು 'ಮಾಯಾಮಾತ್ರಂ ತು' ಈ ಸೂತ್ರಕ್ಕೆ ಶಂಕರಾಚಾರ್ಯರು ಮಾಡಿದ ವ್ಯಾಖ್ಯಾನಾನುಸಾರವಾಗಿ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವು ಎಂದು ಹೇಳುವುದಕ್ಕಾಗಿ ನಿರೂಪಿಸಿದ ಆರು ಕಾರಣಗಳು ಅಯುಕ್ತವೂ, ಸ್ವವ್ಯಾಹತವೂ (ತಾವು ಒಪ್ಪಿದುದನ್ನು ವಿರೋಧಿಸವುವು) ಆಗಿವೆ.

(೧) ಬೃಹದಾರಣ್ಯೋಪನಿಷತ್ತಿನ ಭಾಷ್ಯದಲ್ಲಿ 'ವಾಸನಾಮಾತ್ರರೂಪಾನ್' 'ವಾಸನಾಮಯೀ ಸೃಷ್ಟಿ' ಈ ವಾಕ್ಯಗಳಿಂದ ಸ್ವಾಪ್ನ ಪದಾರ್ಥಗಳಿಗೆ ಸಂಸ್ಕಾರವು (ವಾಸನಾ) ಉಪಾದಾನ ಕಾರಣವುಂಟೆಂದು ತಾವೇ ಹೇಳಿ ಸೂತ್ರ ಭಾಷ್ಯದಲ್ಲಿ ಸ್ವಾಪ್ನ ರಥಾದಿ ಪದಾರ್ಥಗಳಿಗೆ ಉಪಾದಾನ ಕಾರಣಗಳು (ರಥಾದಿ ರೂಪಗಳಾಗಿ ಪರಿಣತವಾಗುವ ಕಾರಣಗಳು) ಇಲ್ಲ ಆದುದರಿಂದ ಸ್ವಾಪ್ನ ರಥಾದಿ ಪದಾರ್ಥಗಳು ಮಿಥ್ಯಾ (ಸುಳ್ಳು) ಎಂದು ಹೇಳುವುದು ಅಯುಕ್ತವೂ, ಸ್ವವ್ಯಾಹತವೂ ಆಗಿದೆ ಹಾಗೆಯೇ ಶಂಕರಭಾಷ್ಯವನ್ನು ವ್ಯಾಖ್ಯಾನ ಮಾಡಿದ ಅದ್ವೈತಿಗಳಲ್ಲಿ ದೊಡ್ಡ ಪಂಡಿತರೆಂದು ಹೇಳಿಸಿ ಕೊಳ್ಳುವ ಭಾಮತೀಕಾರರು, ತಮ್ಮ ಬ್ರ ಸೂ. ೨-೧-೩೧ ದ ವ್ಯಾಖ್ಯಾನದಲ್ಲಿ 'ಅಂತಃಕರಣಸಾಧ್ಯಾದೃಷ್ಟಾ ಸ್ವಪ್ನೇ ರಥಾದಿಸೃಷ್ಟಿಃ ಅಶಕ್ಯಾ ಅಪಹ್ನೋತುಂ' ಈ ವಾಕ್ಯದಿಂದ ಸ್ವಾಪ್ನ ಪದಾರ್ಥಗಳಿಗೆ ದೇಹದಲ್ಲಿರುವ ಮನಸಿನಿಂದ ಪರಿಣತವಾದ ವಾಸನಾರೂಪ ಕಾರಣಗಳಿಂದ ರಥಾದಿಗಳು ಉತ್ಪನ್ನವಾಗುತ್ತವೆ ಹೀಗೆ ಹೇಳಿರುವುದರಿಂದ ಸ್ವಾಪ್ನ ಪದಾರ್ಥಗಳು ಮಿಥ್ಯೆಯಾದುವುಗಳು, ಈ ವಿಷಯವಾಗಿ ಸ್ವಾಪ್ನ ಪದಾರ್ಥಗಳಿಗೆ ಉಪಾದಾನ ಕಾರಣಗಳೇ ಇಲ್ಲವೆಂದು ಹೇಳಿದ ಮೊದಲನೆಯ ಕಾರಣವು ಯುಕ್ತವಲ್ಲ

(೨) ಹಾಗೆಯೇ ಸ್ವಾಪ್ನ ರಥಾದಿಗಳಿಗೆ ದೇಹದಲ್ಲಿರುವ ಮನೋಜನ್ಯ ವಾಸನಾ (ಸಂಸ್ಕಾರವೇ) ಕಾರಣವಾಗಿದೆ, ಎಂದು ಹೇಳಿರುವುದರಿಂದ ದೇಹದಲ್ಲಿರುವ ಮನಸ್ಸಿನ ವಾಸನಾದಿಂದ ಪರಿಣತವಾದ ರಥಾದಿಗಳಿಗೆ ಬೇಕಾಗುವಷ್ಟು ಸ್ಥಳವು ದೇಹದಲ್ಲಿ ಇರಲು ಯಾವ ಬಾಧಕವೂ ಇಲ್ಲ ಆದುದರಿಂದ 'ಸ್ವಾಪ್ನ ರಥಾದಿ ಪದಾರ್ಥಗಳಿಗೆ ಯೋಗ್ಯವಾದ (ಇರಲು ಸಾಕಾಗುವ) ಸ್ಥಳವು ದೇಹ

ದಲ್ಲಿ ಇಲ್ಲದುದರಿಂದ ದೇಹದಲ್ಲಿ ಕಾಣುವ ರಥಾದಿಗಳು ಮಿಥ್ಯಾ' ಎಂದು ಹೇಳಿದ ಎರಡನೆಯ ಕಾರಣವೂ ಕೂಡ ಯುಕ್ತವಲ್ಲ.

( ೩ ) ಪರಮಾತ್ಮನು ದೇಹದಲ್ಲಿ ಸ್ವಾಪ್ನ ರಥಾದಿಗಳನ್ನು ಹೇಗೆ ಸೃಜಿಸುವನೋ ಹಾಗೆಯೇ, ಹಗಲನ್ನೂ, ಗ್ರೀಷ್ಮಋತುವನ್ನೂ ಹುಟ್ಟಿಸುವನು. ಆದುದರಿಂದ ಸ್ವಪ್ನದಲ್ಲಿ, ರಾತ್ರಿಯಲ್ಲಿ ಹಗಲೂ, ವಸಂತಋತುವಿನಲ್ಲಿ ಗ್ರೀಷ್ಮಋತುವೂ ಕಾಣಲು ಬಾಧಕವಿಲ್ಲದುದರಿಂದ ರಾತ್ರಿ ನಿದ್ದೆ ಹೋಗುತ್ತಿದ್ದ ಮನುಷ್ಯನು ಸ್ವಪ್ನದಲ್ಲಿ ಹಗಲನ್ನು ನೋಡುತ್ತಾನೆ! ವಸಂತಋತುವಿನಲ್ಲಿ ಮಲಗಿದ ಮನುಷ್ಯನು ಸ್ವಪ್ನದಲ್ಲಿ ಗ್ರೀಷ್ಮಋತುವನ್ನು ನೋಡುತ್ತಾನೆ. ಆ ಕಾಲದಲ್ಲಿ ದಿವಸವು ಇರುವುದಿಲ್ಲ ಗ್ರೀಷ್ಮಋತುವೂ ಇರುವದಿಲ್ಲ. ಆದುದರಿಂದ ಸ್ವಪ್ನದಲ್ಲಿ ಕಂಡು ಬರುವ ಕಾಲವು ಇಲ್ಲವಾದುದರಿಂದ ಅದು ಸುಳ್ಳೆಂದು ಹೇಳಿದ ಮೂರನೆಯ ಕಾರಣವು ಯುಕ್ತವಲ್ಲ.

( ೪ ) 'ಸ ಹಿ ಕರ್ತಾ' ಇತ್ಯಾದಿ ಶ್ರುತಿಯಲ್ಲಿ ಈಶ್ವರನೇ ಸ್ವಾಪ್ನ ಪದಾರ್ಥಗಳ ಕರ್ತೃ (ಕಾರಣ) ಎಂದು ಹೇಳಿದ್ದುದರಿಂದ, ಮತ್ತು 'ಸರ್ವೋಪೇತಾ ಚ ತದ್ದರ್ಶನಾತ್' (ಬ್ರ ಸೂ ೨-೧-೩೦) ಈ ಸೂತ್ರದಲ್ಲಿ 'ಸರ್ವಕರ್ಮಾ' 'ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ' ಇತ್ಯಾದಿ ಪ್ರಮಾಣಗಳನ್ನು ಉಪನ್ಯಾಸ ಮಾಡಿ ಈಶ್ವರನಿಗೆ ವಿಚಿತ್ರ ಸಾಮರ್ಥ್ಯವುಂಟು ಎಂದು ಶಂಕರಾಚಾರ್ಯರು ಒಪ್ಪಿರುವದರಿಂದ, ಒಂದೇ ನಿಮಿಷದಲ್ಲಿ ಸ್ವಾಪ್ನ ಪದಾರ್ಥಗಳನ್ನು ನಿರ್ಮಿಸಲು ಸಮರ್ಥನಾದ ಪುರುಷನು ಇದ್ದಾನೆಂದು ಸಿದ್ಧವಾಗುವುದರಿಂದ, ಒಂದು ನಿಮಿಷದಲ್ಲಿ 'ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿಸುವ ಪುರುಷನು ಇಲ್ಲದುದರಿಂದ ಆ ಪದಾರ್ಥಗಳು ಸುಳ್ಳಾದುವು' ಎಂದು ಹೇಳಿದ ೪ನೆಯ ಕಾರಣವು ಯುಕ್ತವಲ್ಲ

( ೫ ) ಸ್ವಾಪ್ನ ಪದಾರ್ಥಗಳ ಜ್ಞಾನವು ಹುಟ್ಟುವುದು ಎಲ್ಲರಿಗೂ ಅನುಭವ ಸಿದ್ಧವೇ! ಕಾರಣವಿಲ್ಲದೆಯೆ ಕಾರ್ಯವು ಹುಟ್ಟುವದು ಅಸಂಭಾವಿತವಾದುದರಿಂದ ಆ ಜ್ಞಾನಕ್ಕೆ ಕಾರಣವಿರಬೇಕೆಂದು ಎಲ್ಲರೂ ಒಪ್ಪತಕ್ಕದ್ದೇ ಆ ಕಾರಣವು ಯಾವುದೆ? ಹೀಗೆ ವಿಚಾರಮಾಡಲು ಸ್ವಪ್ನ ಕಾಲದಲ್ಲಿ ಮನಸು ಉಪರತವಾಗಿರುವುದಿಲ್ಲವಾದುದರಿಂದ ಆ ಮನಸೇ ಕಾರಣವೆಂದು ಹೇಳಬೇಕು. ಅಥವಾ ಬೇರೆ ಯಾವುದಾದರೊಂದು ಕಾರಣವನ್ನಾದರೂ ಹೇಳಲೇಬೇಕು. ಆದುದರಿಂದ ಸ್ವಾಪ್ನ ಪದಾರ್ಥಗಳ ಜ್ಞಾನಕ್ಕೆ ಕಾರಣವಿಲ್ಲದುದರಿಂದ ಅವು ಸುಳ್ಳೆಂದು ಹೇಳಿದ ೫ನೆಯ ಕಾರಣವೂ ಯುಕ್ತವಲ್ಲ

( ೬ ) "ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ. ಅಥ ರಥಾನ್ ರಥಯೋಗಾನ್ ಪಥಃ ಸೃಜತೇ' ಈ ಶ್ರುತಿಯು ಯಾವ ಸ್ಥಳದಲ್ಲಿ ಪೂರ್ವದಲ್ಲಿ ರಥಾದಿಗಳು ಇರಲಿಲ್ಲವೋ ಅಥ=ಅನಂತರ ಈಶ್ವರನು ರಥಾದಿಗಳನ್ನು ಸೃಜಿಸುತ್ತಾನೆಂದು ಹೇಳುತ್ತದೆ ಆದುದರಿಂದ ಪೂರ್ವದಲ್ಲಿ ರಥಾದಿಗಳು ಇರಲಿಲ್ಲವೆಂದು ( ಪ್ರಾಗಭಾವ ಪ್ರತಿಯೋಗಿ ) ಎಂದು ಸಿದ್ಧವಾಗುತ್ತದೆ ಹೊರತು ಎಂದೂ ಇರಲಿಲ್ಲ ( ಅತ್ಯಂತಾಭಾವ ಪ್ರತಿಯೋಗಿ ) ಎಂದು ಸಿದ್ಧವಾಗುವುದಿಲ್ಲ.

ಲಗ್ನವಾಗುವುದಕ್ಕೆ ಮುಂಚೆ ಮಕ್ಕಳಿರಲಿಲ್ಲ, ಆ ಮೇಲೆ ಆದುವು ಎಂದು ಹೇಳಿದರೆ ಆ ಮಕ್ಕಳು ಲಗ್ನವಾಗುವ ಮುಂಚೆ ಇರಲಿಲ್ಲವೆಂದು ಸಿದ್ದವಾಗುತ್ತದೆ ಹೊರತು ಮಿಥ್ಯಾ ( ಮೂರು ಕಾಲದಲ್ಲಿಯೂ ) ಇರದುವು, ಎಂದು ಸಿದ್ಧ ವಾಗುವುದಿಲ್ಲ,

ಪೂರ್ವದಲ್ಲಿ ಇರಲಿಲ್ಲ ಆ ಮೇಲೆ ಉತ್ಪನ್ನವಾದುವು ಎಂದಿಷ್ಟು ಹೇಳುವ ಮಾತ್ರಕ್ಕೆಯೇ ಆ ಪದಾರ್ಥಗಳು ಸುಳ್ಳೆಂದಾದರೆ ಪೂರ್ವದಲ್ಲಿ ಬಿ ಏ ಆಗಿರ ಲಿಲ್ಲ ಈಗ ಬಿ ಎ ಆದನು, ಪೂರ್ವದಲ್ಲಿ ಮನೆ ಇರಲಿಲ್ಲ, ಈಗ ಮನೆ ಕಟ್ಟಿದೆ ಹೀಗೆಂದು ಹೇಳಿದರೆ ಬಿ, ಏ ಸುಳ್ಳು, ಮನೆ ಸುಳ್ಳು ಎಂದು ತಿಳಿಯಬೇಕಾದೀತು ಆದಕಾರಣ ಈ ಶ್ರುತಿಯು ಪೂರ್ವದಲ್ಲಿ ರಥಾದಿಗಳು ಇರಲಿಲ್ಲ, ಆ ಮೇಲೆ ಉತ್ಪನ್ನ ವಾದುವು ಎಂದು ಹೇಳುವುದರಿಂದ ಸ್ವಾಪ್ನ ರಥಾದಿಗಳು ಎಂದೂ ಇರದುವು ( ಮಿಥ್ಯಾ ) ಎಂದು ಸಿದ್ಧವಾಗುವುದಿಲ್ಲ ಆದುದರಿಂದ ಸ್ವಾಪ್ನ ರಥಾದಿಗಳಿಗೆ 'ನ ತತ್ರ ರಥಾಃ' ಈ ಶ್ರುತಿಯಿಂದ ಬಾಧ ಜ್ಞಾನ ( ಸ್ವಾಪ್ನ ರಥಾದಿಗಳು ಯಾವಾ ಗಲೂ ಇಲ್ಲವೆಂಬ ಜ್ಞಾನವು) ಉತ್ಪನ್ನವಾಗುವುದಿಲ್ಲವಾದುದರಿಂದ 'ಇದಂ ರಜತಂ' ಎಂಬ ಜ್ಞಾನಕ್ಕೆ 'ನೇದಂ ರಜತಂ' ಎಂಬ ಬಾಧ ಜ್ಞಾನ ಬರುತ್ತಿರುವುದರಿಂದ ಹೇಗೆ ಅದನ್ನು ಬೆಳ್ಳಿಯೆಂದು ತಿಳಿಯಕೂಡದೋ ಹಾಗೆಯೇ 'ನ ತತ್ರ ರಥಾಃ ನ ರಥಯೋಗಾಃ' ಈ ಶ್ರುತಿಯಿಂದಲೂ ಸ್ವಾಪ್ನ ರಥಾದಿಗಳು ತ್ರಿಕಾಲದಲ್ಲಿಯೂ ಇರುವುದಿಲ್ಲವೆಂಬ ಬಾಧ ಜ್ಞಾನವು ಉತ್ಪನ್ನವಾಗುವುದರಿಂದ ಸ್ವಾಪ್ನ ಪದಾರ್ಥ ಗಳು ಮಿಥ್ಯಾ=ಸುಳ್ಳು ಎಂದು ತಿಳಿಯಬೇಕೆಂದು ಹೇಳಿದ ಆರನೆಯ ಕಾರಣವೂ ಕೂಡ ಯುಕ್ತವಲ್ಲ ಆದುದರಿಂದ ಶಂಕರಾಚಾರ್ಯರು ಮಾಡಿದ ಸೂತ್ರಾ ರ್ಥವು ಸರಿಯಾದುದಲ್ಲ

'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಈ ಸೂತ್ರದಲ್ಲಿ ಸೂತ್ರಕಾರರು ಸಮಸ್ತ ಸ್ವಾಪ್ನ ಪದಾರ್ಥಗಳಿಗೆ ಬಾಧ ಬರುತ್ತದೆಂದು ಹೇಳಿಲ್ಲ.

ಸಮಸ್ತ ಸ್ವಾಪ್ನ ಪದಾರ್ಥಗಳು ಸುಳ್ಳಾದುವುಗಳು ಎಂಬ ಬಾಧ ಜ್ಞಾನವು ಬರುವುದೇ ಇಲ್ಲ. ನೇದಂ ಜಾಗ್ರತ್ ಕಿಂತು ಸ್ವಾಪ್ನಮೇವ' ಹೀಗೆ ಸ್ವಪ್ನಾ ವಸ್ಥೆಯಲ್ಲಿ ತಿಳಿದು ಬರುವ ಪದಾರ್ಥಗಳು, ಜಾಗ್ರತ್ಕಾಲದಲ್ಲಿ ತಿಳಿದು ಬರುವ ಪದಾರ್ಥಗಳಲ್ಲ, ಸ್ವಾಪ್ನ ಕಾಲದುವೇ ಎಂದು ಬಾಧ ಜ್ಞಾನವು ಬರುತ್ತದೆ. 'ನಾತ್ರ ರಜತಂ' ಇಲ್ಲಿ ಬೆಳ್ಳಿ ಇಲ್ಲ ಎಂಬ ಬಾಧ ಜ್ಞಾನದಂತೆ 'ನಾತ್ರ ವಸ್ತು'= ಇಲ್ಲಿ (ಸ್ವಪ್ನಾವಸ್ಥೆಯಲ್ಲಿ) ಪದಾರ್ಥವೇ ಇಲ್ಲವೆಂಬ ಬಾಧ ಜ್ಞಾನವೇ ಬರುವುದಿಲ್ಲ ವಾದುದರಿಂದ ಸ್ವಾಪ್ನಕಾಲದಲ್ಲಿ ತಿಳಿದು ಬರುವ ಪದಾರ್ಥಗಳಲ್ಲಿ ಇವು ಜಾಗ್ರತ್ ಪದಾರ್ಥಗಳೇ ಹೀಗೆಂದು ಯಾವನು ಜಾಗ್ರತ್ ಪದಾರ್ಥಗಳಿಂದ ಅಭೇದವನ್ನು ತಿಳಿಯುತ್ತಾನೋ ಆ ಜಾಗ್ರತ್ ಪದಾರ್ಥದ ಅಭೇದವು ಬಾಧಿತವಾಗುತ್ತದೆ. ಸ್ವಾಪ್ನ ಪದಾರ್ಥಗಳ ಸ್ವರೂಪವೇ ಬಾಧಿತವಾಗುವುದಿಲ್ಲ.

ಸ್ವಾಪ್ನಕಾಲದಲ್ಲಿ ಯಾವ ಪದಾರ್ಥಗಳು ತಿಳಿದು ಬರುವವೋ ಅವು ಸ್ವಪ್ನಕಾಲದಲ್ಲಿ ಇರತಕ್ಕವೇ ಅವು ಜಾಗ್ರತ್ಕಾಲದಲ್ಲಿ ತಿಳಿದು ಬರುವ ಪದಾರ್ಥಗಳಲ್ಲ. ಇಂತಹ ಜ್ಞಾನ ಬರುವುದರಿಂದೆಯೇ ಆ ಪದಾರ್ಥಗಳು ಸುಳ್ಳಾದುವುಗಳು ಎಂದು ಹೇಳಿದರೆ ವೈಶಾಖಮಾಸದಲ್ಲಿ ನೋಡದೆ ಇದ್ದ ಮನುಷ್ಯನ ವಿಷಯವಾಗಿ ವೈಶಾಖಮಾಸದಲ್ಲಿ ನಾನು ನೋಡಿದ ಮನುಷ್ಯನಿವನು ಎಂಬ ಜ್ಞಾನವುಂಟಾಗಿ ಸ್ವಲ್ಪ ಹೊತ್ತಿನ ಮೇಲೆ ವೈಶಾಖಮಾಸದಲ್ಲಿ ನಾನು ಈ ಮನುಷ್ಯನನ್ನು ನೋಡಿದುದಲ್ಲ ಕಾರ್ತಿಕಮಾಸದಲ್ಲಿ ನೋಡಿದುದು ಹೀಗೆ ಬಾಧ ಜ್ಞಾನ ಬರಲು ಆ ಮನುಷ್ಯನೇ ಸುಳ್ಳೆಂದು ತಿಳಿಯಬೇಕಾದೀತು ಆ ಮನುಷ್ಯನೇ ಸುಳ್ಳೆಂದಾಗದು ಆ ಮನುಷ್ಯನ ವಿಷಯದಲ್ಲಿ ಭಾಸವಾದ ವೈಶಾಖಮಾಸವೃತ್ತಿತ್ವವು ಹೇಗೆ ಸುಳ್ಳಾಗುವುದೋ ಹಾಗೆಯೇ ಗಜಾದಿ ಪದಾರ್ಥಗಳು ಸ್ವಪ್ನದಲ್ಲಿ ನೋಡಿದುವು ಜಾಗ್ರತ್ಕಾಲದಲ್ಲಿ ನೋಡಿದುವುಗಳಲ್ಲ ಎಂಬ ಬಾಧ ಜ್ಞಾನವುಂಟಾಗಲು ಆ ಸ್ವಾಪ್ನ ಪದಾರ್ಥಗಳ ವಿಷಯದಲ್ಲಿ ತಿಳಿದು ಬರುವ ಜಾಗ್ರತ್ಕಾಲವೃತ್ತಿತ್ವವೇ ಸುಳ್ಳೆಂದಾಗುವುದು. ಸ್ವಪ್ನಕಾಲದಲ್ಲಿ ತಿಳಿದು ಬರುವ ಪದಾರ್ಥಗಳೇ ಸುಳ್ಳು ಎಂದು ಆ ಬಾಧ ಜ್ಞಾನದಿಂದ ಸಿದ್ಧಿಸುವುದಿಲ್ಲ ( ಆ ಬಾಧ ಜ್ಞಾನವು ಸಮಸ್ತ ಸ್ವಾಪ್ನ ಪದಾರ್ಥಗಳು ಮಿಥ್ಯಾ=ಅಸತ್ ಆದುವುಗಳು ಎಂದು ತಿಳಿಸಿ ಕೊಡುವುದಿಲ್ಲ )

'ಸಂಧ್ಯೇ ಸೃಷ್ಟಿರಾಹ ಹಿ' ಇತ್ಯಾದಿ ಸೂತ್ರಗಳಲ್ಲಿ ಸೂತ್ರಕಾರರು ಈಶ್ವರನು ಸ್ವಾಪ್ನ ಪದಾರ್ಥಗಳನ್ನು ನಿರ್ಮಿಸುತ್ತಾನೆ ಎಂದು ಹೇಳಿದ್ದಾರೆ ಮತ್ತು 'ಸ್ವಪ್ನೇ.... ಸಚ್ಚ ಅಸಚ್ಚ ಪಶ್ಯತಿ' ( ಷಟ್‌ಪ್ರ. ) ಎಂಬ ಶ್ರುತಿಯು ಸ್ವಾಪ್ನ ಪದಾರ್ಥಗಳು ಸತ್ಯವಾದುವು ಎಂದು ಹೇಳುತ್ತದೆ. ಸರ್ವ ಪ್ರಮಾಣಗಳೂ ಪಾರಮಾರ್ಥಿಕ ಸತ್ಯತ್ವವನ್ನೇ ( ನಿಜವಾದ ನಿಜವನ್ನೇ ) ತಿಳಿಸುತ್ತವೆ, ವ್ಯಾವಹಾರಿಕ ಸತ್ಯತ್ವವನ್ನು ( ತೋರಿಕೆಯ ನಿಜವನ್ನು ) ತಿಳಿಸುವದಿಲ್ಲ. ಹೀಗೆಂದು ಬೌದ್ಧರನ್ನು ಖಂಡಿಸುವಾಗ್ಗೆ ಪ್ರತಿವಾದಿಗಳು ( ಅದ್ವೈತಿಗಳೇ ) ಹೇಳಿದ 'ಸಚ್ಚ ಪಶ್ಯತಿ' ಎಂಬ ಶ್ರುತಿಯಿಂದ ತಿಳಿದು ಬರುವ ಸತ್ಯತ್ವವು ಸುಳ್ಳಾದುದು ಎಂದು ಹೇಳುವುದು ಸ್ವವ್ಯಾಹತವಾಗುತ್ತದೆ ಇವೇ ಮೊದಲಾದ ಕಾರಣಗಳಿಂದ ಸ್ವಪ್ನ ಪದಾರ್ಥಗಳು ಸುಳ್ಳಲ್ಲ ಪಾರಮಾರ್ಥಿಕ ಸತ್ಯವೇ ಆದವುಗಳು. ಈ ವಿಷಯವನ್ನು ಕೋರ್ಟಿನವರು ವಿಚಾರಿಸಬೇಕೆಂದು ಪ್ರಾರ್ಥನೆ.



